ಬೆಳ್ಳಿ ಬಿಟ್ಟ ಬಳ್ಳಿ—13

# ಕನ್ನಡ ಪ್ರತಿಭಟನೆ ಕಾವ್ಯ

ಪ್ರಧಾನ ಸಂಪಾದಕ

ಹಂಪ. ನಾಗರಾಜಯ್ಯ

ಸಂಪಾದಕ

ಸಿ. ವೀರಣ್ಣ





ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ, ಬೆಂಗಳೂರು

ಕವಿ ಬದ್ಧನಾಗಿರಬೇಕೆಂದಾಗ ಅವನು ಎಡ ಕಮ್ಯುನಿಸ್ಟ್ ಪಕ್ಷದ ಸದಸ್ಯನಾಗಿ, ಅದರ ಘೋಷಣೆಗಳಿಗೆ ಮುಖವಾಣಿಯಾಗಬೇಕೆಂದು ತಿಳಿಯಬಾರದು. ಕವಿ ತನ್ನ ತಿಳುವಳಿಕೆಯ ಬೇರುಗಳನ್ನು ವೈಜ್ಞಾನಿಕವಾದ ಸಮಾಜ ವಿಶ್ಲೇಷಣೆಯ ತತ್ವದ ನೆಲೆಯಲ್ಲಿ ಊರಬೇಕೆಂದು ತಿಳಿಯಬೇಕು. ಕಾವ್ಯ, ಸಮಾಜವಿಚಾರಗಳನ್ನು ಕುರಿತೇ ಹುಟ್ಟುವುದಾದ್ದರಿಂದ, ಅದು ಬಳಸಿಕೊಳ್ಳಬಹುದಾದ ವಸ್ತುವಿನಲ್ಲಿರುವ ಮೂಲ ಘರ್ಷಣೆಗಳನ್ನು ಗುರುತಿಸಿಕೊಳ್ಳಲು ಈ ಬಗೆಯ ಬದ್ಧತೆಯಿಂದ ಸಾಧ್ಯವಾಗುತ್ತದೆ. ಕಾವ್ಯ ಸಮಾಜಬದ್ಧವಾಗಬೇಕೆಂಬುದು ಸಂಪ್ರದಾಯವಾದಿಗಳೂ ಪ್ರಗತಿಪರರೂ ಒಪ್ಪಿರುವ ವಿಚಾರವೇ! ಆದರೆ ಸಮಾಜದ ಬೆಳವಣಿಗೆಯ ದೃಷ್ಟಿಯಿಂದ, ಸಂಸ್ಕೃತಿಯ ಹೊಸ ಸೃಷ್ಟಿಗಾಗಿ ಯಾವುದು ಆರೋಗ್ಯಕರವೆಂದು ಗ್ರಹಿಸಿಕೊಳ್ಳದಿದ್ದರೆ, ಕಾಲ ಮುಂದಕ್ಕೆ ಹೋಗಿ ಕವಿ ಹಿಂದುಳಿಯುತ್ತಾನೆ. ಚರಿತ್ರೆ ಅವನನ್ನು ಅಣಕಿಸುತ್ತದೆ.

ಸಿ. ವೀರಣ್ಣ

ಬೆಳ್ಳಿ ಬಿಟ್ಟ ಬಳ್ಳಿ—13

# ಕನ್ನಡ ಪ್ರತಿಭಟನೆ ಕಾವ್ಯ

ಪ್ರಧಾನ ಸಂಪಾದಕ

ಹಂಪ. ನಾಗರಾಜಯ್ಯ

ಸಂಪಾದಕ

ಸಿ. ವೀರಣ್ಣ



ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ, ಬೆಂಗಳೂರು

"Kannada Pratibhatane Kavya"—An anthology of Kannada rebel poetry, edited by C. Veeranna, Centre of Kannada Studies, Bangalore University, published by Kannada Sahithya Parishath, Chamarajapet, Bangalore - 560 018 pages 72+480.



ಮೊದಲ ಮುದ್ರಣ 1981

ಬೆಲೆ : ಇಪ್ಪತ್ತು ರೂಪಾಯಿ

ಮುದ್ರಣ :

ಶ್ರೀ ಭಗವಾನ್ ಉದ್ಯಮ
81/82, ಗಾಂಧಿಬಜಾರ್
ಬೆಂಗಳೂರು – 560 004

# ಮುನ್ನುಡಿ

ಕನ್ನಡನಾಡಿನ ಬೇರೆ ಬೇರೆ ಭಾಗಗಳು ಒಂದು ಆಡಳಿತಕ್ಕೆ ಒಳಪಟ್ಟು ಕರ್ನಾಟಕ ಏಕೀಕರಣವಾದ 25 ವರ್ಷಗಳು ಈ ನವೆಂಬರ್ ತಿಂಗಳಿಗೆ ತುಂಬುತ್ತದೆ. ಕರ್ನಾಟಕ ರಾಜ್ಯೋತ್ಸವದ ರಜತೋತ್ಸವವನ್ನು ವಿಜೃಂಭಣೆಯಿಂದ ಎಲ್ಲೆಡೆಗಳಲ್ಲೂ ಆಚರಿಸಲಾಗುತ್ತಿದೆ.

ಕರ್ನಾಟಕ ಏಕೀಕರಣದ ಬೆಳ್ಳಿಹಬ್ಬವನ್ನು ಕನ್ನಡ ಸಾಹಿತ್ಯ ಪರಿಷತ್ತು ವ್ಯಾಪಕವಾಗಿಯೂ ವ್ಯವಸ್ಥಿತವಾಗಿಯೂ ಆಚರಿಸುತ್ತಿದೆ. ಅದರ ಸಂಬಂಧವಾಗಿ 'ಬೆಳ್ಳಿ ಬಿಟ್ಟ ಬಳ್ಳಿ'—ಎಂಬ ಹೆಸರಿನ ಒಂದು ಹೊಸ ಪ್ರಕಟನ ಮಾಲೆಯನ್ನು ಪರಿಷತ್ತು ಕೈಗೊಂಡಿದೆ. ಈ ಮಾಲೆಯಲ್ಲಿ ಒಂದು ನೂರಕ್ಕಿಂತ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಲಾಗುತ್ತಿದೆ. ಸಂಶೋಧನೆ, ಜನಪದ ಸಾಹಿತ್ಯ, ಗ್ರಂಥ ಸಂಪಾದನೆ, ವಿಮರ್ಶೆ, ಡಾಕ್ಟರೇಟ್ ಪ್ರಬಂಧ ಮೊದಲಾದುವನ್ನು ಈ ಮಾಲೆಯಲ್ಲಿ ಪ್ರಕಟಿಸಲಾಗುತ್ತಿದೆ. ಕರ್ನಾಟಕ ಸರ್ಕಾರದ ಉದಾರ ಸಹಾಯ ಈ ಮಾಲೆಗೆ ದೊರೆತಿರುವುದರಿಂದ ಈ ಮಾಲೆಯಲ್ಲಿ ಪ್ರಕಟಿಸುವ ಪುಸ್ತಕಗಳ ಬೆಲೆಯನ್ನು ಎಲ್ಲರಿಗೂ ಎಟಕುವಂತೆ ಇಡಲಾಗಿದೆ. ಕಡಮೆ ಬೆಲೆಯಲ್ಲಿ ಉತ್ತಮ ಗ್ರಂಥಗಳನ್ನು ಕನ್ನಡಿಗರಿಗೆ ಸಿಗುವಂತೆ ಸಹಾಯ ನೀಡಿದ ಕರ್ನಾಟಕ ಸರ್ಕಾರವನ್ನು ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ.

ಈ ಮಾಲೆಯಲ್ಲಿ ಪ್ರಕಟವಾಗುತ್ತಿರುವ 'ಕನ್ನಡ ಪ್ರತಿಭಟನೆ ಕಾವ್ಯ'ವನ್ನು ಸಂಪಾದಿಸಿ ಕೊಟ್ಟವರು ಸಿ. ವೀರಣ್ಣ ಅವರು. ಮನುಷ್ಯ ಚೇತನ ಸದಾ ಸ್ವಾತಂತ್ರ್ಯದೆಡೆಗೆ ತುಡಿಯುತ್ತಿರುತ್ತದೆ ಎನ್ನುವ ಮಾತು ಸುಳ್ಳಲ್ಲ. ಧರ್ಮ, ದೇವರು, ಜಾತಿ ಪಂಥ ಇವುಗಳಲ್ಲಿ ತುಂಬ ಶ್ರದ್ಧೆಯುಳ್ಳ ಮನುಷ್ಯನೂ ಸಹ, ಅದರಿಂದ ತನಗೆ ವೈಯಕ್ತಿಕವಾಗಿ ನೋವು ನಷ್ಟಗಳಾದಾಗ, ಸ್ವಾಭಿಮಾನಕ್ಕೆ ಪೆಟ್ಟು ಬಿದ್ದಾಗ, ತನ್ನವರಿಗೆ ತನ್ನ ಕಣ್ಣ ಮುಂದಿನ ಬಾಂಧವರಿಗೆ ದುಃಖ ಒದಗಿದಾಗ ತಾನು ನಂಬಿದ ಅವುಗಳನ್ನು ದೂಷಿಸದೆ ಇರುವುದಿಲ್ಲ. ಅವನ ಒಳಗಿನ ದನಿಯೊಂದು ಪ್ರತಿಭಟನೆ ಸೂಚಿಸದೆ ಸುಮ್ಮನಿರುವುದಿಲ್ಲ. ಇಂಥ ಅನಿವಾರ್ಯ ಸಹಜ ಪ್ರವೃತ್ತಿ

ಯನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಗೊಳಿಸಿರುವ ಪ್ರಸಂಗಗಳನ್ನು ಒಂದುಕಡೆ ಕೂಡಿಸುವ ಮೂಲಕ ಮನುಷ್ಯ ಚೇತನದಲ್ಲಿರುವ ಪ್ರತಿಭಟನಾ ಶಕ್ತಿಯನ್ನು ಎತ್ತಿತೋರಿಸುವ ಮಹೋದ್ದೇಶ ಈ ಸಂಕಲನದ್ದಾಗಿದೆ. ಕನ್ನಡ ಸಾಹಿತ್ಯದಲ್ಲಿ, ಪ್ರತಿಭಟನೆಯನ್ನೇ ಮೂಲ ಉದ್ದೇಶವನ್ನಾಗಿ ಮಾಡಿಕೊಂಡ ಇತ್ತೀಚಿನ ಸಾಹಿತ್ಯ ಚಳುವಳಿಯನ್ನು ಬಿಟ್ಟರೆ ವ್ಯವಸ್ಥೆಯ ವಿರುದ್ಧ ಸ್ಪಷ್ಟವಾಗಿ, ದಟ್ಟವಾಗಿ ದನಿಎತ್ತಿರು ವುದು ವಚನ ಸಾಹಿತ್ಯದಲ್ಲಿ. ಇಷ್ಟು ಬಿಟ್ಟರೆ ಪ್ರಾಚೀನ ಸಾಹಿತ್ಯದಲ್ಲಿ ಪ್ರತಿಭಟನೆಯ ಅಂಶ ಕಂಡುಬರುವುದು ಆಂಶಿಕವಾಗಿ; ಕವಿಯ ವೈಯಕ್ತಿಕ ಹಿತಾಸಕ್ತಿಗೆ ಧಕ್ಕೆ ಬಂದಾಗ, ತನ್ನ ಧರ್ಮದ ಹೆಗ್ಗಳಿಕೆಯನ್ನು ಎತ್ತಿಹಿಡಿಯುವಾಗ ಮುಂತಾದ ಸಂದರ್ಭಗಳಲ್ಲಿ ಮಾತ್ರ. ಧರ್ಮ, ಜಾತಿ, ರಾಜತ್ವದ ಬಗ್ಗೆ ತಮಗಿರುವ ಬೇಸರ ವನ್ನು ಕವಿಗಳು ಯಾವುದೋ ಸನ್ನಿವೇಶದಲ್ಲಿ, ಯಾವುದೋ ಪಾತ್ರದ ಬಾಯಲ್ಲಿ ತೋಡಿಕೊಂಡಿದ್ದಾರೆ. ನಮ್ಮ ಪ್ರಾಚೀನ ಕವಿಗಳು ರಾಜಾಶ್ರಯ ಇಲ್ಲವೆ ಧರ್ಮ ಶ್ರದ್ಧೆಯ ಸಂಕೋಲೆಗಳ ಒಳಗೇ ಸಾಹಿತ್ಯ ರಚಿಸಿರುವುದರಿಂದ ಈ ಕ್ಷಣಿಕವಾದ ಬಂಡಾಯ ಪ್ರವೃತ್ತಿಯೂ ಸ್ವಾಗತಾರ್ಹವೇ ಆಗಿದೆ.

ಆದರೆ ಹೊಸಗನ್ನಡ ಸಾಹಿತ್ಯದ ಆರಂಭದಲ್ಲಿ ಚಿತ್ರ ಬೇರೆಯೇ ಆಗುತ್ತದೆ. ಇಪ್ಪತ್ತನೇ ಶತಮಾನದ ಆರಂಭದ ಕೆಲವು ಕವಿಗಳಂತೂ ಅಪೂರ್ವವಾದ ಸಾಮಾಜಿಕ ಎಚ್ಚರದಿಂದ ಕಾವ್ಯ ರಚಿಸಿದ್ದಾರೆ. ಇನ್ನು ಸ್ವಾತಂತ್ರ್ಯ ಹೋರಾಟವಂತೂ ಕವಿ ಗಳಿಗೆ ಪ್ರತಿಭಟನೆಯ ಸ್ಫೂರ್ತಿಯನ್ನು ತುಂಬಿದೆ. ರಷ್ಯನ್ ಕ್ರಾಂತಿಯು ಇಲ್ಲೊಂದು ಸಾಹಿತ್ಯಿಕ ಪಂಥವನ್ನೇ ಹುಟ್ಟುಹಾಕಿದರೂ ಆ ಪಂಥೀಯರಿಂದ ಗದ್ಯಕ್ಕೆ ಸಿಕ್ಕಷ್ಟು ಒಳ್ಳೆಯ ಕಾಣಿಕೆ ಪದ್ಯಕ್ಕೆ ಸಿಕ್ಕಿಲ್ಲ. ಆ ಪಂಥೀಯರಲ್ಲದ ಅನೇಕ ಕವಿಗಳೂ ನೊಂದವರ, ಶೋಷಿತರ ಪರವಾಗಿ ಬರೆದಿದ್ದಾರೆ. ಹಾಗೆ ಬೀಸಿದ ಗಾಳಿಗೆ ತಮ್ಮನ್ನು ಒಡ್ಡಿಕೊಂಡ ಕೆಲವರು ನಿಜಕ್ಕೂ ಉತ್ತಮ ಕವನಗಳನ್ನು ನೀಡಿದ್ದಾರೆ. ಅಂಥವು ಈ ಸಂಕಲನದ ಮೌಲ್ಯವನ್ನು ಹೆಚ್ಚಿಸಿವೆ.

ನವ್ಯಕಾವ್ಯ ಹೆಚ್ಚು ಅಂತರ್ಮುಖಿಯಾಗಿದ್ದರೂ ವ್ಯವಸ್ಥೆಯ ಲೋಪದೋಷ ಗಳು ಆ ಪಂಥದ ಕವಿಗಳ ಮನಸ್ಸನ್ನು ತಟ್ಟಿವೆ. ನವ್ಯರಲ್ಲಿ ಅನೇಕರು ತಮ್ಮ ಕಾವ್ಯ ರಚನೆಯ ಆರಂಭದಲ್ಲಿ ಬರೆದ ಪದ್ಯಗಳು ಸಮಾಜಪರ, ಶೋಷಿತಪರವಾದ ನಿಲುವನ್ನು ಒಡೆದು ತೋರಿಸುತ್ತವೆ.

ಇನ್ನು ಸಾಹಿತ್ಯ ಪ್ರಮುಖವಾಗಿ ಜೀವನಪರವಾದ ದೃಷ್ಟಿಕೋನವನ್ನು ಹೊಂದಿರಬೇಕು ಎಂಬ ಆಶಯವನ್ನುಳ್ಳ ಬಂಡಾಯ, ದಲಿತ ಸಾಹಿತ್ಯಗಳಂತೂ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನೇ ತಮ್ಮ ಮೂಲಸ್ಥಾಯಿಯನ್ನಾಗಿ ಮಾಡಿ ಕೊಂಡಿವೆ. ಶೋಷಿತರ, ದಬ್ಬಾಳಿಕೆಗೊಳಗಾದವರ ನೋವು ಮೊದಲಬಾರಿಗೆ

ಕಾವ್ಯದಲ್ಲಿ ಕಾಣಿಸಿಕೊಂಡಿದೆ. ಆದರ ವೈವಿಧ್ಯಮಯ ದನಿಗಳು ಈ ಸಂಕಲನದಲ್ಲಿ ಸೇರಿವೆ. (ಸಂಘಟನೆಯ ತಾತ್ವಿಕ ಕಾರಣಗಳಿಗಾಗಿ ಬಂಡಾಯ ಮತ್ತು ದಲಿತ ಸಾಹಿತಿಗಳಲ್ಲಿ ಕೆಲವರು ತಮ್ಮ ಕವನಗಳನ್ನು ಈ ಸಂಕಲನದಲ್ಲಿ ಸೇರಿಸಿಕೊಳ್ಳಲು ಅನುಮತಿ ನೀಡಲಿಲ್ಲ.)

ಪ್ರತಿಭಟನೆ ಕಾವ್ಯ ಎಂದರೆ ಕೇವಲ ಧಿಕ್ಕಾರ ಹಾಕುವ ಪದ್ಯಗಳು ಮಾತ್ರ ಅಲ್ಲ. ನೊಂದವರ, ಶೋಷಿತರ ಬದುಕಿನ ಬಗ್ಗೆ ಕಣ್ಣು ಹಾಯಿಸುವುದು ಕೂಡ ವ್ಯವಸ್ಥೆಯ ಬಗ್ಗೆ ಪ್ರತಿಭಟನೆ ತೋರಿಸುವುದಕ್ಕೆ ಪ್ರೇರಣೆ ನೀಡಬಹುದು. ಆದ್ದರಿಂದ ಒಟ್ಟಾರೆ ವ್ಯವಸ್ಥೆಯ ದೋಷಗಳಿಗೆ ಕನ್ನಡಿ ಹಿಡಿಯುವ ಜೀವನಪರವಾದ ಕವನಗಳೂ ಇಲ್ಲಿ ಹೆಚ್ಚು ಭಾಗವನ್ನು ಪಡೆದಿವೆ. ಭಾರತೀಯ ಭಾಷೆಗಳ ಅಷ್ಟೇಕೆ ವಿಶ್ವದ ಎಲ್ಲ ಭಾಷೆಗಳ ಸಾಹಿತ್ಯಗಳಲ್ಲೂ ಪ್ರತಿಭಟನೆಯ ಅಂಶ ಇದ್ದೇ ಇರುತ್ತದೆಯಾದರೂ ಅದನ್ನೇ ಸೂತ್ರವಾಗಿಟ್ಟುಕೊಂಡ ಸಮಗ್ರಸಂಕಲನ, ನನಗೆ ತಿಳಿದಮಟ್ಟಿಗೆ ಭಾರತೀಯ ಭಾಷೆಗಳಲ್ಲಿ ಇದೇ ಮೊದಲು. ಬೇರೆ ಭಾರತೀಯ ಭಾಷೆಗಳಲ್ಲೂ ಇಂಥದೊಂದು ಸಂಕಲನ ಇರುವುದಾದರೆ ಅಥವಾ ಬರುವುದಾದರೆ ತುಂಬ ಸ್ವಾಗತಾರ್ಹ. ಕನ್ನಡದಲ್ಲಿ ಬಂಡಾಯ, ದಲಿತ ಸಾಹಿತ್ಯ ಚಳುವಳಿಗಳು ಬೆಳೆಯುತ್ತಿರುವ ಈ ಸಂದರ್ಭದಲ್ಲಿ ಇಂಥದೊಂದು ಸಂಕಲನ ಎಷ್ಟು ಔಚಿತ್ಯಪೂರ್ಣ ಮತ್ತು ಅರ್ಥಪೂರ್ಣವಾದದ್ದು ಎನ್ನುವುದು ಎಲ್ಲರಿಗೂ ವೇದ್ಯ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ, ಮಹತ್ವದ ಮೈಲಿಗಲ್ಲಾಗುವ ಈ ಸಂಕಲನವನ್ನು ಶ್ರಮ, ಶ್ರದ್ಧೆಗಳಿಂದ ಸಂಪಾದಿಸಿಕೊಟ್ಟ ಸಿ. ವೀರಣ್ಣನವರಿಗೆ ಅಭಿನಂದನೆಗಳು.

**ಹಂಪ. ನಾಗರಾಜಯ್ಯ**
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು

# ಅರಿಕೆ

ಕನ್ನಡದಲ್ಲಿ ಅನೇಕ ಕಾವ್ಯಸಂಕಲನಗಳು ಬಂದಿದ್ದರೂ ಕನ್ನಡ ಪ್ರತಿಭಟನೆ ಕಾವ್ಯ ಅವುಗಳೆಲ್ಲಕ್ಕಿಂತ ಬೇರೆಯಾದದ್ದು ಮತ್ತು ಹೊಸದು. ಕಾವ್ಯವಸ್ತು ಮತ್ತು ಆಶಯವನ್ನು ಪ್ರಧಾನವಾಗಿಟ್ಟುಕೊಂಡ ಕಾವ್ಯಸಂಕಲನ ಇದೇ ಮೊದಲಲ್ಲವಾದರೂ ಪ್ರತಿಭಟನೆಯನ್ನು ಕೇಂದ್ರವಾಗಿಟ್ಟುಕೊಂಡು ಪ್ರಾಚೀನ ಕಾವ್ಯದಿಂದ ಹಿಡಿದು ಇತ್ತೀಚಿನ ಕಾವ್ಯದವರೆಗೆ ಆಯ್ದು ಕಾವ್ಯಸಂಕಲನ ತಂದಿರುವುದು ಇಲ್ಲಿನ ವೈಶಿಷ್ಟ್ಯ.

ಆಯ್ಕೆ ಮಾಡುವಾಗ ಕವಿಗಳ ಖ್ಯಾತಿ, ಮತ, ಗುಂಪು, ಜಾತಿ ಇವುಗಳಾವುದನ್ನೂ ಲೆಕ್ಕಹಾಕದೆ, ಆಯಾ ಕವಿಗಳ ಕಾವ್ಯದಲ್ಲಿ ವ್ಯಕ್ತವಾಗಿರುವ ಪ್ರತಿಭಟನೆಯ ಅಂಶಕ್ಕೇ ಪ್ರಾಶಸ್ತ್ಯ ನೀಡಿದ್ದೇನೆ. ಅದನ್ನೂ ಮೀರಿ ನನ್ನ ತಾತ್ವಿಕ ನಿಲುವನ್ನು ಅವಲಂಬಿಸಿಕೊಂಡೇ ಇಲ್ಲಿರುವ ಕಾವ್ಯವನ್ನು ಆಯ್ದುಕೊಳ್ಳಲಾಗಿದೆ ಎಂಬುದಂತೂ ಸ್ಪಷ್ಟವಾದ ವಿಚಾರ.

ಕನ್ನಡ ಜನಜೀವನದ ಬೇರೆ ಬೇರೆ ಕಾಲಘಟ್ಟಗಳಲ್ಲಿ ಪ್ರತಿಭಟನೆಯ ಸೆಲೆ ಏನೆಲ್ಲ ವೈವಿಧ್ಯಮಯವಾಗಿ ಇದೆ ಎಂಬುದರ ಚಾರಿತ್ರಿಕ ಬೆಳವಣಿಗೆಯ ನೋಟ ಈ ಸಂಕಲನದಲ್ಲಿ ದೊರೆಯುತ್ತದೆ. ಇಂತಹುದೊಂದು ಸಂಕಲನವನ್ನು ಹೊರತರಲು ಅನುಮತಿ ನೀಡಿದ ಕವಿಗಳಿಗೆ ನಾನು ಕೃತಜ್ಞನಾಗಿದ್ದೇನೆ.

ಬಹಳ ವರ್ಷಗಳಿಂದ ನನ್ನ ಮನಸ್ಸಿನಲ್ಲಿದ್ದ ಈ ಯೋಜನೆಯನ್ನು ಪ್ರೋತ್ಸಾಹಿಸಿ, ಕಾರ್ಯಗತಗೊಳಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಹಂಪ. ನಾಗರಾಜಯ್ಯನವರಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು ಸಲ್ಲುತ್ತವೆ.

ಸಿ. ವೀರಣ್ಣ

# ಪ್ರಸ್ತಾವನೆ

## ಕನ್ನಡ ಕಾವ್ಯದ ಚಾರಿತ್ರಿಕಗತಿಗಳು

ಕನ್ನಡ ಪ್ರತಿಭಟನೆ ಕಾವ್ಯ ಎಂದಾಗ ಕೆಲವರಿಗೆ ಕನ್ನಡ ಕಾವ್ಯದಲ್ಲಿ ಪ್ರತಿಭಟನೆ ಎಲ್ಲಿಂದ ಬಂತು ಎಂಬ ಅನುಮಾನವನ್ನು ಹುಟ್ಟಿಸಿದರೆ, ಮತ್ತೆ ಕೆಲವರಿಗೆ ಕನ್ನಡ ಕಾವ್ಯವೆಲ್ಲವೂ ಪ್ರತಿಭಟನೆಯಲ್ಲವೆ ಎನ್ನುವ ಪ್ರತಿಕ್ರಿಯೆಯನ್ನೂ ಉಂಟು ಮಾಡಬಹುದು. ಆದರೆ ಈ ಎರಡೂ ರೀತಿಯ ಅಭಿಪ್ರಾಯಗಳ ಹೊರಗೇ ವಸ್ತುಸ್ಥಿತಿ ಇದೆ ಎನ್ನುವುದನ್ನು ಮನಗಾಣಿಸುವುದೇ ಈ ಸಂಕಲನದ ಉದ್ದೇಶ. ಕನ್ನಡ ಕಾವ್ಯದ ಚಾರಿತ್ರಿಕ ಬೆಳವಣಿಗೆಯನ್ನು ಗಮನದಲ್ಲಿರಿಸಿಕೊಂಡು, ಆಯಾ ಕಾಲಧರ್ಮದಲ್ಲಿ ರೂಪಗೊಂಡ ಕಾವ್ಯದಲ್ಲಿ ವ್ಯಕ್ತವಾಗಿರಬಹುದಾದ ಜೀವನದ ಬೆಳವಣಿಗೆಯನ್ನು ಗುರುತಿಸುವುದಕ್ಕೂ ಈ ಸಂಕಲನದಲ್ಲಿರುವ ಕಾವ್ಯ ಸಹಾಯ ಮಾಡುತ್ತದೆ. ಕಾವ್ಯವೆಂದರೆ ಕವಿಪ್ರತಿಭೆಯಲ್ಲಿ ಮೂಡಿಬಂದ ಕವಿಯ ಅಂತರ್‌ದರ್ಶನ, ಅದು ಲೋಕಾತೀತ ಎಂಬ ನೆಲೆಯಲ್ಲಿ ನಿಂತು ಮಾತನಾಡುವ ಕಾವ್ಯಜಿಜ್ಞಾಸುಗಳೇ ಹೆಚ್ಚಾಗಿರುವ ಈ ಸಂದರ್ಭದಲ್ಲಿ, ಕವಿ ಸಮಾಜಜೀವಿ, ಅವನು ಸೃಷ್ಟಿಸಿದ ಕಾವ್ಯ, ಸಾಮಾಜಿಕನೊಬ್ಬನ ಸೃಷ್ಟಿ ಎನ್ನುವ ನಿಲುವು ಅಪ್ರಿಯವಾಗಿ ತೋರಬಹುದು. ಆದರೆ ಕವಿ ಅಥವಾ ಯಾವುದೇ ಕಲಾವಿದನಿಗೆ ಮೂಲ ಸೆಲೆನೆಲೆ ಸಮಾಜವೇ. ಸಮಾಜದ ಸಂಬಂಧವಿಲ್ಲದೆ ಕವಿಪ್ರಜ್ಞೆ ಶೂನ್ಯದಿಂದ ಬಂದದ್ದಲ್ಲ. ಪ್ರಜ್ಞೆಗೆ ಮೂಲವಾದ ಸಮಾಜದ ಸ್ವರೂಪವೇ ಅದನ್ನು ಗ್ರಹಿಸಿದ ಕವಿಮನಸ್ಸಿನಲ್ಲಿ ವಿಶ್ಲೇಷಿತ ಸ್ವರೂಪದಲ್ಲಿ ಅಭಿವ್ಯಕ್ತಿಗೊಂಡಿರುತ್ತದೆನ್ನುವುದು ವಾಸ್ತವ ಸಂಗತಿ. ಇಂತಹ ಅಭಿವ್ಯಕ್ತಿಯಲ್ಲಿನ ವಸ್ತು ಕಾಲಾತೀತವಾದದ್ದೋ, ಲೋಕಾತೀತವಾದದ್ದೋ ಆಗಿರುವುದಕ್ಕೆ ಬದಲಾಗಿ, ಆಯಾಕಾಲದ ಸಾಮಾಜಿಕ ಸ್ವರೂಪದಲ್ಲಿನ ವಿವಿಧ ವಲಯಗಳಿಂದ ಮೂಡಿಬಂದುದಾಗಿರುತ್ತದೆ.

ಇದರಿಂದ ಸ್ಪಷ್ಟವಾಗುವ ಒಂದು ಅಂಶವೆಂದರೆ, ಚರಿತ್ರೆಯಿಂದ ಸಾಹಿತ್ಯ ಚರಿತ್ರೆಯನ್ನು, ಸಾಹಿತ್ಯ ಚರಿತ್ರೆಯಿಂದ ಸಾಹಿತ್ಯವನ್ನು ಪರಿಶೀಲಿಸುವ ಅಗತ್ಯದ ಅರಿವು ಸಾಹಿತ್ಯ ವಿಮರ್ಶಕನಿಗೆ ಬರಬೇಕೆಂಬುದೇ ಆಗಿದೆ. ಹೀಗೆ ಚರಿತ್ರೆಯಿಂದ

ಸಾಹಿತ್ಯ ಚರಿತ್ರೆಯನ್ನು ಗಮನಿಸಿದರೆ, ಆದಿಮಾನವನ ಕಾಲದಲ್ಲಿ ಹುಟ್ಟಿದ ಕಾವ್ಯ ಸ್ವರೂಪಕ್ಕೂ, ವರ್ಗಸಮಾಜದಲ್ಲಿ ಹುಟ್ಟಿರುವ ಕಾವ್ಯದ ಸ್ವರೂಪಕ್ಕೂ ಇರುವ ವ್ಯತ್ಯಾಸದ ಕಾರಣಗಳು ವ್ಯಕ್ತಿಗಳ ಇಷ್ಟಾನಿಷ್ಟಗಳನ್ನವಲಂಬಿಸಿದವುಗಳಾಗಿರದೆ ಆಯಾಕಾಲದ ಚಾರಿತ್ರಿಕ ಸಂದರ್ಭಗಳ ಹೊಟ್ಟೆಯಲ್ಲಿ ಹುಟ್ಟಿದವುಗಳಾಗಿರುವುದನ್ನು ನಾವು ಮನಗಾಣಬಹುದು. ವರ್ಗರಹಿತ ಸಮಾಜದಲ್ಲಿ ಬದುಕಿದ್ದ ಪ್ರಾಚೀನ ಮಾನವನಿಗೆ ಶ್ರಮದ ಪರಿಣಾಮವಾಗಿ ಹುಟ್ಟಿದ ಜೀವನಚಟುವಟಿಕೆಗಳಲ್ಲಿ ಭಾಷೆಯೂ ಒಂದು. ಈ ಭಾಷೆಯಲ್ಲಿ ಹುಟ್ಟಿದ ಆದಿಮಾನವನ ಕಾವ್ಯ, ಸಮೂಹ ಸೃಷ್ಟಿಶಕ್ತಿಯ ಪ್ರತಿನಿಧಿಯಾಗಿತ್ತು. ಶ್ರಮವಿಭಜನೆಯಿಲ್ಲದ, ಗಂಡು ಹೆಣ್ಣುಗಳ ನಡುವೆ ವ್ಯತ್ಯಾಸವಿಲ್ಲದಿದ್ದ ಆ ಸಮಾಜದಲ್ಲಿ ಕಾವ್ಯ, ಬದುಕಿನ ಒಂದು ಭಾಗವಾಗಿ ಹುಟ್ಟಿತ್ತು. ಮನುಷ್ಯ ಪ್ರಕೃತಿಯ ಮೇಲೆ ಹೋರಾಟ ಮಾಡಿ ಸೋತ ಸಂದರ್ಭಗಳಲ್ಲಿ, ಅವನ ಒತ್ತಾಸೆಯಾಗಿ, ಶಕ್ತಿ ಕೊಡುವ ಕೂಗಾಗಿ ಧ್ವನಿಸಿತ್ತು. ಇದು ಬಹಳ ಕಾಲದವರೆಗೆ ನಡೆದು ಬಂತೆಂದು ಕಾಣುತ್ತದೆ. ಈ ಕಾಲದಲ್ಲಿ ಕಾವ್ಯ ಒಟ್ಟು ಸಮುದಾಯದ ಪ್ರತಿನಿಧಿಯಾಗಿತ್ತು. ಮನುಷ್ಯ ವ್ಯವಸಾಯವನ್ನು ಕಂಡುಕೊಂಡು ಅಲೆಮಾರಿ ಜೀವನವನ್ನು ಕಳೆದುಕೊಂಡ ಕೂಡಲೇ ಶ್ರಮ ವಿಭಜನೆ–ತನ್ಮೂಲಕ ವೃತ್ತಿ ವಿಭಜನೆಗೆ ದಾರಿಯಾಯಿತು. ಒಂದು ಗುಂಪಿನ ಜನ ಮತ್ತೊಂದು ಗುಂಪಿನವರನ್ನು ಹಿಡಿದು ತಮ್ಮ ದಾಸರನ್ನಾಗಿ ಮಾಡಿಕೊಂಡು ಅವರಿಂದ ದುಡಿಸಿಕೊಂಡು ಊಟ ಮಾಡುವ ಕಾಲಕ್ಕೆ ಸಮಾಜದಲ್ಲಿದ್ದ ಏಕತೆ ಒಡೆದು ಇಬ್ಭಾಗವಾಯಿತು. ಕೂತು ಕೆಲಸ ಮಾಡದೆ ಕಾಲ ಕಳೆಯುತ್ತಿದ್ದ ಅಲ್ಪಸಂಖ್ಯಾತರ ಗುಂಪು ಆಳುವವರಾಗಿ, ಬೇರೆ ಬೇರೆ ವಿಷಯಗಳತ್ತ ತಮ್ಮ ಗಮನ ಹರಿಸಿದರು. ಇಲ್ಲಿಯವರೆಗೆ ದುಡಿಮೆಯಲ್ಲಿ ಹೇಗೋ ಹಾಗೇ ಕಾವ್ಯವೇ ಮುಂತಾದ ಸಾಂಸ್ಕೃತಿಕ ವಿಚಾರಗಳಲ್ಲಿ ಸಮಾನತೆಯನ್ನು ಪಡೆದಿದ್ದ ಬಹುಸಂಖ್ಯಾತ ಜನ ಈ ಕಾಲದಲ್ಲಿ ಅದನ್ನು ಕಳೆದುಕೊಂಡರು. ಭಾರತದಲ್ಲಿ 'ದಾಸಪದ್ಧತಿ'ಯ ದಾಖಲಾತಿಯನ್ನೊದಗಿಸುವ ಕಲಾಕೃತಿಗಳು, ಕಾವ್ಯಗಳು ಸಾಕಷ್ಟಿವೆ. ನಮಗಿಂತ ಹೆಚ್ಚಾಗಿ ಗ್ರೀಕ್ ಮತ್ತು ರೋಮ್‌ನಲ್ಲಿ ಈ ದಾಸಪದ್ಧತಿಯ ಕೆನೆಯಾಗಿ ಜಗದ್ವಿಖ್ಯಾತ ಸಂಸ್ಕೃತಿ ರೂಪ ತಳೆಯಿತು. ಆ ಕಾಲದ ಅಲ್ಲಿನ ನಾಟಕಕಾರರ ನಾಟಕಗಳಲ್ಲಿ ಮತ್ತಿತರ ಕಲಾಮಾಧ್ಯಮಗಳಲ್ಲಿ ವ್ಯಕ್ತವಾಗಿರುವುದು ಇಂತಹ ಸಮಾಜದ ಚಿತ್ರವೇ ಆಗಿದೆ.

ದಾಸ ಪದ್ಧತಿಯಲ್ಲಿ ಪ್ರಭುವಾಗಿ ಬೆಳೆದವನ ಸುತ್ತ ಸಂಸ್ಕೃತಿಯ ಬೆಳವಣಿಗೆಯಾಯಿತು. ಈ ಸಂದರ್ಭದಲ್ಲಿ ದಾಸನಾಗಿದ್ದವನಿಗೆ ಅವನ ಜೀವದ ಮೇಲೂ ಸ್ವಾತಂತ್ರ್ಯವಿರಲಿಲ್ಲ. ಆದರೆ ಹಿಟ್ಟು ಬಟ್ಟೆಗಳಿಗೆ, ಗಟ್ಟಿಗಿರುವವರೆಗೆ ಒಬ್ಬ ಒಡೆಯನಿಂದ ಮತ್ತೊಬ್ಬನಿಗೆ ಮಾರಾಟವಾಗುತ್ತಾ, ಕೊಂದರೆ ಸಾಯಬೇಕಾಗುತ್ತಿತ್ತು. ಇಂತಹ ಅಮಾನುಷದೌರ್ಜನ್ಯದ ವಿರುದ್ಧ ಕ್ರಿಸ್ತಪೂರ್ವದಲ್ಲಿ ಸ್ಪಾರ್ಟಕಸ್‌ನ

ನಾಯಕತ್ವದಲ್ಲಿ ನಡೆದ ಹೋರಾಟವೂ, ಸ್ವತಃ ಕ್ರಿಸ್ತನೇ ನಡೆಸಿದ ಹೋರಾಟಗಳೂ, ಆ ಸಮಾಜದೊಳಗೇ ಹುಟ್ಟುತ್ತಿದ್ದ ಹೊಸ ವ್ಯವಸ್ಥೆಗೆ ನಾಂದಿ ಹಾಡಿದವು. ಜಮೀನಿನ ಒಡೆಯ ರಾಜನಾಗಿದ್ದರೂ, ಅವನ ಕೈಕೆಳಗಿದ್ದ ನಾಡಪ್ರಭುಗಳು ನೇರವಾದ ಒಡೆಯರಾಗಿ, ದಾಸರುಗಳಿಗಾಗಿ ಮಾರಾಟದ ಪೈಪೋಟಿಯನ್ನು ಹುಟ್ಟಿಸಿದರು. ದಾಸಪದ್ಧತಿಯಲ್ಲೇ ವ್ಯವಸಾಯ ಮತ್ತು ಕೈಗಾರಿಕೆಗಳ ನಡುವೆ ಶ್ರಮ ವಿಭಜನೆಯೂ ನಡೆದು, ಆಳುವವರ್ಗ ಈ ಎರಡೂ ಉತ್ಪಾದನೆಯ ಫಲವನ್ನು ತಮ್ಮದನ್ನಾಗಿಸಿಕೊಂಡಿತು. ಈ ಆಳುವವರ್ಗದ ಆವಿಷ್ಕಾರದ ಫಲವಾಗಿ ಸಾಮೂಹಿಕವಾಗಿದ್ದ 'ಪುರಾಣ' ಮಹಾಕಾವ್ಯವಾಗಿ, ಆಚರಣೆ, ನಾಟಕವಾಗಿ ರೂಪತಳೆದವು. ಎಲ್ಲ ದೇಶಗಳ ಪ್ರಾಚೀನ ಮಹಾಕಾವ್ಯಗಳೂ ಜನತೆಯ ಸಾಮೂಹಿಕ ದೃಷ್ಟಿಯ 'ನಿಧಿ'ಯನ್ನು ಬಳಸಿಕೊಂಡೇ ಜನ್ಮತಳೆದವು. ಈ ಕಾಲಕ್ಕೆ ಆಳುವ ವರ್ಗ ಶ್ರಮದಿಂದ ದೂರವಾದುದರಿಂದ ವಾಸ್ತವತೆಯಿಂದಲೂ ದೂರವಾಗಿ, ಆಲೋಚನೆ, ಸುಖ ಸಂಸ್ಕೃತಿಗಳತ್ತ ಗಮನ ಹರಿಸಿತು. ಶೋಷಿತರು ವಿಚಾರದಿಂದ ವಿಮುಖರೂ, ಶ್ರಮಿಕರೂ ಆಗುತ್ತಾ ಹೋದರು. ಈ ಕಾಲದಲ್ಲಿ ಪ್ರಭುವಿನ ಪಾದಸೇವಕರಾಗಿ, ಅವನಿಗೆ, ಅವನನ್ನು ಬೆಳೆಸಬೇಕಾದ ತಮ್ಮಂತವರಿಗೆ, ಮಾತ್ರ ಸೇವೆ ಸಲ್ಲಿಸುವ ಅಲ್ಪ ಸಂಖ್ಯೆಯ ಬುದ್ಧಿಜೀವಿಗಳ ವರ್ಗವೂ ಬೆಳವಣಿಗೆ ಪಡೆಯಿತು. ಅವರು ರಚಿಸಿದ ಕಾವ್ಯಗಳಲ್ಲಿ ಪ್ರಧಾನ ಆಶಯ ಆಳುವವರನ್ನು ಸಮರ್ಥಿಸಿ ಬೆಳೆಸುವುದೇ ಆದರೂ, ಅದೇ ಕಾಲದಲ್ಲಿದ್ದ ಕ್ರಿಯಾತ್ಮಕ ಶಕ್ತಿಯಾದ ಬಹುಪಾಲು ಜನರ ಬದುಕು ಅವುಗಳಲ್ಲಿ ಪ್ರತಿಫಲಿತವಾಗುವುದು ಅನಿವಾರ್ಯವಾಯಿತು.

ಉತ್ಪಾದನಾ ಉಪಕರಣಗಳ ಸುಧಾರಣೆಯಿಂದಾಗಿ, ಹೆಚ್ಚು ಕಾಲ ತೆಗೆದುಕೊಳ್ಳದೆ ಮೊದಲಿಗಿಂತ ಹೆಚ್ಚು ಬೆಳೆಯಲು ಈಗ ಸಾಧ್ಯವಾಗಿತ್ತು. ಪೂರ್ಣ ಹೊಣೆಗಾರಿಕೆಗಿಂತ ಜೀತ ರೂಪದಲ್ಲಿ ದುಡಿಸಿಕೊಳ್ಳುವುದು ಹೆಚ್ಚು ಲಾಭದಾಯಕವಾಗಿ ಕಂಡಿತು. ಹೀಗೆ ಸುಲಭವಾದ ಹೆಚ್ಚುಗಳಿಕೆ ಮತ್ತು ಅರಸರಿಂದ ಬಿಡುಗಡೆಯನ್ನು ಪಡೆಯುವುದಕ್ಕೆ, ಜಮೀನುದಾರರು ಮತ್ತು ಜಮೀನುದಾರರಂತಿದ್ದ ಮಠಗಳು ಒಂದಾಗಿ ಹೋರಾಟ ನಡೆಸಿ, ಅರಸನಿಗೆ ಶಕ್ತಿಗುಂದಿಸಿದವು. ಇದೇ ಸಂದರ್ಭದಲ್ಲಿ ದಾಸನಾಗಿದ್ದವನಿಗೆ ಅದರಿಂದ ಬಿಡುಗಡೆ ದೊರೆತು, ಜೀವಮಾನವೆಲ್ಲಾ ದುಡಿಯುವ, ಆದರೆ ಮೊದಲಿದ್ದ ಅನ್ನ ವಸತಿಗಳ ಖಾತರಿ ಇಲ್ಲದಂತಹ ಸ್ಥಿತಿ ಲಭಿಸಿತು. ಇಷ್ಟಾದರೂ ಮೊದಲಿದ್ದದ್ದಕ್ಕಿಂತ ಬೇರೆಯಾಗಿ ಬದುಕುವ ಅವಕಾಶ ದೊರೆಯಿತು. ಈ ಊಳಿಗ ಮಾನ್ಯ ವ್ಯವಸ್ಥೆಯಲ್ಲಿ ಜಮೀನುದಾರರು, ಪಾಳೆಯಗಾರರು, ಅರಸರ ಭದ್ರ ಆಧಾರಗಳಾದರು. ಇವರು ಆಗ ತಾನೆ ಪ್ರವರ್ಧಮಾನಕ್ಕೆ ಬರುತ್ತಿದ್ದ ಕುಶಲ ಕೆಲಸಗಾರರನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದರು. ವರ್ಷವಿಡೀ ದುಡಿದು 'ಆಯ'ದ ಮೂಲಕ ಈ ಕೆಲಸಗಾರರು ಬದುಕಬೇಕಾಗಿತ್ತು. ಕಾವ್ಯ ಮತ್ತು ಕಲೆ

ಗಳು ಈಗಲೂ ಪ್ರಧಾನವಾಗಿ ಆಳುವ ಸ್ವಾಮಿಯ ಸುತ್ತ ಮತ್ತು ಅವನ ಆಧಾರ ಸ್ತಂಭಗಳಾದ ಜಮೀನುದಾರರು ಮತ್ತು ಪಾಳೇಗಾರರನ್ನು ಆಶ್ರಯಿಸಿಕೊಂಡು ಬದುಕಬೇಕಾಗಿತ್ತು. ದಾಸ ಪದ್ಧತಿಯಲ್ಲಿ ಕೆಲವೇ ಜನ ಬುದ್ಧಿಜೀವಿಗಳಿದ್ದದ್ದು ಈ ವ್ಯವಸ್ಥೆಯಲ್ಲಿ ಅವರ ಸಂಖ್ಯೆ ಹೆಚ್ಚಿತು. ಇಷ್ಟಾದರೂ ಆಶ್ರಯವಿಲ್ಲದೆ ಬದುಕುವುದು ಈ ವರ್ಗಕ್ಕೆ ಸಾಧ್ಯವಿರಲಿಲ್ಲ. ಮತ ಮತ್ತು ಮಠಗಳು ಈ ವಲಯದಲ್ಲೇ ತಮ್ಮ ಹೆಚ್ಚುಗಾರಿಕೆಗಾಗಿ ಪ್ರಭುವಿನ ವಿರುದ್ಧ ಹೋರಾಡುತ್ತ, ಕೆಲವು ಸಲ ಸಮಗೌರವ ವನ್ನು ಒಪ್ಪಿಕೊಳ್ಳುತ್ತ ಬದುಕಿದ್ದವು. ಇಲ್ಲೂ ಕೂಡ ಸಮಾಜದ ಬಹುಪಾಲು ಜನ, ವಿಚಾರ ಸಂಸ್ಕೃತಿ, ಕಲೆಗಳಿಂದ ದೂರವಾಗಿಯೇ ಉಳಿದಿದ್ದರು.

ಈ ಊಳಿಗಮಾನ್ಯ ಅಥವಾ ಜಮೀನ್ದಾರಿಯುಗದಲ್ಲಿ ನಿರ್ಮಾಣಗೊಂಡ ಕಾವ್ಯದ ಆಶಯಗಳು ಆ ಯುಗದ ಆಳುವ ವರ್ಗ ಸೃಷ್ಟಿಸಿದ್ದ ಜೀವನಮೌಲ್ಯಗಳೇ ಆದುವು. ಅಂದರೆ ಆ ಕಾಲದ ಸಾಹಿತ್ಯ ಕೃತಿಗಳು ಪ್ರಜ್ಞಾಪೂರ್ವಕವಾಗಿಯೋ, ಅಪ್ರಜ್ಞಾಪೂರ್ವಕವಾಗಿಯೋ, ಆ ಬರಹಗಾರ ಪ್ರತಿನಿಧಿಸುವ ವರ್ಗದ ಮಾನಸಿಕ ರೂಪವನ್ನು ಬಿಂಬಿಸುತ್ತವೆ. ಅಷ್ಟೇ ಅಲ್ಲದೆ ಕೆಲವು ಸಲ ಬರಹಗಾರನ ಸುತ್ತ ಪ್ರಭಾವ ಬೀರಿದ ಇತರ ವರ್ಗಗಳ ಮಾನಸಿಕ ಅಂಶಗಳ ಮಿಶ್ರಣವೂ ಆಗಿರುವ ಸಂಭವವಿದೆ ನಮ್ಮ ಪ್ರಾಚೀನ ಕಾವ್ಯಗಳಲ್ಲಿ ಈ ಎರಡೂ ಅಂಶಗಳನ್ನು ನಾವು ಕಾಣಬಹುದು. ಈ ಊಳಿಗಮಾನ್ಯ ಸಮಾಜ ಸ್ಥಿತಿಯಲ್ಲೂ ಕಲಾವಿದ ಸ್ವತಂತ್ರ ನಾಗಿರಲು ಅವಕಾಶವಿರದೆ, ಆಶ್ರಿತನಾಗಿ ಬದುಕನ್ನು ನೀಗಬೇಕಾಗಿತ್ತು. ಈ ಪದ್ಧತಿಯ ಜೊತೆಯಲ್ಲೇ ಹುಟ್ಟಿದ ಕುಶಲ ವಸ್ತುಗಳ ತಯಾರಿಕೆ ಮುಂದುವರೆದಂತೆ, ಹೊಸ ದೇಶಗಳಿಗೆ ಜಲಮಾರ್ಗಗಳನ್ನು ಕಂಡುಕೊಂಡದ್ದರಿಂದ ವಿನಿಮಯದ ಅವಕಾಶಗಳೂ ಹೆಚ್ಚಿದವು. ತಮ್ಮ ಅಗತ್ಯಕ್ಕೆ ತಕ್ಕಷ್ಟು ಉತ್ಪಾದಿಸುತ್ತಿದ್ದವರು ಈಗ ಮಾರುವುದಕ್ಕಾಗಿ ವಸ್ತುಗಳನ್ನು ತಯಾರಿಸಲಾರಂಭಿಸಿದರು. ಇವುಗಳ ಶೀಘ್ರ ವಿನಿಮಯಕ್ಕಾಗಿ ವ್ಯಾಪಾರಿಗಳ ಬೆಳವಣಿಗೆ ಹೆಚ್ಚಿತಲ್ಲದೆ ಇದುವರೆಗೆ ಜಮೀನುದಾರರು ಮತ್ತು ಅರಸರ ಹಿಡಿತದಲ್ಲಿದ್ದ ಕುಶಲ ಕರ್ಮಿಗಳನ್ನು ಅವರ ಹಿಡಿತದಿಂದ ಬಿಡಿಸಿ, ಈ ವ್ಯಾಪಾರಿಗಳು ತಮ್ಮ ಹತೋಟಿಗೆ ತಂದುಕೊಂಡರು.

ವ್ಯಾಪಾರ, ವಾಣಿಜ್ಯಗಳು ಹೆಚ್ಚಿದಂತೆ ಬಂಡವಾಳ ತೀವ್ರಗತಿಯಲ್ಲಿ ಬೆಳವಣಿಗೆ ಯಾಗಿ, ಕೈಕಸುಬುದಾರರು ಹೆಚ್ಚಾಗಿ ವರ್ತಕರನ್ನವಲಂಬಿಸಿ ಬದುಕಬೇಕಾಯಿತು. ಈ ಬದಲಾವಣೆಯಿಂದಾಗಿ ಊಳಿಗಮಾನ್ಯ ಸಮಾಜ ನಶಿಸಿ ಹೋಗುತ್ತ ಬಂಡವಾಳ ಷಾಹಿ ಸಮಾಜ ಬೆಳೆಯತೊಡಗಿತು. ಈ ಸ್ಥಿತಿಯಲ್ಲಿ ಗುಲಾಮ ಜೀತಗಾರನಾಗಿದ್ದ ವನಿಗೆ ಆ ಸ್ಥಿತಿಯಿಂದ ಬಿಡುಗಡೆ ದೊರೆಯಿತು. ಆದರೆ ಉತ್ಪಾದನಾ ಸಾಧನ ಮತ್ತು ಬಂಡವಾಳಗಳೆರಡೂ ಬಂಡವಾಳಗಾರನ ಹಿಡಿತದಲ್ಲಿಯೇ ಉಳಿದದ್ದರಿಂದ,

ಕೂಲಿಕಾರನಿಗೆ ತನ್ನ ಶ್ರಮವನ್ನು ಮಾರಿ ಬದುಕುವುದು ಅನಿವಾರ್ಯವಾಯಿತು. ವ್ಯಕ್ತಿಗತ ಗುಲಾಮತನ ಕಳಚಿ ಹೋಗಿ ವೇತನಕ್ಕೆ ಗುಲಾಮನಾಗುವ ಸ್ಥಿತಿ ಬಹುಪಾಲು ಜನತೆಯ ಗತಿಯಾಯಿತು. ಗುಲಾಮ ಪದ್ಧತಿ ಮತ್ತು ಜಮೀನುದಾರಿ ಪದ್ಧತಿಗಳಲ್ಲಿ ಕೆಲವೇ ಬುದ್ಧಿಜೀವಿಗಳ ಸಹಾಯದಿಂದ ಕೆಲಸ ನಿರ್ವಹಿಸುತ್ತಿದ್ದ ಒಡೆಯನಿಗೆ, ಕೈಗಾರಿಕಾ ಕ್ರಾಂತಿಯ ಬದಲಾವಣೆಗಳನ್ನೂ ವೈಜ್ಞಾನಿಕ ಅನ್ವೇಷಣೆಗಳ ಫಲವನ್ನೂ ಬಳಸಿಕೊಳ್ಳುವುದಕ್ಕಾಗಿ, ಬುದ್ಧಿಜೀವಿಗಳ ಒಂದು ದೊಡ್ಡ ಸಮೂಹವೇ ಬೇಕಾಯಿತು. ತಂತ್ರಜ್ಞನಾಗಿ, ವೈದ್ಯನಾಗಿ, ವಿಜ್ಞಾನಿಯಾಗಿ ಹೀಗೆ ಅನೇಕ ರೀತಿಗಳಲ್ಲಿ ತನಗೆ ಸೇವೆ ಸಲ್ಲಿಸುವವರನ್ನು ಸೃಷ್ಟಿಸುವ ಅಗತ್ಯ ಬಿದ್ದದ್ದರಿಂದ, ಆಶ್ರಿತ ಸ್ವರೂಪ ಹೋಗಿ ತಮ್ಮ ಬುದ್ಧಿವಂತಿಕೆಯನ್ನು ಮಾರಿಕೊಂಡು ಬದುಕುವ ಸ್ವತಂತ್ರವರ್ಗವೊಂದು ನಿರ್ಮಾಣಗೊಂಡಿತು. ಈ ವರ್ಗದಲ್ಲಿ 'ಉಪಾಧ್ಯಾಯ' ಕವಿ, ಕಲಾವಿದ, ಕಾನೂನು ತಜ್ಞ, ಇವರೆಲ್ಲರೂ ಸೇರಿಕೊಂಡರು. ಇವರೆಲ್ಲ ಅನುತ್ಪಾದಕ ಶ್ರಮಿಕರಂತೆ ಕಂಡರೂ, ಇವರು ದುಡಿಯುವುದಕ್ಕೆ ದೊರೆಯುವ ಫಲ ಮಾತ್ರ ಕೂಲಿಕಾರ ಹೇಗೆ ತನ್ನ ದುಡಿಮೆಗೆ ಕಡಿಮೆ ಪಡೆಯುತ್ತಾನೋ ಅಂತಹುದೇ ಆಗಿದೆ.

ಬಂಡವಾಳಶಾಹಿ ಸಮಾಜ ತನ್ನ ಹಿತಕ್ಕಾಗಿ ಹುಟ್ಟುಹಾಕಿದ ಕಾರ್ಖಾನೆಯೇ ಅದರ ಶತ್ರುವಾದ ಕಾರ್ಮಿಕನ ಹುಟ್ಟಿಗೂ ಕಾರಣವಾಯಿತು. ಈ ಕಾರ್ಮಿಕ ವರ್ಗ ತನ್ನ ಹಿತ ರಕ್ಷಣೆಗಾಗಿ ನಡೆಸುವ ಹೋರಾಟಗಳನ್ನು ಹತ್ತಿಕ್ಕಲು ಪ್ರಭುತ್ವದ ಅಧಿಕಾರ ರಕ್ಷಣೆಯ ಜೊತೆಗೆ, ಪ್ರಾಚೀನ ವರ್ಗರಹಿತ ಸಮಾಜದಲ್ಲಿ ಪ್ರಾರ್ಥನಾರೂಪದಲ್ಲಿ ಹುಟ್ಟಿ, ದಾಸ ಮತ್ತು ಊಳಿಗಮಾನ್ಯ ವ್ಯವಸ್ಥೆಗಳಲ್ಲಿ ಪ್ರಭುತ್ವದೊಂದಿಗೆ ಶಾಮೀಲಾದ 'ಧರ್ಮ' ಈಗಲೂ ತೀವ್ರ ವೇಗದಲ್ಲಿ ಸಹಕರಿಸಿತು. ವ್ಯಕ್ತಿಗೆ ಸ್ವಾತಂತ್ರ್ಯ ಎನ್ನುವುದು ಬಂಡವಾಳ ಶೇಖರಣೆಗೆ ಎನ್ನುವ ಮಂತ್ರವಾಗಿ ಶೋಷಿತ ಜನರಿಗೆ ಅದು ಕನಸಾಗಿಯೇ ಉಳಿದಿದೆ. ಈ ವ್ಯವಸ್ಥೆಯಲ್ಲಿ ಬುದ್ಧಿಜೀವಿಗಳ ವರ್ಗ ಎರಡು ರೀತಿಯಲ್ಲಿ ವ್ಯವಹರಿಸುತ್ತದೆ ಮೇಲ್ಮಟ್ಟದ ಜೀವನದ ಅಲ್ಪಸಂಖ್ಯಾತ ಬುದ್ಧಿಜೀವಿಗಳು ಸದಾ ಬಂಡವಾಳಷಾಹಿಯ ಸೇವಕರಾಗಿ, ಜನತೆಯ ಹೋರಾಟವನ್ನು ಹತ್ತಿಕ್ಕಲು ಪೋಷಕರಾಗಿ ವ್ಯವಹರಿಸುತ್ತಾರೆ. ಬಹುಸಂಖ್ಯಾತರಾದ ಕೆಳದರ್ಜೆ ಜೀವನ ಮಟ್ಟದ ಬುದ್ಧಿಜೀವಿಗಳು ಬಂಡವಾಳಷಾಹಿಯ ಕ್ರೌರ್ಯಕ್ಕೆ ರೋಸಿ, ವರ್ಗಸಮಾಜದಲ್ಲೇ ವರ್ಗರಹಿತ ಸಮಾಜದ ಮೌಲ್ಯಗಳನ್ನು ಕಂಡುಕೊಳ್ಳಲು ವಾಸ್ತವದೂರವಾದ ಕಲ್ಪನಾ ಚಿತ್ರಗಳನ್ನು ಕಟ್ಟಿಕೊಂಡು ಬದುಕುತ್ತಾರೆ. ಇವರಲ್ಲೇ ಕೆಲವರು ವಾಸ್ತವದ ಅರಿವಿನಿಂದ ಹೋರಾಟದ ಜೀವಂತ ಸೆಲೆಯ ಜೊತೆಗೆ ತಮ್ಮನ್ನು ಗುರುತಿಸಿಕೊಂಡು ಚರಿತ್ರೆಯ ಬದಲಾವಣೆಯ ಹೋರಾಟದ ಶ್ರಮದಲ್ಲಿ

ಪಾಲ್ಗೊಳ್ಳುತ್ತಾರೆ. ಈ ಮೂರೂ ರೀತಿಯ ಬುದ್ಧಿಜೀವಿಗಳನ್ನೂ ನಮ್ಮ ಈಗಿನ ಸಮಾಜದಲ್ಲಿ ನಾವು ಕಾಣುವುದು ಸಾಧ್ಯವಿದೆ.

ಸಮಾಜ ಬೆಳೆದು ಬಂದ ಚರಿತ್ರೆಯನ್ನು ಗಮನದಲ್ಲಿರಿಸಿಕೊಂಡರೆ, ಆ ಸಮಾಜ ವ್ಯವಸ್ಥೆಯ ಬುಡದ ಮೇಲೆ ಬೆಳೆದ ಕೊಂಬೆ ರೆಂಬೆಗಳಾದ ಕಾವ್ಯ, ಕಲೆ, ಸಂಸ್ಕೃತಿಗಳ ಸ್ವರೂಪ ನಮಗೆ ಸ್ಪಷ್ಟವಾಗುತ್ತದೆ. ಸಮಾಜವ್ಯವಸ್ಥೆಯನ್ನವಲಂಬಿಸಿಕೊಂಡು, ಅದರ ಕಲೆ, ಸಾಹಿತ್ಯಗಳ ಸ್ವರೂಪ ನಿರ್ಧರಿತವಾಗುತ್ತದೆನ್ನುವುದಕ್ಕೆ ಈ ಮೇಲೆ ಹೇಳಿದ ಸಮಾಜದ ವ್ಯವಸ್ಥೆಗಳು ಮತ್ತು ಆ ವ್ಯವಸ್ಥೆಗಳ ಕಾಲದಲ್ಲಿ ಹುಟ್ಟಿ ಬಂದಿರುವ ಕಲಾಕೃತಿಗಳನ್ನು ಗಮನಿಸಿದರೆ ಗೊತ್ತಾಗುತ್ತದೆ. ಹೀಗೆಂದ ಮಾತ್ರಕ್ಕೆ ಪ್ರತಿ ಯುಗದಲ್ಲಿಯೂ ಆ ಯುಗದ ಪ್ರಾತಿನಿಧಿಕ ಕಾವ್ಯವೇ ಇರುತ್ತದೆಂದೇನೂ ಅರ್ಥವಲ್ಲ. ಅದು ಪ್ರಾತಿನಿಧಿಕವಾಗಿ ಪ್ರಧಾನವಾಗಿ ಬೆಳೆದರೂ, ಅದರ ಜೊತೆಜೊತೆಯಾಗಿಯೇ, ಹಳೆಯದರ ಪುನರುದ್ಧರಣ ಮತ್ತು ಪ್ರಭಾವಗಳಿಂದ ಬೇರೆ ಕಾಲಗಳ ಕಾವ್ಯವೂ ಇರುತ್ತದೆನ್ನುವುದು ನಮ್ಮ ಕಾವ್ಯದ ಚರಿತ್ರೆಯಲ್ಲಿ ಸ್ಪಷ್ಟವಾಗಿರುವ ವಿಚಾರವಾಗಿದೆ. ಬಂಡವಾಳಶಾಹಿ ಸಮಾಜ ಬೆಳೆದು ಬಂದಿರುವ ಗತಿತರ್ಕದ ಮೂಲಕವಾಗಿಯೇ ಮನುಷ್ಯ ಸಮಾಜದ ಇತಿಹಾಸ ಪುನರ್ರೂಪಿಸಲು ಸಾಧ್ಯವಾಗುತ್ತದೆ.

ಮನುಷ್ಯ ಸಮಾಜದ ಬೆಳವಣಿಗೆಯನ್ನವಲಂಬಿಸಿಕೊಂಡೇ ಕಾವ್ಯ ತನ್ನ ರೂಪ ಮತ್ತು ಆಶಯಗಳನ್ನು ನಿರ್ಮಿಸಿಕೊಂಡಿದೆ. ಕಾವ್ಯವೂ ಕೂಡ ಸಮಾಜದ ಸೃಜನಶೀಲ ಉತ್ಪನ್ನ. ಅವಕ್ಕೆ ಯಾವ ಸಾಮಾಜಿಕ ಕ್ರಿಯೆ ಇದೆ ಎನ್ನುವುದೇ ಅದರ ಪಾತ್ರವನ್ನು ನಿರ್ಧರಿಸುತ್ತದೆ. ನಮ್ಮ ಕಾವ್ಯದ ಚರಿತ್ರೆಯನ್ನು ಗಮನಿಸಿದರೆ ಅದು ಎಂದೂ ಸಮಾಜ ಸೇವಕನಂತೆಯೇ ಕೆಲಸ ಮಾಡಿದೆ. ಉತ್ತಮವಾದ ಕಲಾಕೃತಿ ಆ ಕಾಲದ ಚಾರಿತ್ರಿಕ ದಾಖಲೆಯಾಗಿಯೂ ಇರುತ್ತದೆ. ಎಷ್ಟೋ ಸಂದರ್ಭಗಳಲ್ಲಿ ಚರಿತ್ರಕಾರರು ಹೇಳದೆ ಹೋಗಿರುವ ಸತ್ಯಾಂಶಗಳು ಕಲಾಕೃತಿಗಳಲ್ಲಿ ಕಾಣಬರುತ್ತವೆ. ಪ್ರತಿಯೊಂದು ಯುಗವೂ ತನ್ನ ಕಾಲದ ಆಲೋಚನೆಗಳಿಗೆ ಜನ್ಮವಿತ್ತಿರುತ್ತದೆ, ಕಲಾಕೃತಿಗಳ ಮೂಲಕ. ಅಲ್ಲದೆ ಅದರದೇ ಆದ ರೂಪಗಳನ್ನೂ ಹೊಂದಿರುತ್ತದೆ. ಈ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಕನ್ನಡ ಕಾವ್ಯದ ಚರಿತ್ರೆಯನ್ನು ಅಧ್ಯಯನ ಮಾಡುವ ಅಗತ್ಯ ವಿಶೇಷವಾಗಿ ನಮ್ಮ ಕಾಲಕ್ಕೆ ಅನಿವಾರ್ಯವಾದದ್ದು.

ಕನ್ನಡದಲ್ಲಿ ನವೋದಯ ಕಾವ್ಯದ ಬೆಳವಣಿಗೆಯ ಜೊತೆಗೇ ಹುಟ್ಟಿಕೊಂಡು, ನವ್ಯಕಾವ್ಯ ಚಳುವಳಿಯಲ್ಲಿ ಮತ್ತೊಂದು ರೀತಿಯಲ್ಲಿ ನವ್ಯರಿಂದ ಪ್ರತಿಪಾದಿತವಾದ ಕಾವ್ಯೋದ್ದೇಶವನ್ನು ಕುರಿತಂತಹ ಒಂದು ನಿಲುವು–ಕಾವ್ಯದ ಉದ್ದೇಶ ಕಾವ್ಯವಲ್ಲದೆ ಬೇರೇನೂ ಇಲ್ಲ ಎನ್ನುವಂತಹುದು. ಅಲ್ಲದೆ ಇದರ ಇನ್ನೊಂದು ಮುಖವಾದ ಕವಿ

ತನ್ನ ವ್ಯಕ್ತಿತ್ವವನ್ನು ಹುಡುಕಿಕೊಳ್ಳುವುದು. ಕಾವ್ಯ ಒಳಮನಸ್ಸಿನ ದನಿ, ಅನಾಥ ಪ್ರಜ್ಞೆಯ ಅಭಿವ್ಯಕ್ತಿ, ಇತ್ಯಾದಿ ಮಾತುಗಳು ಹೆಚ್ಚು ಚಲಾವಣೆಗೊಂಡತಹವು. ಈ ರೀತಿಯ ಕಾವ್ಯೋದ್ದೇಶವನ್ನು ಹೇಳುವ ಮಾತುಗಳು ಬಂಡವಾಳಶಾಹಿ ಸಮಾಜ ದಲ್ಲೇ ಏಕೆ ಕಾಣಿಸಿಕೊಂಡವು ? ಅದಕ್ಕಿಂತ ಹಿಂದಿನ ಸಮಾಜ ವ್ಯವಸ್ಥೆಗಳಲ್ಲಿ ಕಾಣುವುದಿಲ್ಲವಲ್ಲ ಇದಕ್ಕೆ ಕಾರಣವೇನು ? ಎನ್ನುವುದಕ್ಕೆ ಆಯಾ ಸಮಾಜ ವ್ಯವಸ್ಥೆ ಗಳನ್ನು ಅಭ್ಯಾಸ ಮಾಡಿದರೆ ಇದರ ಕಾರಣಗಳನ್ನು ತಿಳಿಯಬಹುದಾಗಿದೆ. ಈಗಿನ ಬೂರ್ಜ್ವಾ ಸಮಾಜದಲ್ಲಿ ಕಲಾವಿದ, ಕೂಲಿಗಾರನಂತೆಯೇ ಅಭದ್ರತೆಯ ಹಾರ್ನಲ್ಲಿ ಸದಾ ತೊಳಲುತ್ತಿರುತ್ತಾನೆ. ನಿರಾತಂಕನಾದ ಆಶ್ರಯ ಪಡೆದಿದ್ದ ಜಮೀನ್ದಾರೀ ಪದ್ಧತಿಯ ಕಾಲದ ಕವಿಗಿಂತ ಹೆಚ್ಚು ಒತ್ತಡಗಳಿಗೆ ಒಳಗಾಗುವುದಲ್ಲದೆ, ಸ್ಪರ್ಧಾತ್ಮಕ ಮಾರುಕಟ್ಟೆಯ ಪ್ರಭಾವಕ್ಕೆ ಸಿಕ್ಕಿ ಒದ್ದಾಡುವುದೂ ಉಂಟು. ಹೀಗಾದ ಸಂದರ್ಭ ದಲ್ಲಿ ಅವನಿಗೂ ಸಮಾಜಕ್ಕೂ ನಡುವೆ ಒಂದು ರೀತಿಯ ಕಂದಕ ಉಂಟಾಗಿ, ತಾನು ಆ ಸಮಾಜದ ಧಿಕ್ಕಾರ ಮಾಡುತ್ತಿದ್ದೇನೆ, ಅದನ್ನು ದೂರ ಮಾಡಿ ಬದುಕುತ್ತಿದ್ದೇನೆ. ಅದರ ಕ್ಷುದ್ರ ಆಶಯಗಳಿಗೂ ತನ್ನ ಕಲಾ ನಿರ್ಮಿತಿಗೂ ಯಾವ ಸಂಬಂಧವೂ ಇಲ್ಲ ವೆಂಬ ತಿಳುವಳಿಕೆಯಲ್ಲಿ ಇಂತಹುದೊಂದು ನೆಲೆಯನ್ನು ಅವನು ತಲುಪುತ್ತಾನೆ. ಆದರೆ ನಮ್ಮ ಹಳಗನ್ನಡದ, ನಡುಗನ್ನಡದ ಕವಿಗಳಾರೂ ಕಾವ್ಯಕ್ಕೆ ಯಾವ ಉದ್ದೇಶವೂ ಇಲ್ಲವೆಂದು ಹೇಳಲಿಲ್ಲ ಮಾತ್ರವಲ್ಲ, ಸಂಸ್ಕೃತ ಕಾವ್ಯ ಮೀಮಾಂಸಕರು ಹೇಳಿದ, ಯಶಸ್ಸು, ಅರ್ಥ, ನೀತಿಗಳಿಗಾಗಿಯೇ ಕಾವ್ಯವಿದೆ ಎಂದು ಒಪ್ಪಿ ಕಾವ್ಯ ರಚಿಸಿದವರು. ಅವರ ಸಾಮಾಜಿಕ ಸಂದರ್ಭದಲ್ಲಿ ಅವರಿಗೂ ಅವರು ಬದುಕುತ್ತಿದ್ದ ಸಮಾಜಕ್ಕೂ ಯಾವುದೇ ಬಗೆಯ ಕಂದಕ ಬೀಳದೆ, ಸಮಾಜದ ಜೀವನ ಚಿತ್ರಗಳ ಬಗೆಗೆ ಅವರು ತಮ್ಮ ತೀರ್ಮಾನಗಳನ್ನೋ, ಅನುಮಾನಗಳನ್ನೋ, ಪ್ರಕಟಪಡಿಸಿದರು. ಹಾಗೆ ನೋಡಿದರೆ ಹತ್ತೊಂಭತ್ತನೆ ಶತಮಾನದ ಕೊನೆಯ ಭಾಗದವರೆಗಿನ ಭಾರತೀಯ ಸಾಹಿತ್ಯವೆಲ್ಲಾ ಧಾರ್ಮಿಕ ಪರಂಪರೆಯ ಮೌಲ್ಯಗಳನ್ನು ಒಳಗೊಂಡೇ ಚಿತ್ರಿತ ವಾದದ್ದು. ಇಷ್ಟಾದರೂ ಅಂತಹ ಪರಂಪರೆಯಿಂದ ಬಂದ ಹೊಸಗನ್ನಡದ ಕವಿಗಳಿಗೆ ಕಾವ್ಯದ ಉದ್ದೇಶ ಕಾವ್ಯವೇ ಆದದ್ದರ ಕಾರಣ, ಅವರು ಎದುರಿಸಿದ ಬದುಕಿನ ಇಕ್ಕಟ್ಟಿನಲ್ಲಿದೆ ಮಾತ್ರವಲ್ಲ, ಆ ಇಕ್ಕಟ್ಟನ್ನು ಎದುರಿಸಲು ಬೇಕಾದ ದೃಷ್ಟಿಯನ್ನು ಗಳಿಸಿಕೊಳ್ಳುವ ಹೋರಾಟದಲ್ಲಿ ಅವರು ವಿಮುಖವಾದದ್ದರಲ್ಲೂ ಇದೆ.

ಕಾವ್ಯ ಮನರಂಜನೆಯ ಅಥವಾ ತಾಂತ್ರಿಕ ಕೌಶಲದ ಚಮತ್ಕಾರ ಮಾತ್ರ ಎನ್ನುವುದನ್ನು ಧಾರ್ಮಿಕ ಸಂಘಟಕರೂ ತಿರಸ್ಕರಿಸುತ್ತಾರೆ ಮಾತ್ರವಲ್ಲ ಎಡಪಂಥೀಯರೂ ತಿರಸ್ಕರಿಸುತ್ತಾರೆ. ಅಂದರೆ ಈ ಎರಡೂ ಗುಂಪುಗಳಿಗೆ ಕಾವ್ಯಕ್ಕೆ ಉಚಿತವಾದ ಸಾಮಾಜಿಕ ಕ್ರಿಯಾತ್ಮಕತೆ ಇರಬೇಕೆಂಬುದರ ಬಗೆಗೆ ಒಮ್ಮತ ಇದೆ. ಅವರವರು ತಮ್ಮ ವಿಚಾರಗಳ ವಾಹಕವಾಗಲೆಂದು ಬಯಸುತ್ತಾರೆ. ಆದರೆ

ಸಮಾಜದ ಬೆಳವಣಿಗೆಯಲ್ಲಿ ನಂಬಿಕೆ ಇರುವ ಯಾವೊಬ್ಬ ಕವಿಯೂ ಅದರ ವಿರೋಧೀ ನೆಲೆಯಲ್ಲಿ ನಿಂತು ಮಾತನಾಡಲಾರ ಎಂಬುದು ಚಾರಿತ್ರಿಕ ಸತ್ಯ. ಹಾಗೆಯೇ ತಾವು ಕಾವ್ಯವನ್ನು ಯಾವ ಆಲೋಚನೆಗಳಿಗೂ ಬದ್ಧವಾಗಿಸುವುದಿಲ್ಲವೆಂದು ಕೆಲವು ಕವಿಗಳು ಹೇಳಿಕೊಳ್ಳುತ್ತಾರೆ. ಇಂತಹ ಕವಿಗಳು ತಾವು ಈ ಲೋಕದಲ್ಲಿಲ್ಲದ ಆಲೋಚನೆಗಳನ್ನು ಹುಟ್ಟಿಸುತ್ತಿಲ್ಲವೆಂಬುದನ್ನು ತಿಳಿಯಬೇಕು. ಕವಿ ಶೂನ್ಯದಲ್ಲಿ ವ್ಯವಹರಿಸುವುದಿಲ್ಲವಾದ್ದರಿಂದ, ಅವನ ಕೃತಿ ಅವನ ಸುತ್ತಣ ಬದುಕಿನ ಪ್ರತಿನಿಧಿ ಎಂಬುದನ್ನು ಆ ಕೃತಿಯನ್ನು ಒರೆಹಚ್ಚಿದಾಗ ತಿಳಿಯುತ್ತದೆ. ಈ ಜಗತ್ತಿನಲ್ಲಿ ಸೃಷ್ಟಿಯಾಗಿರುವ ಯಾವೊಬ್ಬ ಕವಿಯ ಕೃತಿಯೂ ಅವನ ಕಾಲ ದೇಶ ವಿಚಾರಗಳಿಗೆ ಅತೀತವಾದುದೂ ಅಲ್ಲ. ಸ್ವತಂತ್ರವಾದದ್ದಂತೂ ಮೊದಲೇ ಅಲ್ಲ. ಆದ್ದರಿಂದ ಕಾವ್ಯಕ್ಕಾಗಿ ಕಾವ್ಯ ಎಂದು ವಾದಿಸುವವರು, ತಮಗೆ ತಾವೇ ಮೋಸಮಾಡಿ ಕೊಳ್ಳುತ್ತಾರೆ ; ಅವರು ಅಪ್ರಜ್ಞಾಪೂರ್ವಕ ನೆಲೆಯಲ್ಲಿದ್ದರೆ. ಇಲ್ಲದಿದ್ದರೆ ಯಥಾಸ್ಥಿತಿ ವಾದಿಗಳಾಗಿ ಬೆಳವಣಿಗೆಗೆ ಅಡ್ಡಿಯೊಡ್ಡುವ ಪ್ರತಿಗಾಮೀ ವಿಚಾರಗಳ ಪ್ರತಿಪಾದನೆ ಮಾಡುತ್ತಾರೆ. ಪ್ರಾಚೀನಕಾಲದ ಕವಿಗೆ ಈ ಬಗೆಯ ಸಾಮಾಜಿಕ ವಿಜ್ಞಾನದ ಅರಿವು ದೂರವಾದದ್ದಾಗಿದ್ದಾಗ ಕೂಡಾ, ಅವನು ಸಮಾಜಕ್ಕೆ ಬೆನ್ನು ತಿರುಗಿಸಿ ದವನಲ್ಲ. ಸಾಮಾಜಿಕ ವಿಜ್ಞಾನದ ಬೆಳಕಿನಲ್ಲೂ, ಕವಿ ಸಮಾಜಕ್ಕೆ ಬೆನ್ನು ತಿರುಗಿಸಿ, ಆಳುವ ಕೈಯನ್ನು ಬಲಪಡಿಸುವ ಕೆಲಸ ಮಾಡಿದರೆ ಅದು ಸಮಾಜದ ಬಹುಪಾಲು ಶೋಷಿತವರ್ಗಕ್ಕೆಸಗಿದ ದ್ರೋಹವಾಗುತ್ತದೆ.

ಕಾವ್ಯ ಅನುದ್ದಿಶ್ಯಕ್ರಿಯೆ ಎನ್ನುವ ವಲಯಗಳಲ್ಲೇ ಬಹಳ ಉಗ್ರವಾಗಿ ಪ್ರತಿಪಾದಿತವಾಗುತ್ತಿರುವ ಮತ್ತೊಂದು ವಿಚಾರವೆಂದರೆ, ಪ್ರಗತಿಪರ ಲೇಖಕರ ಕೃತಿಗಳಲ್ಲಿ ರಾಜಕೀಯ ವಿಚಾರಗಳು ತುಂಬಿರುತ್ತವೆ, ಇದರಿಂದ ಕೃತಿಯ ಕಲಾತ್ಮ ಕತೆಗೆ ಕುಂದುಂಟಾಗಿ ಕೃತಿಯ ಘನತೆ ಹಾಳಾಗುತ್ತದೆ. ಆಗ ಬರವಣಿಗೆ ರಾಜಕೀಯ ಪ್ರಚಾರವಾಗಿ ಮಾತ್ರ ಉಳಿಯುತ್ತದೆ ಎಂಬ ಆಪಾದನೆ. ಈ ಅಭಿಪ್ರಾಯದ ಪ್ರಭಾವ ಹೊಸದಾಗಿ ಬರೆಯ ಹೊರಡುವವರ ಮೇಲೆ ಆಗಬೇಕೆಂಬ ಅಪೇಕ್ಷೆ ಈ ಅಭಿಪ್ರಾಯ ಪ್ರತಿಪಾದಕರೆಲ್ಲರದಾಗಿದೆ. ಈ ವಾದವನ್ನು ಮಂಡಿಸುವವರು ಸಮ ಕಾಲೀನ ಜೀವನದ ವಾಸ್ತವವನ್ನು ಅರ್ಥಮಾಡಿಕೊಳ್ಳುವುದರಲ್ಲಿ ಸೋತಿದ್ದಾರೆ ಮಾತ್ರವಲ್ಲ ನಮ್ಮ ಇತಿಹಾಸದಲ್ಲಿ ನಿರ್ಮಾಣಗೊಂಡಿರುವ ಕಾವ್ಯಗಳನ್ನು ಮರೆತಿದ್ದಾರೆ. ಇವೆರಡೂ ಗೊತ್ತಿದ್ದೂ ಈ ಮಾತನಾಡುವವರು ಬೇರೆಯವರನ್ನು ದಾರಿತಪ್ಪಿಸಲು ಹೆಣಗುತ್ತಿದ್ದಾರೆ. ಕಾವ್ಯ ಬದುಕಿನ ಶೋಧನೆ ; ಆ ಬದುಕು ಸಮಾಜದಲ್ಲಿದೆ. ಸಮಾಜ ರಾಜಕೀಯಕ್ಕೆ ಅಧೀನವಾದದ್ದು. ಬಂಡವಾಳಶಾಹಿ ಸಮಾಜದಲ್ಲಂತೂ ರಾಜಕೀಯ ಸರ್ವಾಂತರ್ಯಾಮಿ. ಯಾವ ವಲಯವನ್ನು ಒಳ ಹೊಕ್ಕು ನೋಡಿದರೂ, ಅದರ ಕಾಲಿನಿಂದ ತಲೆಯವರೆಗೆ ರಾಜಕೀಯವಿಲ್ಲದೆ ಇಲ್ಲ.

ಕವಿ ರಾಜಕೀಯದಿಂದ ತಪ್ಪಿಸಿಕೊಳ್ಳುವುದು ಎಂದರೆ, ಸಮಾಜದಿಂದ ತಪ್ಪಿಸಿಕೊಳ್ಳುವುದು ಅರ್ಥಾತ್ ವಾಸ್ತವದಿಂದ ತಪ್ಪಿಸಿಕೊಳ್ಳುವುದು ಎಂದೇ ಅರ್ಥ. ರಾಜಕೀಯ ಸ್ಥಿತ್ಯಂತರಗಳು ಹೇಗೆ ಕಾವ್ಯಜಗತ್ತಿನ ಸ್ಥಿತ್ಯಂತರಗಳಾಗಿವೆ ಎನ್ನುವುದನ್ನು ಜೈನ, ವೀರಶೈವ, ವೈಷ್ಣವ ಸಾಹಿತ್ಯಗಳ ಇತಿಹಾಸ ನಮಗೆ ತಿಳಿಸುತ್ತದೆ.

ವ್ಯಾಸ ವಾಲ್ಮೀಕಿಗಳು ರಚಿಸಿದ ಮಹಾಕಾವ್ಯಗಳು ಆ ಕಾಲದ ರಾಜಕೀಯವನ್ನು ಬಿಟ್ಟು ಏನನ್ನು ಹೇಳುತ್ತವೆ? ಗ್ರೀಕ್ ನಾಟಕಕಾರರಿಗೆ, ಷೇಕ್ಸ್‌ಪಿಯರನಿಗೆ, ಡಾಂಟೆ ಮಿಲ್ಟನರಿಗೂ ಕೂಡ ಅವರ ಸಮಾಜದ ರಾಜಕೀಯ ಸಂಘರ್ಷವೇ ಪ್ರಧಾನ ವಸ್ತುವಾದದ್ದು. ವ್ಯಾಸನ ಭಾರತವನ್ನು ತೆಗೆದುಕೊಂಡ ಪಂಪನಿಗೂ ಕೂಡ ಅವನ ಕಾಲದ ರಾಜಕೀಯ ವಸ್ತುವಿಷ, ಕೇಂದ್ರವಾಯಿತು. ರಾಜಕೀಯವಿಲ್ಲದ ಜಾಗವನ್ನು ಯಾಗಾದರೂ ಹುಡುಕಿಕೊಂಡುಹೋಗಿ ಗುಟ್ಟಾಗಿ, ಅದರ ಮೇಲೆ ಪದ್ಯ ಬರೆಯಬೇಕೆಂದುಕೊಂಡರೂ ಸಾಧ್ಯವಿಲ್ಲ ಈಗ. ಸಮಾಜದ ಎಲ್ಲ ವಲಯಗಳ ರೂಪರೇಷೆಗಳನ್ನೂ, ಕೆಲಸ ಕಾರ್ಯಗಳನ್ನೂ ಹಿಡಿತದಲ್ಲಿಟ್ಟುಕೊಂಡ ಚಾಲಕ ಶಕ್ತಿ ರಾಜಕೀಯ. ಅದು ಎಲ್ಲಿಂದಲೋ ಬಂದುದಲ್ಲ. ಕಾಲ ಘಟ್ಟಗಳಲ್ಲಿ ಬೆಳೆದು ಈಗಿರುವ ರೂಪವನ್ನು ತಳೆದದ್ದು. ಅದನ್ನು ಅರ್ಥಮಾಡಿಕೊಳ್ಳುವುದು ಕವಿಗೆ ಒಂದು ಸವಾಲಿದ್ದಂತೆ. ಆ ಸವಾಲನ್ನು ಹಿಂದೆಂದಿಗಿಂತ ಹೆಚ್ಚು ತೀವ್ರವಾಗಿ ನಮ್ಮ ಕಾಲದ ಲೇಖಕ ಎದುರಿಸಬೇಕಾಗುತ್ತದೆ. ಅದಕ್ಕೆ ಸಮರ್ಥರಾಗಿ ಪ್ರತಿಸ್ಪಂದಿಸಬೇಕಾಗುತ್ತದೆ. ಈ ಸವಾಲನ್ನು ಸ್ವೀಕರಿಸದೆ ಓಡುವ ಲೇಖಕ ಸಮಕಾಲೀನ ಬರಹಗಾರನಾಗದೆ ಹೋಗುತ್ತಾನೆ. ಅವನ ಜೀವನದ ಮೂಲ ಚಲನಶಕ್ತಿಯಿಂದ ದೂರ ಉಳಿದುಬಿಡುತ್ತಾನೆ.

ರಾಜಕೀಯ ಕಾವ್ಯಕ್ಕೆ ಒಂದು ಅನಿವಾರ್ಯ ಪ್ರೇರಕ ಎಂದು ಒಪ್ಪಿಕೊಂಡಾಗ, ಕಾವ್ಯ ಕೃತಿಯಲ್ಲಿ ಅದರ ನಿರೂಪಣೆಯ ವಿಚಾರ ಪ್ರತ್ಯೇಕವಾದ ಚರ್ಚೆಗೆ ಅವಕಾಶವನ್ನು ಕೊಡುತ್ತದೆ. ಕಾವ್ಯದಲ್ಲಿ ನಿರೂಪಿತವಾಗುವ ಎಲ್ಲ ವಿಚಾರಗಳೂ ಹೇಗೆ ಕಾವ್ಯದ ಚೌಕಟ್ಟಿನಲ್ಲಿ ಅಂತರ್ಗತವಾಗಿ ಐಕ್ಯತೆಯನ್ನು ಸಾಧಿಸಬೇಕೆಂದು ಬಯಸುತ್ತೇವೆಯೋ ಹಾಗೆಯೇ ರಾಜಕೀಯ ವಿಚಾರವೂ ಐಕ್ಯವಾಗಬೇಕು. ಕಾವ್ಯದ ಹೊರಗಡೆ ಅದಕ್ಕೊಂದು ಸ್ವತಂತ್ರ ಅಸ್ತಿತ್ವ ಇರುವುದಿಲ್ಲ. ಕಾವ್ಯ, ರಾಜಕೀಯ ಪಕ್ಷಗಳ ಪ್ರಣಾಳಿಕೆಯಂತೆ, ಘೋಷಣೆಗಳಂತಿರಬೇಕೆಂದು ಹೇಳುವುದಿಲ್ಲ. ಆದರೆ ವ್ಯಕ್ತಿವಾದಿಗಳು, ಧಾರ್ಮಿಕವಾದಿಗಳು ತಮ್ಮ ಕಾವ್ಯಗಳನ್ನು ಇಂತಹ ಘೋಷಣೆಗಳಿಗೆ ಪಕ್ಕಾಗಿಸಿರುವ ಸಂದರ್ಭಗಳಲ್ಲಿ ಏಳದೆ ಇದ್ದ ಈ ವಿರೋಧದ ಬೊಬ್ಬೆಯ ಹಿನ್ನೆಲೆಯನ್ನು ಪರಿಶೀಲಿಸಿದರೆ, ರಾಜಕೀಯದ ನಿರಾಕರಣೆಯ ಹಿಂದೆ ಕಾವ್ಯವನ್ನು ಕಾಪಾಡಿಕೊಳ್ಳುವ ನಿಷ್ಠೆಗಿಂತ ಬೇರೆಯಾದ ಹಿತಾಸಕ್ತಿಗಳಿರುವುದನ್ನು ನಾವು ಕಾಣಬಹುದು. ರಾಜಕೀಯ ವಿಚಾರಗಳು ಕಾವ್ಯದ ಹಾಸುಹೊಕ್ಕುಗಳಲ್ಲಿ ನೈತಳೆಯು

ವಂತೆ ಮಾಡಬೇಕಾದದ್ದು ಕವಿಯ ಸಾಧನೆಗೆ ಸೇರಿದ ವಿಚಾರವೇ ಹೊರತು, ಕಾವ್ಯ ವಸ್ತುವಿನ ಆಯ್ಕೆಯ ಮಟ್ಟದಲ್ಲೇ ಇದು ಬೇಕು ಇದು ಬೇಡ ಎಂದು ನಿರ್ದೇಶಿಸುವುದು ಎಂತಹ ಕಲಾ ಸ್ವಾತಂತ್ರ್ಯ. ಅಲ್ಲದೆ ಇಂತಹ ವಿಚಾರಗಳನ್ನು ಕವಿ ಗ್ರಹಿಸುವಾಗ ಸತ್ಯನಿಷ್ಠನಾಗಿರಬೇಕಲ್ಲದೆ, ತನ್ನ ತಿಳುವಳಿಕೆಗೆ ಜೀವನದ ಬೆಳವಣಿಗೆಯ ನಿಯಮಗಳ ಭದ್ರಬುನಾದಿಯನ್ನು ಅವಲಂಬಿಸಬೇಕು. ಈ ಕಾಲದ ಬರಹಗಾರನಿಗೆ ರಾಜಕೀಯ ರಕ್ತಕ್ಕಂಟಿದ ಚರ್ಮ. ಅವನು ಅದನ್ನು ಕಿತ್ತು ಹಾಕುವೆನೆಂದರೆ ತನ್ನನ್ನೇ ಕೊಂದುಕೊಂಡಂತೆ. ಆದ್ದರಿಂದ ವಸ್ತು ಮತ್ತು ರೂಪಗಳಲ್ಲಿ ಐಕ್ಯತೆ ಹೇಗೆ ಬಯಸುತ್ತೇವೋ ಹಾಗೆಯೇ ರಾಜಕೀಯ ಮತ್ತು ಕಲೆಗಳ ಐಕ್ಯತೆ ಸಾಧ್ಯವಾಗಬೇಕು. ಆಗಲೇ ಒಬ್ಬ ಲೇಖಕ, ಈ ಕಾಲದ ಸಮಾಜದ ಶಕ್ತಿಯುತ ಲೇಖಕನಾಗಲು ಸಾಧ್ಯವಾಗುವುದು.

ರಾಜಕೀಯ, ಕಾವ್ಯಕ್ಕೆ ದೂರವೆನ್ನುವ ಅಪಪ್ರಚಾರವಿರುವಂತೆಯೇ ಕಾವ್ಯ ವಸ್ತುವಿಗೆ ಸಂಬಂಧಿಸಿದಂತೆ, ಒಂದು ರೀತಿಯ ಮಡಿವಂತಿಕೆಯ ಪ್ರಚಾರವೂ ಇದೆ. ಇದು ನವೋದಯ ಕವಿಗಳ ಕಾಲದಲ್ಲಿ ಹೆಚ್ಚಾಗಿ ಕಾಣಿಸಿಕೊಂಡಿರಲಿಲ್ಲ. ನವ್ಯ ಕಾಲಕ್ಕೆ ಇದರ ಚರ್ಚೆ ತೀವ್ರವಾಯಿತು. ಈ ಚರ್ಚೆ ತೀವ್ರವಾದುದಕ್ಕೂ ಒಂದು ಚಾರಿತ್ರಿಕ ಕಾರಣವಿದೆ. ಈಗ ವಸ್ತುವನ್ನು ಕುರಿತು ಹೇಳುವಾಗಲೆಲ್ಲಾ ವರ್ಗ ಹೋರಾಟವನ್ನು, ಶೋಷಣೆಯನ್ನು, ಬಡತನದ ತುಡಿತವನ್ನು, ಶ್ರೀಮಂತರ ಕ್ರೌರ್ಯವನ್ನು ಚಿತ್ರಿಸುವಾಗ ವಸ್ತುವಿನ ಕಾರಣದಿಂದಾಗಿಯೇ ಕಾವ್ಯ ತನ್ನ ಕಲಾತ್ಮಕತೆಯನ್ನು ಕಳೆದುಕೊಳ್ಳುತ್ತದೆ ಎನ್ನುವ ತಪ್ಪುವಾದವನ್ನು ವ್ಯಕ್ತಿನಿಷ್ಠ ಕಾವ್ಯದ ವಕ್ತಾರರು ಮುಂಡಿಸುತ್ತಾರೆ. ಆದರೆ ಈ ಬಗೆಯ ವಸ್ತುವಿನ ಆಯ್ಕೆಯಲ್ಲಿ ನಮ್ಮ ಮಹಾಕಾವ್ಯಗಳಾದ ರಾಮಾಯಣ ಮಹಾಭಾರತಗಳೇ ಜೀವನ ಸಂಘರ್ಷದ, ಕಷ್ಟಸುಖಗಳನ್ನು ಹೆಚ್ಚು ಗಾಢವಾದ ರೀತಿಯಲ್ಲಿ ಚಿತ್ರಿಸಿವೆ. ಅಲ್ಲಿ ಎಲ್ಲವೂ ಗ್ರಾಹ್ಯವೇ. ಪಂಪ ರನ್ನ ಕುಮಾರವ್ಯಾಸರ ಕಾವ್ಯಗಳಲ್ಲಿ ಕೂಡ ಈ ಜೀವನ ಸಂಘರ್ಷದ ಚಿತ್ರಣಕ್ಕೆ ಅಡ್ಡಿಯೊದಗಲಿಲ್ಲ. ಆದರೆ ಹೊಸ ಪೀಳಿಗೆಯ ವಿಮರ್ಶಕರು ಅಭಿವ್ಯಕ್ತಿಯಲ್ಲಿರುವ ಲೋಪಗಳಿಗೆ ವಸ್ತುವನ್ನು ಹೊಣೆ ಮಾಡುತ್ತಾರೆ. ಒಂದು ಕೃತಿಯ ತಾಂತ್ರಿಕ ಅಭಿವ್ಯಕ್ತಿ ಪರಿಣತಿಯೇ ಕಾವ್ಯವೆಂದು ಭಾವಿಸುವವರು ಸುಂದರವಾದ ತಲೆಯೊಳಗೆ ಮಿದುಳಿಲ್ಲದಿದ್ದರೂ ಮೆಚ್ಚಿಕೊಳ್ಳುವವರಾಗಿ ಬಿಡುತ್ತಾರೆ. ಒಂದು ಕಾವ್ಯಕೃತಿಯ ಮಹತ್ವಪೂರ್ಣವಾದ ನೆಲೆಯಿರುವುದು ಮೊದಲು ಅದು ತನ್ನ ವಸ್ತುವಿನಲ್ಲಿ ಹೊಂದಿರಬಹುದಾದ ಸತ್ಯ, ಅದರ ವಿಸ್ತಾರ, ಮತ್ತು ಅದಕ್ಕಿರುವ ಸಾಮಾಜಿಕ ಅರ್ಥವಂತಿಕೆಯಲ್ಲಿ ಎನ್ನುವುದನ್ನು ಮರೆಯಬಾರದು. ಹೀಗೆಂದು ಹೇಳುವಾಗ ಮಾಧ್ಯಮವನ್ನು ಉದಾಸೀನ ಮಾಡಬೇಕೆಂದೇನೂ ಇದರ ಅರ್ಥವಲ್ಲ. ಆದರೆ ಮಾಧ್ಯಮ ಮತ್ತು ವಸ್ತುಗಳ ಬೆಳವಣಿಗೆ

ಕೂಡ ಚಾರಿತ್ರಿಕವಾದದ್ದೆಂಬುದನ್ನು ತಿಳಿಯಬೇಕು. ಪ್ರತಿಯೊಂದು ಕವಿತಾ ರೂಪವೂ ಒಂದು ನಿರ್ದಿಷ್ಟಕಾಲದ ಅಗತ್ಯಕ್ಕೆ ಪರಿಮಿತವಾದದ್ದು. ಯಾವರೂಪವೂ ತನಗೆ ತಾನೇ ಕೃತಕವೋ, ಸಹಜವೋ ಇಲ್ಲವೇ ನಿಯಮರಹಿತವೋ ನಿಯಮ ಸಹಿತವೋ ಆಗಿರುವುದಿಲ್ಲ. ಒಂದು ನಿರ್ದಿಷ್ಟಕಾಲದ ಅಗತ್ಯಕ್ಕೆ ರೂಪತಳೆದ ಕಾವ್ಯ ರೂಪ, ತನ್ನ ಕಾಲದ ಅಗತ್ಯವನ್ನು ಪೂರೈಸಿದ ಮೇಲೆ ತನ್ನ ಸಹಜತೆಯನ್ನು ಕಳೆದು ಕೊಳ್ಳುತ್ತದೆ. ಪಂಪನಿಗೆ, ಅವನ ಕಾಲಕ್ಕೆ ಅಗತ್ಯವಾದ ಚಂಪೂ, ವಚನಕಾರರಿಗೆ ಅಗತ್ಯವಾಗದೆ ಹೋಯಿತು. ಇದಕ್ಕೆ ಕಾರಣ ಇರುವುದು ಆಯಾ ಸಂದರ್ಭದ ಅಗತ್ಯತೆಯಲ್ಲಿ ಹೊಸಕಾಲದ ಕವಿ ಹೊಸವಸ್ತುವನ್ನು ಹಳೆಯಮಾಧ್ಯಮದಲ್ಲಿ ಹೇಳಲು ತೊಡಗಲಾರ, ತೊಡಗಿದರೂ ಯಶಸ್ವಿಯಾಗಲಾರ. ಅವನಿಗೆ ತನ್ನ ಹೊಸ ವಸ್ತುವಿಗೊಂದು ಹೊಸರೂಪಬೇಕು. ಕನ್ನಡ ಕಾವ್ಯದ ಚರಿತ್ರೆಯಲ್ಲಿ ಆಗಿರುವುದೂ ಹೀಗೆಯೇ.

ಜೀವನದ ವಿಭಿನ್ನವಲಯಗಳು ಅಂದರೆ ರಾಜಕೀಯ, ಧಾರ್ಮಿಕ ತಾತ್ವಿಕ ವಿಚಾರಗಳು, ಚಾರಿತ್ರಿಕ ಹೋರಾಟದ ಮೇಲೆ ಪ್ರಭಾವವನ್ನು ಬೀರಿ, ರೂಪದ ಸ್ವರೂಪವನ್ನು ನಿರ್ಧರಿಸಿಬಿಡುತ್ತವೆ. 'ವಚನ' ರೂಪ ಇಂತಹುದೊಂದು ಪ್ರಭಾವ ಗಳ ಫಲ. ಹೀಗೆ ಬದಲಾಗುವುದು ಯಾರೋ ಒಬ್ಬ ಕವಿ ಬದಲಾಯಿಸಿಕೊಳ್ಳ ಬೇಕೆಂದು ಹಟ ಹಿಡಿದು ಮಾಡುವ ಕೆಲಸವಲ್ಲ ಅದು. ಚಾರಿತ್ರಿಕ ಸಂದರ್ಭ ಬದಲಾಗದ ಹೊರತು ಸಾಹಿತ್ಯರೂಪಗಳು ಬದಲಾಗುವುದಿಲ್ಲ. ನವೋದಯದಿಂದ ನವ್ಯಕ್ಕೆ ಬದಲಾದದ್ದರ ಹಿಂದೆ ಇಂತಹುದೊಂದು ಚಾರಿತ್ರಿಕ ಬದಲಾವಣೆ ಇದೆ. ರೂಪ ಕೆಲವುಸಲ ಒಬ್ಬೊಬ್ಬ ಕವಿಯದು ಮಾತ್ರವಾಗಿರದೆ, ಇಂದು ಇಡೀ ಆಲೋ ಚನಾಗುಂಪಿನ ವಾಹಕವಾಗಿರುವುದೂ ಇದಕ್ಕೆ ನಿದರ್ಶನವಾಗಿದೆ.

ಕವಿತ್ವಕ್ಕೆ ಸರಿಯಾದ ಸ್ಥಾನ ಕೊಡಲಾರದವರು ಕವಿತಾರೂಪವನ್ನೇ ಕಾವ್ಯ ವೆಂದುಕೊಂಡು ಅದರ ಶರೀರದ ಮೇಲೆ ಸ್ವೇಚ್ಛೆಯಾಗಿ ವಿಹರಿಸುತ್ತಾರೆ. ಇದೂ ಕೂಡ ಕಾವ್ಯರಂಗದ ಜಾಡ್ಯವೇನಲ್ಲ. ನಮ್ಮ ಜೀವನದಲ್ಲಿ ಕೂಡ ರೂಪಕ್ಕೆ ಭಾವ ಕ್ಕಿಂತ ಹೆಚ್ಚು ಪ್ರಧಾನತೆಯನ್ನು ಕೊಡುವ ಕೆಲಸ ಎಲ್ಲ ರಂಗಗಳಲ್ಲಿಯೂ ನಡೆದಿದೆ. ರೂಪ ಓದುಗನನ್ನು ಹೆಚ್ಚು ಹೆಚ್ಚು ಆಕರ್ಷಿಸಿದಂತೆಲ್ಲ, ಅದು ತನ್ನ ಅಂತರಂಗದಲ್ಲಿರು ವುದನ್ನು ಬಿಚ್ಚಿಕೊಡುವುದರಲ್ಲಿ ಸೋಲುತ್ತದೆ. ಇಂತಹ ಕಾವ್ಯಜಾತಿಗೆ ಲಕ್ಷ್ಮೀಶ, ರತ್ನಾಕರನ ಭರತೇಶ ವೈಭವಗಳು ಉತ್ತಮ ಸಾಕ್ಷಿಗಳಾಗುತ್ತವೆ. ಈ ರೂಪ ಪ್ರಧಾನ ಕಾವ್ಯಗಳ ಕಲಾತ್ಮಕ ಮತ್ತು ಮಾನಸಿಕ ವಿಶ್ಲೇಷಣೆಯನ್ನು ವಿಮರ್ಶಿಸಿದರೆ ಅದು ಅದರ ಸಾಮಾಜಿಕ ಸಂದರ್ಭಕ್ಕೆ ದಾರಿ ತೆರೆಯುತ್ತದೆ. ವಸ್ತುವಿನ ವಿಚಾರ ವನ್ನು ಕೈಬಿಟ್ಟು ಬರಹಗಾರ, ವಸ್ತುಸ್ಥಿತಿಗೆ ತನ್ನನ್ನು ತೆತ್ತುಕೊಳ್ಳದೆ, ಅದರಲ್ಲಿರುವ

ಸಂಕೀರ್ಣಸಂಘರ್ಷಗಳನ್ನು ಎದುರಿಸಲಾರದೆ, ತಾಂತ್ರಿಕ ಪರಿಣತಿಯಲ್ಲಿ, ಆತ್ಮರತಿಯಲ್ಲಿ ಮಗ್ನನಾಗುತ್ತಾನೆ. ವಸ್ತುವಿನ ಆಯ್ಕೆ ಸಮಕಾಲೀನ ಸಮಾಜದ ವಾಸ್ತವವಾಗಿರಬೇಕು. ಅದು ಕವಿಯಿಂದ ಬೆಲೆಕಟ್ಟಲ್ಪಟ್ಟು ಕಲಾತ್ಮಕವಾದ ಪ್ರತಿಮೆಗಳ ಮೂಲಕ ಪ್ರತಿಫಲಿತವಾಗಬೇಕು. ಉತ್ತಮವಾದ ವಸ್ತುವಿಗೆ ಅಂದರೆ ವಾಸ್ತವವಾದ ಜಗತ್ತಿನ ವಿಚಾರಕ್ಕೆ ಕ್ಲಿಷ್ಟವಾದ ಮಾಧ್ಯಮವಿದ್ದಾಗ ಅದು ಕೆಟ್ಟ ಕೃತಿಯೆಂದೇನೂ ಅರ್ಥವಲ್ಲ. ಆದರೆ ವೈವಿಧ್ಯಮಯವಾದ ಕಲಾತ್ಮಕರೂಪವೊಂದರ ಅನ್ವೇಷಣೆ ಹೊಸ ಲೇಖಕನ ನಿರಂತರ ಹುಡುಕಾಟವೂ ಆಗಿರುತ್ತದೆ.

ಈಗ ಬರೆಯತೊಡಗಿರುವ ಹೊಸ ಕವಿಗಳು—ವಿಮರ್ಶಕರು 'ರೂಪ'ದ ಬಗೆಗೆ ಬಂಡೆದ್ದಿರುವುದಕ್ಕೆ, ಈಗಲೂ ರೂಪ ನಿಷ್ಠೆಯ ಪ್ರಚಾರ ಮತ್ತು ಅದೇ ಸಿದ್ಧಾಂತ ಕೆಲಸ ಮಾಡುತ್ತಿರುವುದೇ ಕಾರಣ. ವಸ್ತುವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ, ಕಾವ್ಯರೂಪವೊಂದೇ ಕಾವ್ಯಮೌಲ್ಯ ನಿರ್ಧಾರದ ಅಳತೆಗೋಲಾಗಿರುವ ಕಾರಣ ಅದನ್ನೇ ಖಂಡಿಸುವುದು ಅನಿವಾರ್ಯವಾಯಿತು. ಕಾವ್ಯ ಎನ್ನುವುದಕ್ಕೇ ಒಂದು ಪ್ರಪಂಚವಿದೆ. ಅಲ್ಲಿ ಅರ್ಹವಾಗುವುದು ಬಿಡುವುದು ಕೂಡ ಆಯಾಕಾಲಗಳಲ್ಲಿ ಪ್ರಚಲಿತವಾಗಿರುವ ಸಾಹಿತ್ಯವಸ್ತು ಮತ್ತು ರೂಪಗಳನ್ನು ಅವಲಂಬಿಸಿಕೊಂಡೆ. ಯಾರೂ ಕೂಡ ಆ ಕಾಲದ್ದಲ್ಲವಾದದ್ದನ್ನು ಸೃಷ್ಟಿಸಲಾರರು. ತರತಮಭಾವ ಕೃತಿಯ ನಿರ್ಮಾಪಕನ ಗ್ರಹಿಕೆಯ ಸಾಮರ್ಥ್ಯ ಮತ್ತು ನಿರೂಪಣೆಯ ನೈಪುಣ್ಯವನ್ನು ಅವಲಂಬಿಸಿರುತ್ತದೆ. ಒಂದು ಕಾಲಘಟ್ಟದಲ್ಲಿ ಒಬ್ಬ ದೊಡ್ಡ ಕವಿ ಇರುವಂತೆಯೇ, ಅವನಿಗಿಂತ ಸ್ವಲ್ಪ ಕೆಳಸ್ತರದಲ್ಲಿ ನೂರಾರು ಕವಿಗಳಿರುತ್ತಾರೆ. ಅವರನ್ನೆಲ್ಲಾ ಕವಿಗಳೇ ಅಲ್ಲ ಎಂದು ಹೇಳುವಂತಿಲ್ಲ. ಈಗ ಸಾಮಾಜಿಕವಾಸ್ತವವನ್ನು ಆಧರಿಸಿ ಕಾವ್ಯವನ್ನು ಬರೆಯುತ್ತಿರುವ ನೂರಾರು ಮಂದಿಯ ಸತತ ಪ್ರಯತ್ನದ ಫಲವಾಗಿ ಒಬ್ಬಿಬ್ಬರು ಇಡೀ ಪರಂಪರೆಯ ಪ್ರತಿನಿಧಿಗಳಾಗಿ ರೂಪುಗೊಳ್ಳುತ್ತಾರೆ. ಚಂಪುವಿಗೆ ಪಂಪರನ್ನರನ್ನು, ನವೋದಯಕ್ಕೆ ಕುವೆಂಪು ಬೇಂದ್ರೆಯನ್ನೂ ಹೆಸರಿಸಿದಾಕ್ಷಣಕ್ಕೆ, ಆಯಾ ಕಾವ್ಯಪರಂಪರೆಯ ನಿರ್ಮಾಣಕ್ಕೆ ಶ್ರಮಿಸಿದ ಬಹುಪಾಲು ಕವಿಗಳು ಲೆಕ್ಕವಿಲ್ಲವೆಂದು ಅರ್ಥವಲ್ಲ. ಆದ್ದರಿಂದ ಈಗ ಬರೆಯುತ್ತಿರುವ ಸಾಮಾಜಿಕ ದೃಷ್ಟಿಕೋನವನ್ನುಳ್ಳ ಕವಿಗಳಿಗೆ, ವಸ್ತುವಿನ ಆಯ್ಕೆಯಿಂದಲೇ ಸೋಲುತ್ತೀರೆಂದು ಬೆದರಿಸುವ ಪರಿಪಾಠವಿಲ್ಲಬೇಕು. ಇದಲ್ಲದೆ ಹಳೆಯ ಕಾವ್ಯಕ್ಕೆ ಅಳತೆಗೋಲಾದ ಕಾವ್ಯ ವಿಮರ್ಶೆಯ ಸೂತ್ರಗಳು ಹೋಗಿ, ಹೊಸ ವಸ್ತುವಿಗೆ ಅಗತ್ಯವಾಗಿ ಹೊಸ ರೂಪಹುಟ್ಟುವಂತೆ, ಹೊಸ ಕಾವ್ಯಕ್ಕೆ ಹೊಸ ವಿಮರ್ಶಾ ಸೂತ್ರಗಳೂ ಸಿದ್ಧಗೊಳ್ಳಬೇಕಾಗುತ್ತದೆ. ಇಲ್ಲವಾದರೆ, ಚೇಳಿನ ಮಂತ್ರ ಕಲಿತು ಹಾವಿನ ಬುಟ್ಟಿಯಲ್ಲಿ ಕೈಯಿಟ್ಟಂತಾಗುತ್ತದೆ ಅಷ್ಟೆ. ಇದನ್ನು ಹೇಳುವ ಉದ್ದೇಶ, ಕಾವ್ಯ ಹೇಗೆ ನಿರೂಪಿತವಾಗಿದ್ದರೂ ನಮ್ಮ ವಿಚಾರಗಳನ್ನು ಹೇಳಿದರೆ ಸಾಕು ಎನ್ನುವುದಲ್ಲ.

ಹೇಳಬೇಕಾದದ್ದನ್ನು ಅಚ್ಚುಕಟ್ಟಾಗಿ ಹೇಳಬೇಕೆಂದು ತಾನೇ ಎಲ್ಲರೂ ಬಯಸು ವುದು ? ಹಾಗೆ ಬಯಸುವುದನ್ನು ಕಾರ್ಯರೂಪಗೊಳಿಸುವಾಗ, ಕವಿ ಹೊಸ ವಿಚಾರಗಳನ್ನು ಒಗ್ಗಿಸಿಕೊಳ್ಳುವುದರಲ್ಲಿ, ಅವನ್ನು ಸಮರ್ಥವಾಗಿ ವ್ಯಕ್ತಮಾಡುವಲ್ಲಿ ರುವ ಹೋರಾಟವೆಲ್ಲಾ ನಿಜವೇ. ಆದರೆ ವಸ್ತು ಮತ್ತು ರೂಪಗಳ ಸಂಬಂಧ ಅವಿನಾಭಾವವಾದದ್ದು. ಅವು ಒಂದನ್ನು ಬಿಟ್ಟು ಮತ್ತೊಂದಿರಲು ಸಾಧ್ಯವಿಲ್ಲ. ಈ ಎರಡರ ಐಕ್ಯತೆಯಲ್ಲಿ ಕೃತಿಯನ್ನು ಮೈತಳೆಯುವಂತೆ ಮಾಡುವ ಪ್ರಯತ್ನದಲ್ಲಿ ಸಫಲನಾಗುವುದೇ ಇಂದಿನ ಕವಿಯ ಸಾಧನೆಯ ಗುರಿ. ಇಂತಹ ಗುರಿ ಇಲ್ಲದೆ ಬರಿಯ ಶಬ್ದ ಮಾಂತ್ರಿಕತೆಯ ಮೋಹವನ್ನು ಹಚ್ಚಿಕೊಂಡ ಕವಿತೆ ಹುಲಿವೇಷವನ್ನು ತೊಟ್ಟ ಕತ್ತೆಯೇ ಸರಿ.

ಬಂಡವಾಳಷಾಹಿ ವ್ಯವಸ್ಥೆಯಲ್ಲಿ ಬರೆಯುತ್ತಿರುವ ಅನೇಕ ಕವಿಗಳಿಗೆ ಸಮಾಜವಾದಿ ವ್ಯವಸ್ಥೆ, ಸ್ವಾತಂತ್ರ್ಯವನ್ನು ಕಸಿದುಕೊಳ್ಳುತ್ತದೆಂಬ ಭಾವನೆ ಇದೆ. ಸಮಾಜವಾದಿ ವ್ಯವಸ್ಥೆಯ ಮಾತು ಹಾಗಿರಲಿ, ತಾವು ನಂಬಿರುವ ವ್ಯವಸ್ಥೆಯಲ್ಲಿ ಸ್ವಾತಂತ್ರ್ಯಕ್ಕಿರುವ ಅರ್ಥವೇನೆಂದು ಅನೇಕರು ತಿಳಿದಂತಿಲ್ಲ. ಕಲಾವಿದ ಊಳಿಗ ಮಾನ್ಯ ಪದ್ಧತಿಯಲ್ಲಿ ರಾಜಾಶ್ರಯದಲ್ಲಿ ಬದುಕುತ್ತಿದ್ದವನು, ಬಂಡವಾಳಷಾಹಿ ಯಲ್ಲಿ ತನಗೆ ಸ್ವಾತಂತ್ರ್ಯ ಸಿಕ್ಕಿತೆಂದುಕೊಳ್ಳುತ್ತಾನೆ. ಆದರೆ ಈ ಸ್ವಾತಂತ್ರ್ಯ ಊಳಿಗಮಾನ್ಯದ ಅರಸು ಮತ್ತು ಜಮೀನುದಾರರ ಹಿಡಿತದಿಂದ ಬಿಡಿಸಿಕೊಂಡ ಬಂಡವಾಳಷಾಹಿಯ ಕೂಗೇ ಆಗಿದೆ ಎನ್ನುವುದು ಅವರ ಗ್ರಹಿಕೆಗೆ ಬಾರದೆ ಹೋಗು ತ್ತದೆ. ವ್ಯಕ್ತಿಗತ ಪರಾಧೀನತೆಯಲ್ಲಿದ್ದ ಕವಿ ಈಗ ವಿಷಯಗತ ಪರಾಧೀನನಾಗಿ ದ್ದಾನೆ. ವ್ಯಕ್ತಿಗತ ಸ್ವೇಚ್ಛೆ ಅವನಿಗೆ ಲಭಿಸಿದೆ. ಇಲ್ಲಿ ಅವನಿಗೆ ದೊರೆತಿರುವ ಸ್ವಾತಂತ್ರ್ಯ ವ್ಯಕ್ತಿ ಜೀವನಕ್ಕೆ ಸಂಬಂಧಿಸಿದ್ದಾದರೂ, ಕಲಾ ಸೃಷ್ಟಿ ವ್ಯಾಪಾರೀ ಪೈಪೋಟಿಯನ್ನು ತಪ್ಪಿಸಿಕೊಂಡು ಬದುಕಲಾರದು. ಬಂಡವಾಳಷಾಹಿ ವ್ಯವಸ್ಥೆ ಯಲ್ಲಿ ಉತ್ಪಾದಕರು ಕೂಲಿಗುಲಾಮರಾಗಿ ಬದಲಾಗಿದ್ದಾರಷ್ಟೆ. ಅಂದರೆ ಬರಹ ಗಾರನನ್ನು ಕೂಲಿಗುಲಾಮತನಕ್ಕೆ ಬೂರ್ಜ್ವಾ ವ್ಯವಸ್ಥೆ ತಂದಿದೆ. ಹಣದ ಶಕ್ತಿ ಯನ್ನು ಅವಲಂಬಿಸಿಕೊಂಡು ರಚಿತವಾಗಿರುವ ಸಮಾಜದಲ್ಲಿ, ಅದರ ಪರಿಸರದಿಂದ ಬೇರೆಯಾದ, ಸಂಪೂರ್ಣ ಸೃಷ್ಟಿಕ್ರಿಯಾ ಸ್ವಾತಂತ್ರ್ಯ, ಬಹಳ ತಮಾಷೆಯ ಮಾತು. ನಮಗೆ ಬೇಕಾದ ಸಾಹಿತ್ಯ ನಿಜವಾಗಲೂ ಸ್ವತಂತ್ರವಾದ, ಬಂಡವಾಳ ಷಾಹಿಯಿಂದ ಬಿಡುಗಡೆ ಹೊಂದಿದ, ಬೂರ್ಜ್ವಾ ಸ್ವೇಚ್ಛಾ ವ್ಯಕ್ತಿವಾದದಿಂದ ಹೊರ ಗುಳಿದ ಸಾಹಿತ್ಯ. ಇಂತಹುದೊಂದು ಸಾಹಿತ್ಯದ ನಿರ್ಮಾಣಕ್ಕೆ ಅವಕಾಶ ಕೊಡದೆ ಬಂಡವಾಳಷಾಹಿ ನಾನಾ ರೀತಿಗಳಿಂದ, ಲೇಖಕವನ್ನು ವಂಚಿತನನ್ನಾಗಿ ಮಾಡು ತ್ತದೆ. ಅನೇಕ ಪದವಿ ಗೌರವಗಳ, ಬಹುಮಾನಗಳ ಆಮಿಷವೂ ಅದು ಬಳಸ ಬಹುದಾದ ಅಸ್ತ್ರಗಳಲ್ಲಿ ಸೇರಿವೆ.

'ವ್ಯಕ್ತಿ'ವಾದಿ ಕವಿಗಳು ತಾವು ರಚಿಸಬಹುದಾದ ಕಾವ್ಯ ತಮ್ಮ ಸ್ವಂತ ಹುಡುಕಾಟವೆಂದುಕೊಂಡರೂ, ಅದು ಬಂಡವಾಳಶಾಹಿಯ ಪ್ರಮುಖ ಲಕ್ಷಣವಾದ 'ಯಜಮಾನ' ನಾಸು ಆಗಿರುತ್ತದೆ. ಸಾಮಾಜಿಕ ಬದಲಾವಣೆಯಲ್ಲಿ 'ಕ್ರಾಂತಿ' ವಹಿಸಬಹುದಾದ ಪಾತ್ರಕ್ಕೆ ವಿಮುಖರಾಗಿ ಅನೇಕ ಬೂರ್ಜ್ವಾ ಕವಿಗಳು ಕ್ರಾಂತಿ, ಹಿಂಸೆಯಿಂದ ಕೂಡಿದುದೆಂದೂ, ಹಿಂಸಾರಹಿತಕ್ರಾಂತಿ ಪುನಃ ಪರಿವರ್ತನೆಯಿಂದ ಈ ವ್ಯವಸ್ಥೆಯಲ್ಲೇ ಸಾಧ್ಯವೆಂದೂ ವ್ಯವಸ್ಥೆಯೊಂದಿಗೆ ರಾಜಿ ಮಾಡಿಕೊಂಡು ನೆಮ್ಮದಿ ಯಾಗಿದ್ದು ಬಿಟ್ಟಿದ್ದಾರೆ. ಏಕೆಂದರೆ ಆರ್ಥಿಕವಾಗಿ ಹಿಂದುಳಿದ ದೇಶಗಳೆಲ್ಲ ಅದರಲ್ಲೂ ನಮ್ಮ ದೇಶದಲ್ಲಿ ಆಳುವ ವರ್ಗಗಳು ತುಂಬಾ ಎಚ್ಚರ ಮತ್ತು ಜಾಣತನದಿಂದ ಸಾಮಾಜಿಕ ಬದಲಾವಣೆಗೆ ಅಗತ್ಯವಾದ ಘೋಷಣೆಗಳನ್ನು ದಿನನಿತ್ಯ ಜನತೆಗೆ ಅನೇಕ ಮಾಧ್ಯಮಗಳ ಮೂಲಕ ಪ್ರಚಾರ ಮಾಡುತ್ತಾರೆ. ಅವನ್ನೇ ಲೇಖಕರಲ್ಲಿ ಅನೇಕರು ನಂಬುತ್ತಾರೆ. ಅದರ ಮೂಲಕ ತಾವೂ ವಂಚಿತರಾಗಿ ಜನತೆಗೂ ವಂಚಿಸುತ್ತಾರೆ.

ಇಂಥ ಸ್ಥಿತಿಯಲ್ಲಿ ಲೇಖಕ ನನ್ನಿಷ್ಟ ಬಂದಂತೆ ಬರೆಯುತ್ತೇನೆ ಯಾರಿಗೆ ತಾನೇ ಯಾಕೆ ಬರೆಯಬೇಕು? ಎನ್ನುವ ಧೋರಣೆ ಅವನ ಸ್ವಂತದ್ದಾಗಿರದೆ, ಬಂಡವಾಳಗಾರ ನನ್ನಿಷ್ಟ ಬಂದಂತೆ ಸರಕನ್ನು ಉತ್ಪಾದಿಸುತ್ತೇನೆ ಎನ್ನುವುದರ ಕೂಸಾಗಿರುತ್ತದೆ. ಬಂಡವಾಳಗಾರನ ಇಷ್ಟಕ್ಕೇ ಲಾಭಕರವಾಗಿ ಈ ಧೋರಣೆಯೂ ಕೆಲಸ ಮಾಡುತ್ತದೆ.

ಆದ್ದರಿಂದಲೇ ಈ ವ್ಯವಸ್ಥೆಯಲ್ಲಿ ಕವಿ ಹಾಡಿರುವ ಬಹುಭಾಗ ಅಧಿಕಾರ ವರ್ಗದ ಭಾವಗಳೇ ಆಗಿವೆ. ಇಂತಹ ಸಂದರ್ಭದಲ್ಲಿ ಜನತೆಯನ್ನು, ಅವರ ಹೋರಾಟದ ದಿಕ್ಕನ್ನೂ ಅರ್ಥ ಮಾಡಿಕೊಳ್ಳದೆ, ದಂತಗೋಪುರದಲ್ಲಿ ಕುಳಿತುಕೊಳ್ಳುವ ಕವಿಯ 'ಕಾವ್ಯ ವಸ್ತು' ಈ ವ್ಯವಸ್ಥೆಯ ಹಿಡಿತಕ್ಕೆ ಸಿಕ್ಕಿಬಿದ್ದು ನರಳುತ್ತಿರುವ ಮಧ್ಯಮ ವರ್ಗದ ವ್ಯಾಪ್ತಿಗೆ ಸೀಮಿತವಾಗಿಬಿಡುತ್ತದೆ. ಏಕೆಂದರೆ ನಲವತ್ತು ಐವತ್ತು ವರ್ಷ ಗಳ ಹೊಸಗನ್ನಡ ಕಾವ್ಯದ ಇತಿಹಾಸವನ್ನು ಗಮನಿಸಿದರೆ, ದುಡಿಮೆಗಾರರನ್ನು, ಕೃಷಿಕರನ್ನು ಅಂದರೆ ಪ್ರಧಾನ ಉತ್ಪಾದಕರನ್ನು, ಸಂಸ್ಕೃತಿಯ ನಿರ್ಮಾಪಕರನ್ನು ಕಾವ್ಯ ವಸ್ತುವಿನಲ್ಲಿ ಉಪೇಕ್ಷೆ ಮಾಡಲಾಗಿದೆ, ಇಲ್ಲವೇ ಒಂದೆರಡು ಕಡೆ ಸಹಾನುಭೂತಿ ಪರವಾದ ರಮ್ಯ ಚಿತ್ರಣವಿದೆ. ಇಂತ ಸ್ಥಿತಿಯಲ್ಲಿ ಕವಿ ಬಂಡವಾಳ ಶಾಹಿ ಪರವಾದವನಾಗಿರುವುದು ಅನಿವಾರ್ಯವಲ್ಲ. ಅದರ ಹಿಡಿತದಿಂದ ಹೊರಬಂದು ಕಾವ್ಯ ರಚನೆ ಮಾಡಿರುವ ಪ್ರಸಂಗಗಳೇ ಇತಿಹಾಸದಲ್ಲಿ ಅಧಿಕವಾಗಿ ದೊರೆಯುತ್ತವೆ.

ಹಾಗೆ ಹೊರಬರಬೇಕಾದರೆ, ತನ್ನ ಸೃಷ್ಟಿಕ್ರಿಯೆಯ ಶಕ್ತಿಯನ್ನು ತುಳಿಯಲ್ಪಟ್ಟ ಜನರ ವಾಣಿಯನ್ನಾಗಿ ಮಾಡಿಕೊಳ್ಳಬೇಕಾಗುತ್ತದೆ. ಹಾಗೆ ಮಾಡಿಕೊಂಡಾಗ ಬೂರ್ಜ್ವಾ ವ್ಯವಸ್ಥೆ ಕೊಡಬಹುದಾದ ಅಸಂಖ್ಯಾತ ಕಿರುಕುಳಗಳನ್ನು, ಕಷ್ಟಗಳನ್ನು ಎದುರಿಸಲು ಸಿದ್ಧನಾಗಬೇಕಾಗುತ್ತದೆ. ಯಾವ ಇಕ್ಕಟ್ಟುಗಳೂ ಬೇಡವೆಂದು ಕೊಂಡು ಇರುವುದನ್ನೇ ಸ್ವಾತಂತ್ರ್ಯವೆಂದುಕೊಂಡು ಬದುಕುವ ಕವಿ ಯಥಾಸ್ಥಿ

ವಾದಿ ಮಾತ್ರವಲ್ಲ, ಜನ ವಿರೋಧೀ ಧೋರಣೆಯುಳ್ಳವನೂ ಆಗುತ್ತಾನೆ. ಅಂತಹುದೊಂದು ಅಪವಾದವನ್ನು ಹೊತ್ತುಕೊಳ್ಳದೆ ಚರಿತ್ರೆಯ ಚಲನ ಶೀಲತೆಯನ್ನು ಗ್ರಹಿಸಿದಾಗ, ಜನಪರವಾದ ಕಾವ್ಯನಿರ್ಮಾಣ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಸಾಧ್ಯವಾಗುತ್ತದೆ.

ಕವಿ, ಚರಿತ್ರೆಯ ಚಲನಶೀಲತೆಯನ್ನು ಗುರುತಿಸಿ, ಸಮುದಾಯ ಹಿತಕ್ಕೆ ಅನುಗುಣವಾದ ಕಾವ್ಯ ನಿರ್ಮಾಣ ಮಾಡಬೇಕೆಂದು ಹೇಳಿದ ಕೂಡಲೇ ಕೆಲವರಿಗೆ 'ಏನಿದು ಪ್ರಚಾರಕ್ಕೋಸ್ಕರ ಕಾವ್ಯವೇ ?' ಎಂಬ ಶಂಕೆ ಮೂಡಬಹುದು. ಅನುಮಾನ ಹುಟ್ಟಿದರೆ ಬಗೆಹರಿಸಬಹುದು. ಆದರೆ ಅಂಥ ಮಾತಾಡಿ ತಪ್ಪಿಸಿಕೊಳ್ಳುವ, ಅದನ್ನೇ ಅಸ್ತ್ರ ಮಾಡಿಕೊಂಡು ಬಗ್ಗು ಬಡಿಯಲು ಹವಣಿಸುವವರ ಬಗೆಗೆ ಕನಿಕರ ತೋರಿಸುವ ಅಗತ್ಯವಿಲ್ಲ. ಪ್ರಚಾರ ಎಂದರೆ ಕವಿ ತಾನು ಗ್ರಹಿಸಿದ ಸತ್ಯವನ್ನು ಜನರಿಗೆ ತಿಳಿಸುವುದು. ಅದನ್ನು ಅವರಿಗೆ ಮನಮುಟ್ಟುವಂತೆ ಮಾಡಿ ತಿಳುವಳಿಕೆಯ ಮಟ್ಟವನ್ನು ಹೆಚ್ಚಿಸುವುದು. ಏನನ್ನೂ ಹೇಳದೇ ಇರುವುದಾದರೆ, ಕವಿ ಕಾವ್ಯವನ್ನು ಹೊರಗೆ ಹಾಕಬೇಕಾದ ಅಗತ್ಯವೇ ಇರುವುದಿಲ್ಲ. ಆದರೆ ಹೊರಗೆ ಬಂದಿರುವ ಕಾವ್ಯವೆಲ್ಲ ಓದುಗರಿಗೆ ಒಂದಲ್ಲ ಒಂದು ರೀತಿಯ 'ಆಲೋಚನೆ'ಯನ್ನು ಹೇಳುವಂತಹುದೇ ಆಗಿದೆ. ಯಾವುದೂ ಅರ್ಥವಿಲ್ಲದ ಶಬ್ದಗಳಾಗಿ ಉಳಿದಿಲ್ಲ. ಯಾವ ಕಾವ್ಯದ ಇತಿಹಾಸವನ್ನು ತೆಗೆದುಕೊಂಡರೂ ಈ ಮಾತು ಸ್ಪಷ್ಟವಾಗುತ್ತದೆ. ಹೀಗಿರುವಾಗ ಕವಿ ತನ್ನ ಕಾಲದಲ್ಲಿ ಬದುಕಬೇಕಾದರೆ, ಸಮಾಜ ಜೀವನದ ಬಗೆಗೆ ಬೆಳೆದು ಬಂದಿರುವ ವೈಜ್ಞಾನಿಕ ತಿಳುವಳಿಕೆಯನ್ನು ತನ್ನದನ್ನಾಗಿ ಮಾಡಿಕೊಳ್ಳಬೇಕಾಗುತ್ತದೆ. ತನ್ನ ಸಮಾಜಕ್ಕೆ, ಅದರ ಒಳಿತಿಗೆ ಬದ್ಧನಾಗಿ ಕವಿ ಬರೆಯುವುದು ಅಗತ್ಯವಾಗುತ್ತದೆ. ಬದ್ಧನಾಗಿ ಎಂದಕೂಡಲೇ ಎಲ್ಲಿಯೋ ಸರಪಳಿಗಳಲ್ಲಿ ಬಂಧಿತನಾಗಿ ನಾಲ್ಕು ಗೋಡೆಗಳ ನಡುವೆ ಕೂತು ಹಿಂಸೆಗೊಳಗಾಗಿ ಬರೆಯಬೇಕಾದವನ ಸ್ಥಿತಿ ಎನ್ನುವಂತೆ, ಪಟ್ಟಭದ್ರಹಿತಾಸಕ್ತಿಗಳು ಬದ್ಧತೆಯ ಬಗೆಗೆ ಅಪಪ್ರಚಾರದ ಹುಯಿಲನ್ನೆಬ್ಬಿಸಿದ್ದಾರೆ. ಸಾಮಾಜಿಕ ವಿಶ್ಲೇಷಣೆಯ ಅತ್ಯಾಧುನಿಕ ಜ್ಞಾನವನ್ನು ಪಡೆದಿರುವ ಈ ಕಾಲದ ಬರಹಗಾರನ ಮಾತಿರಲಿ, ಇಂತಹುದೊಂದು ವಿಶ್ಲೇಷಣೆ ಇಲ್ಲದಿರುವ ಕಾಲಗಳಲ್ಲಿಯೂ ಕೂಡ ಪ್ರಾಚೀನ ಲೇಖಕರು ಯಾವುದೋ ಒಂದು 'ನೆಲೆ'ಗೆ ಬದ್ಧರಾಗಿಯೇ ತಮ್ಮ ಕಾವ್ಯಗಳನ್ನು ರಚಿಸಿದ್ದಾರೆ. ಆ ನೆಲೆಯಿಂದ ಕೂಡ ಅವರು ಅಂದುಕೊಂಡಿರದ ಇತರ ನೆಲೆಗಳ ಬದುಕಿನ ವಿವರಗಳೂ ಅವರ ಕಾವ್ಯಗಳಲ್ಲಿ ತಲೆಹಾಕಿವೆ. ಏಕೆಂದರೆ ಅವರ ಕಾವ್ಯಗಳ ಕಾಲದ ಜೀವನ ಭಿನ್ನ ವರ್ಗಗಳ ನಡುವಣ ಹೋರಾಟದ್ದಾಗಿತ್ತು. ಯಾವೊಬ್ಬ ಕವಿಯಾಗಲೀ ತಾನು ಯಾವುದೇ ವರ್ಗಗಳಿಗೆ ಬದ್ಧನಾಗಿ ಕಾವ್ಯ ಬರೆಯುತ್ತಿಲ್ಲ ಎಂದುಕೊಂಡರೆ ಅವನು ಇರುವುದೇಕೆಂಡನ್ನೂ ಬಿಟ್ಟು ಯಾರಿಗೆ ಬರೆಯುತ್ತಿದ್ದಾನೆ ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಜಗತ್ತಿನಲ್ಲಿ

ಇಲ್ಲಿಯವರೆಗೆ ನಿರ್ಮಾಣವಾಗಿರುವ ಎಲ್ಲಾ ಕಾವ್ಯ ವಿಚಾರಗಳೂ ಈ ಎರಡು ಪಕ್ಷ ಗಳಲ್ಲಿ ಒಂದಕ್ಕೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಷಾಮಿಲಾಗಿರುತ್ತವೆ. ಮೂರನೆಯದೊಂದು ಈ ವ್ಯವಸ್ಥೆಗಳಲ್ಲಿರುವುದು ಸಾಧ್ಯವಿಲ್ಲ. ತಾನು ಯಾವುದಕ್ಕೂ ಬದ್ಧನಲ್ಲವೆಂದು ತಿಳಿದುಕೊಂಡು ಅಲ್ಪಸಂಖ್ಯಾತ ಆಳುವ ವರ್ಗದ ಆಲೋಚನೆಯನ್ನು ಬೆಂಬಲಿಸುವುದಕ್ಕಿಂತ, ವರ್ತಮಾನಕಾಲದ ಸಮಾಜ ವೈರುಧ್ಯಗಳ ಆಳವನ್ನು ಸಮಗ್ರವಾಗಿ ಗ್ರಹಿಸಿ ಕಾವ್ಯರಚನೆಯಲ್ಲಿ ಅದನ್ನು ಕಂಡರಿಸಬೇಕು. ಇದರಿಂದ ಒಂದು 'ಪಕ್ಷ' ದೃಷ್ಟಿಗೆ ಒಳಗಾಗಿದ್ದ ಕವಿಯನ್ನು ಬದ್ಧತೆ ಸಮುದಾಯಕ್ಕೆ ಬಿಡಿಸಿ ತರುತ್ತದೆ. ಸಮುದಾಯಕ್ಕೆ ಬದ್ಧನಾಗಿ ಕವಿ ಬದುಕಿದರೆ, ಸನಾತನ ಧರ್ಮ ಪ್ರಚಾರಕ್ಕೆ, ಬಂಡವಾಳಷಾಹಿ ವ್ಯಕ್ತಿವಾದಕ್ಕೆ ಇಲ್ಲಿಯವರೆಗೆ ಮಿತಿಗೊಂಡ ಕಾವ್ಯ ವಿಸ್ತಾರ ಜಗತ್ತಿಗೆ ಬಂದಂತಾಗುತ್ತದೆ. ಕವಿ ಹಿಂದೆಯೂ ಬದ್ಧನಾಗಿದ್ದ ಈಗಲೂ ಬದ್ಧನಾಗಿ ದ್ದಾನೆ ; ಅವನು ಇಲ್ಲ ಎಂದು ಹೇಳಿಕೊಂಡರೂ ಕೂಡ. ಆದರೆ ಈ ವ್ಯವಸ್ಥೆಗೆ ಬದ್ಧನಾಗಿದ್ದ ಎನ್ನುವಾಗ, ಅಲ್ಪಸಂಖ್ಯಾತ ಶೋಷಕರ ಆಶೋತ್ತರಗಳಿಗೆ ಬದ್ಧನಾಗಿ, ಕ್ರಿಯಾಶೀಲವಾದ ಜನತೆಯನ್ನು ದೂರ ಮಾಡಿದ್ದ ಎಂದು ಅರ್ಥ. ಈಗ ಅದರಿಂದ ಬಿಡಿಸಿಕೊಂಡು ಮನುಷ್ಯ ಇತಿಹಾಸದ ನವನಿರ್ಮಾಣಕ್ಕೆ ಹೋರಾಡುತ್ತಿರುವ ಶ್ರಮ ಜೀವಿಗಳತ್ತ ತನ್ನನ್ನು ಕೊಟ್ಟುಕೊಳ್ಳುವ ಆ ಮೂಲಕ ಹೊಸಜಗತ್ತನ್ನು ಕಂಡು ಕೊಳ್ಳುವ ಅವಕಾಶ ಕವಿಗೆ ಒದಗುತ್ತದೆ.

ಕವಿ ಬದ್ಧನಾದರೆ ರಾಜಕೀಯವಾಗುತ್ತದೆ ಎನ್ನುವವರಿಗೆ ಈ ಹಿಂದೆಯೇ ವಿವರಿಸಿ ಹೇಳಲಾಗಿದೆ. ನಮ್ಮಲ್ಲಿರುವ ಎಲ್ಲ ಸಮಸ್ಯೆಗಳಿಗೆ ರಾಜಕೀಯ ಸಮಸ್ಯೆ ಯೊಂದೆ ಮೂಲ. ಆದ್ದರಿಂದ ರಾಜಕೀಯದ ಬಗೆಗೆ ಉದಾಸೀನ ಎಂದರೆ, ಅದು ಇರುವಂತೆಯೇ ಪೋಷಿಸುವುದು, ಇಲ್ಲವೇ ಅದನ್ನೇ ಕೊಂಡಾಡುವುದು. ಕನ್ನಡದ ಈಗಿನ ಲೇಖಕರು ಸಮಕಾಲೀನ ವಸ್ತುವನ್ನೆತ್ತಿಕೊಂಡು ಶಕ್ತಿಶಾಲೀ ಬರವಣಿಗೆ ಯನ್ನು ನಿರ್ಮಾಣ ಮಾಡದಿರುವುದಕ್ಕೆ, ಈಗಿನ ರಾಜಕೀಯ ಸಂಕೀರ್ಣತೆಯನ್ನು ಅರ್ಥಮಾಡಿಕೊಳ್ಳದಿರುವುದೇ ಆಗಿದೆ. ಆದರೆ ಬರಹಗಾರ ಬದ್ಧನಾಗಬೇಕೆಂದು ಹೇಳುವಾಗ, ಜೀವನದ ಒಂದು ಮುಖವನ್ನು ಮಾತ್ರ ನೋಡಬೇಕೆಂದು ಹೇಳುವು ದಲ್ಲ—ಎಂದರೆ, ಕೇವಲ ಬಡವರು ಶ್ರಮಿಕರನ್ನೇ ಕುರಿತು ಬರೆಯುವಂತೆ ಆಶಿಸುವು ದಲ್ಲ. ಜೀವನದ ಸಮಗ್ರ ಚಿತ್ರವನ್ನು ಗ್ರಹಿಸಿ, ಅದರೊಳಗೆ ಕೆಲಸ ಮಾಡುವ ವೈರುಧ್ಯಗಳ ನಾಡಿ ಹಿಡಿದು, ಹೊಸ ಬದುಕಿಗಾಗಿ ಹೋರಾಟ ಮಾಡುವ ಶಕ್ತಿ ಗಳನ್ನು ಗುರುತಿಸಿಕೊಂಡು, ಅವುಗಳ ಸತ್ಯ ಚಿತ್ರಣವನ್ನು ನೀಡುವುದು. ಹೀಗೆ ಮಾಡಿದ್ದೇನೆಂದುಕೊಂಡು ಹೊರಟಾಗಲೂ ಅವನ ಉದ್ದೇಶಕ್ಕೆ ಅನುಗುಣವಾದ ಕೃತಿ ರಚಿತವಾಯಿತೆಂದೇನು ಅರ್ಥವಲ್ಲ. ಆ ಉದ್ದೇಶದ ವಿರೋಧೀ ನೆಲೆಯನ್ನು ಕೃತಿ ತಲುಪಿದಂತೆ ಕಾಯ್ದುಕೊಳ್ಳುವ ಎಚ್ಚರವೂ, ವಾಸ್ತವದ ಅರಿವೂ ಲೇಖಕನಿಗಿರ

ಬೇಕು. ಕವಿ ಬದ್ಧನಾಗಿರಬೇಕೆಂದಾಗ ಅವನು ಎಡಕಮ್ಯುನಿಸ್ಟ್ ಪಕ್ಷದ ಸದಸ್ಯನಾಗಿ, ಅದರ ಘೋಷಣೆಗಳಿಗೆ ಮುಖವಾಣಿಯಾಗಬೇಕೆಂದೂ ತಿಳಿಯಬಾರದು. ಕವಿ ತನ್ನ ತಿಳುವಳಿಕೆಯ ಬೇರುಗಳನ್ನು ವೈಜ್ಞಾನಿಕವಾದ ಸಮಾಜ ವಿಶ್ಲೇಷಣೆಯ ತತ್ವದ ನೆಲೆಯಲ್ಲಿ ಊರಬೇಕೆಂದು ತಿಳಿಯಬೇಕು. ಕಾವ್ಯ, ಸಮಾಜವಿಚಾರಗಳನ್ನು ಕುರಿತೇ ಹುಟ್ಟುವುದಾದ್ದರಿಂದ, ಅದು ಬಳಸಿಕೊಳ್ಳಬಹುದಾದ ವಸ್ತುವಿನಲ್ಲಿರುವ ಮೂಲ ಘರ್ಷಣೆಗಳನ್ನು ಗುರುತಿಸಿಕೊಳ್ಳಲು ಈ ಬಗೆಯ ಬದ್ಧತೆಯಿಂದ ಸಾಧ್ಯವಾಗುತ್ತದೆ. ಕಾವ್ಯ ಸಮಾಜಬದ್ಧವಾಗಬೇಕೆಂಬುದು ಸಂಪ್ರದಾಯವಾದಿಗಳೂ ಪ್ರಗತಿಪರರೂ ಒಪ್ಪಿರುವ ವಿಚಾರವೇ ! ಆದರೆ ಸಮಾಜದ ಬೆಳವಣಿಗೆಯ ದೃಷ್ಟಿಯಿಂದ, ಸಂಸ್ಕೃತಿಯ ಹೊಸ ಸೃಷ್ಟಿಗಾಗಿ ಯಾವುದು ಆರೋಗ್ಯಕರವೆಂದು ಗ್ರಹಿಸಿಕೊಳ್ಳದಿದ್ದರೆ, ಕಾಲ ಮುಂದಕ್ಕೆ ಹೋಗಿ ಕವಿ ಹಿಂದುಳಿಯುತ್ತಾನೆ. ಚರಿತ್ರೆ ಅವನನ್ನು ಅಣಕಿಸುತ್ತದೆ.

ಒಂದು ಪ್ರಗತಿಪರ ಕೃತಿಯ ಸಾಮಾಜಿಕ ರಾಜಕೀಯ ಮಹತ್ವ ಅದರಲ್ಲಿ ವ್ಯಕ್ತವಾಗಿರುವ ವಾಸ್ತವಸತ್ಯ, ಮನಮುಟ್ಟುವಂತಹ ವಸ್ತು ಪ್ರಾತಿನಿಧ್ಯ, ಸಮಾಜ ಜೀವನದ ಬೆಳವಣಿಗೆಗೆ ಪ್ರಮುಖವಾಗಿ ಕಾರಣವಾಗಿರುವ ಮಾರ್ಗಗಳ ದರ್ಶನವನ್ನು ಮಾಡಿಸುವುದರಲ್ಲಿದೆ. ಉತ್ತಮವಾದ ಕಾವ್ಯಕ್ಕೆ ಬದ್ಧತೆ ಅದರ ಅಂತರ್ಗತ ಲಕ್ಷಣವಾಗಿರುತ್ತದೆ. ಹಾಗಲ್ಲದೆ ಹೇಳಬೇಕಾದ್ದನ್ನು ಮನಮುಟ್ಟಿಸದೆ ಶಬ್ದಗಳ ದೊಂಬರಾಟವಾಗುವುದಾದರೆ, ಅದು ಬದ್ಧತೆಯ ಅಪ್ರಬುದ್ಧತೆಯಾಗುತ್ತದೆ. ಆದ್ದರಿಂದ ಕವಿಗೆ ಬದ್ಧತೆ ಎಂದರೆ ಒಂದು ಸಂಕುಚಿತ ದೃಷ್ಟಿಕೋನಕ್ಕೆ ಅಡಿಯಾಳಾಗು ಎಂದು ಹೇಳುವ ಕರೆಯಲ್ಲ. ಇಲ್ಲಿಯವರೆಗೆ ಸಂಕುಚಿತ ದೃಷ್ಟಿಯೇ ಪರಮ ಸತ್ಯವೆಂದು ಕೊಂಡವನನ್ನು ವಾಸ್ತವ ಜಗತ್ತಿಗೆ ಕರೆತಂದು ಸಾಮಾಜಿಕ ಜವಾಬ್ದಾರಿಯನ್ನು ಹೊರುವಂತೆ ಮಾಡುವುದೇ ಆಗಿದೆ.

ಕನ್ನಡ ಕಾವ್ಯದಲ್ಲಿ ಬದ್ಧತೆಯ ಮಾತು ಇತ್ತೀಚಿಗಷ್ಟೆ ಚಲಾವಣೆಗೆ ಬರುತ್ತಿದೆ. ಈ ಹೊಸ ಮಾತಿನ ಅರ್ಥದ ಪರಿಧಿಯನ್ನು ಗ್ರಹಿಸುವುದಕ್ಕೆ ಮೊದಲೇ ಅನೇಕ ಹಿತಾಸಕ್ತವಲಯುಗಳಿಂದ ವಿರೋಧದ ದಾಳಿ ಆರಂಭವಾಗಿದೆ. ಈ ದಾಳಿಯ ಹಿನ್ನೆಲೆಯಲ್ಲಿ ಕವಿಯನ್ನು 'ಪವಿತ್ರ'ನನ್ನಾಗಿ ಉಳಿಸುವುದರಿಂದ ಹಿಡಿದು ಆತ್ಮನಿರೀಕ್ಷಣೆಯಿಂದ ಕಳೆದು ಹೋಗದಂತೆ ಕಾಪಾಡಿಕೊಳ್ಳುವ, ಕೋಟೆಕಟ್ಟುವ ಕೆಲಸ ಆರಂಭವಾಗಿದೆ. ಆದರೆ ಚಲನಶೀಲ ಸಮಾಜದ ಮುನ್ನಡೆಯನ್ನು ಹಿಂದಕ್ಕೆಳೆಯುವ ಕೆಲಸ ಎಷ್ಟು ಬಾಲಿಶವಾದದ್ದೆಂದು ಚರಿತ್ರೆ ಬಲ್ಲವರಿಗೆಲ್ಲ ಗೊತ್ತಿರುವುದೇ ! ಕಾವ್ಯ ನಿರ್ಮಾಣಕ್ಕೆ ಹಿನ್ನೆಲೆಯಾಗಿ ಎಲ್ಲ ಕಾವ್ಯ ಚಳುವಳಿಗಳೂ ಕೆಲವು ಗೊತ್ತು ಗುರಿಗಳನ್ನಿಟ್ಟು ಕೊಂಡಿರುತ್ತವೆ. ಅಂತಹ ಗೊತ್ತುಗುರಿಗಳು ಕಾವ್ಯನಿರ್ಮಾಣದಲ್ಲಿ ಮೈತಳೆ

ದಿವೆಯೋ ಇಲ್ಲವೇ ಎನ್ನುವುದು ಕೃತಿ ನಿರ್ಮಾಣದ ನಂತರ ಹೇಳಬೇಕಾದ ಮಾತೇ ಹೊರತು, ಕಾವ್ಯ ಚಳುವಳಿಯ ಧ್ಯೇಯೋದ್ದೇಶಗಳೇ ಕಾವ್ಯಕ್ಕೆ ಊನ ಎನ್ನುವುದು ಅವಾಸ್ತವವಾಗುತ್ತದೆ. ಕಾವ್ಯಪ್ರಯೋಜನವನ್ನು ಕುರಿತು ಪ್ರಗತಿವಾದಿಗಳು ಹೇಳುವ ಮಾತುಗಳಿಗೆ ತೀವ್ರ ವಿರೋಧವನ್ನು ಪ್ರಕಟಮಾಡುವವರೇ ಈಗಾಗಲೇ ಕಾವ್ಯ ಉಪಯೋಗವಾಗಿರುವ, ಆಗುತ್ತಿರುವ ವಿಚಾರದಲ್ಲಿ ವಿರೋಧ ವ್ಯಕ್ತ ಮಾಡದೆ, ಅದನ್ನು ಒಪ್ಪಿಕೊಂಡಿರುವುದನ್ನು ಗಮನಿಸಿದರೆ, ಅವರ ವಿರೋಧವಿರು ವುದು ಕಾವ್ಯದ ಔಪಯೋಗಿಕ ವಿಚಾರದಲ್ಲಲ್ಲ ಎಂಬುದು ಸ್ಪಷ್ಟವಾಗುತ್ತದೆ; ಹಾಗೇ ಅವರು ನಿಂತ ನೆಲೆಯೂ ಸ್ಪಷ್ಟವಾಗುತ್ತದೆ.

ನಮ್ಮ ಪ್ರಾಚೀನ ಕಾವ್ಯ ಮೀಮಾಂಸೆಯನ್ನು ಗಮನಿಸಿದರೆ ಕಾವ್ಯ ನಿರ್ಮಾಣದ ಪ್ರಮುಖ ಅಂಶಗಳಲ್ಲಿ ವ್ಯುತ್ಪತ್ತಿಯೂ ಒಂದು. ಅದು ಅನೇಕ ದರ್ಶನಗಳಿಂದ, ಲೋಕಾನುಭವದಿಂದ, ಇನ್ನಿತರ ಮೂಲಗಳಿಂದ ಬರುವಂತಹುದು. ಈ ದಿನದ ಕವಿ ವ್ಯುತ್ಪತ್ತಿಯ ಕ್ಷೇತ್ರವನ್ನು ತನ್ನ ಕಾವ್ಯ ವ್ಯವಹಾರಕ್ಕೆ ಮತ್ತಷ್ಟು ವಿಸ್ತರಿಸಿಕೊಳ್ಳಬೇಕು. ಇಪ್ಪತ್ತನೇ ಶತಮಾನದಲ್ಲಿ ಮನುಷ್ಯನನ್ನು ಕುರಿತಂತೆ, ಸಮಾಜವನ್ನು ಕುರಿತಂತೆ ಬೆಳೆದಿರಬಹುದಾದ ವೈಜ್ಞಾನಿಕ ಸಾಧನೆಗಳನ್ನು, ಹಾಗೆಯೇ ಇನ್ನಿತರ ವಲಯಗಳಲ್ಲಿನ ಸಾಧನೆಗಳನ್ನು ಗ್ರಹಿಸಿ, ಇವುಗಳ ಮೂಲಕ ಸಮಾಜದ ಅಂತರಂಗ ಸತ್ಯವನ್ನರಿಯಲು ಪ್ರಯತ್ನಿಸಬೇಕು. ಇದನ್ನು ತಿಳಿದು ಕೊಳ್ಳುವುದಕ್ಕೆ ಬೇಕಾದ ದೃಷ್ಟಿಕೋನವೊಂದು ಸಮಾಜವಾದಿ ವಾಸ್ತವತೆಯಲ್ಲಿ ಅಡಗಿದೆ. ಸಮಾಜವಾದಿ ವಾಸ್ತವ ಎಂದರೆ, ಬದುಕನ್ನು ವಾಸ್ತವವಾಗಿ ನೋಡುವ ದೃಷ್ಟಿಕೋನ. ಅಭಿವ್ಯಕ್ತಿಯಲ್ಲಿ ವ್ಯಕ್ತವಾಗಬಹುದಾದ ಆಲೋಚನೆಯನ್ನು ಕ್ರಮ ಗೊಳಿಸಿ, ಅದರ ಆಳವನ್ನು ರೂಪಕ್ಕೆ ತಂದುಕೊಡುವ ಪರೀಕ್ಷಕ ದೃಷ್ಟಿ ಇದು. ಈ ಪರೀಕ್ಷಕನ ಕೆಲಸ ಕ್ರಾಂತಿ ಮಾಡುವುದಲ್ಲ. ಸಾಹಿತ್ಯ ಮತ್ತು ಕ್ರಾಂತಿಗಳೆರಡೂ ಸಮಾಜ ಜೀವನದಿಂದ ಹುಟ್ಟುವಂತಹವು. ಎರಡಕ್ಕೂ ಪ್ರಜಾ ಜೀವನವೇ ಕೇಂದ್ರ. ಸಾಹಿತ್ಯ ತನ್ನಲ್ಲಿ ಕ್ರಾಂತಿ ಮಾಡಿಕೊಳ್ಳುವುದಲ್ಲದೆ ಕ್ರಾಂತಿಗೂ ಪೂರಕವಾಗಿ ಕೆಲಸ ಮಾಡಬೇಕು; ತನ್ನಲ್ಲಾದ ಬದಲಾವಣೆ ಭದ್ರವಾಗಿ ಮುಂದುವರೆಯಬೇಕಾದರೆ. ಸಮಾಜದಲ್ಲಿ ಸಾಮಾಜಿಕ ದೃಷ್ಟಿಕೋನಗಳು ಬದಲಾಗಿರುವಾಗಲೆಲ್ಲಾ ಕವಿಗಳ ವಸ್ತು-ಶೈಲಿ-ರೂಪಗಳು ಅಂದರೆ ರಚನಾಸೂತ್ರಗಳು ಬದಲಾಗಿವೆ. ಸಮಾಜವಾದಿ ವಾಸ್ತವತೆಯನ್ನು ಗಳಿಸಿಕೊಂಡ ಕವಿಗೆ ಹಳೆಯ ವಸ್ತುರೂಪಗಳನ್ನು ಕೂಡ ಮುಂದು ವರೆಸಿಕೊಂಡು ಹೋಗುವುದು ಸಾಧ್ಯವಾಗುವುದಿಲ್ಲ. ಹಾಗೆಂದು ಇದ್ದಕ್ಕಿದ್ದಂತೆ ಬದಲಾಗುತ್ತಾನೆಂದಲ್ಲ. ಹಳೆಯದರ ಹೊಟ್ಟೆಯಲ್ಲಿ ಹೊಸದನ್ನು ಹುಟ್ಟಿಸಿಕೊಂಡು ಅದರಿಂದ ಬೇರೆಯಾಗುತ್ತಾನೆ. ಒಂದು ಕಾಲದಲ್ಲಿ ಹುಟ್ಟಿದ ಕಾವ್ಯಕ್ಕೆ, ಆ ಕಾಲದಲ್ಲಿ ಪ್ರಾಮುಖ್ಯವನ್ನು ಪಡೆದ ಕಾವ್ಯಸಿದ್ಧಾಂತಗಳಿಗೆ ಪರಸ್ಪರ ಜನ್ಯ-ಜನಕ ಸಂಬಂಧ

ವಿರುತ್ತದೆ. ಅಂದರೆ ಕಾವ್ಯದಿಂದ ವಿಮರ್ಶಾ ಸಿದ್ಧಾಂತಗಳು ರೂಪುಗೊಳ್ಳುವಂತೆ, ವಿಮರ್ಶಾ ಸಿದ್ಧಾಂತಗಳಿಗನುಗುಣವಾಗಿ ಕಾವ್ಯಗಳೂ ನಿರ್ಮಾಣವಾಗುತ್ತವೆ. ಬಂಡವಾಳಶಾಹಿ ಸಿದ್ಧಾಂತಗಳನ್ನಾಧರಿಸಿ ರಚಿತವಾದ ಕಾವ್ಯಕ್ಕೆ ಅದರದೇ ಆದ ವಿಮರ್ಶಾ ಸೂತ್ರಗಳೂ ಕೆಲಸ ಮಾಡುತ್ತಿವೆ. ಸಮಾಜವಾದಿ ವಾಸ್ತವತೆಯನ್ನು ಅವಲಂಬಿಸಿದಂತಹ ಕಾವ್ಯನಿರ್ಮಾಣಕ್ಕೆ ಅಗತ್ಯವಾದ ವಿಮರ್ಶಾ ಸೂತ್ರಗಳ ಚಾಲನೆ, ಚಲಾವಣೆ, ಸ್ಪಷ್ಟನೆ ಈಗ ಅತ್ಯಂತ ತುರ್ತಿನ ಕೆಲಸವಾಗಿದೆ. ಆ ರೀತಿಯ ಕೆಲಸ ಮಾಡುತ್ತಿರುವವರನ್ನು ಕೇವಲ ಘೋಷಣೆಗಳನ್ನು ಕೂಗುತ್ತಿರುವವರೆಂದೂ, ಧ್ಯಾನ ಕಾವ್ಯದಿಂದ ವಂಚಿತರೆಂದೂ, ದೂರಲಾಗುತ್ತಿದೆ. ಈ ದೂರನ್ನು ಹೊರಿಸುವವರಿಗೆ ಸಮಕಾಲೀನ ಸತ್ಯ ಮರೆತು ಹೋಗುತ್ತದೆ. ಅಂದರೆ ಸಮಕಾಲೀನ ರಾಜಕೀಯ ಹೋರಾಟದಲ್ಲಿ ಕ್ರಾಂತಿಕಾರಿ ಸಿದ್ಧಾಂತದ ದೃಷ್ಟಿಕೋನದಿಂದ ಕೂಡಿದ ಜನತೆಯು ಹೊಸ ಸಮಾಜವನ್ನು ಕಟ್ಟಲು ಹೊರಟಿರುವುದಕ್ಕೆ ಕವಿ ತನ್ನ ಕಣ್ಣನ್ನು ತೆರೆದು, ಆ ಬದುಕಿನ ಶ್ರೀಮಂತ ಅನುಭವವನ್ನು ಕೃತಿರೂಪಕ್ಕೆ ತರಲು ಹೊರಟಿದ್ದಾನೆಂಬುದು ತಿಳಿಯದೆ ಹೋಗುತ್ತದೆ. ಈಗ ಈ ಜಗತ್ತಿನ ಬಹುಪಾಲು ಶ್ರಮಿಕರು ಕ್ರಾಂತಿಯ ಅಗತ್ಯವನ್ನು ಗ್ರಹಿಸಿದ್ದಾರೆ. ಇಂತಹ ಸಂದರ್ಭದಲ್ಲಿ ಕಾವ್ಯದ ಜವಾಬ್ದಾರಿ ಎದ್ದಿರುವವನನ್ನು ಮುಂದೆ ನಡೆಸುವುದು. ಈ ದಿಶೆಯಲ್ಲಿ ಎಷ್ಟೆಷ್ಟು ತೀವ್ರವಾದ ಸಹಕಾರ ದೊರೆಯಬಹುದೋ ಅಷ್ಟು ಬೇಗ ಭ್ರಷ್ಟ ವ್ಯವಸ್ಥೆಯ ನಾಶವಾಗುತ್ತದೆ. ತುಡಿಯುತ್ತಿರುವ ಜನಮನಗಳನ್ನು ಕವಿ ಪ್ರತಿಬಿಂಬಿಸದೆ ಬೇರೇನು ಕೆಲಸ ಮಾಡಬೇಕು ? ಸಮಾಜದಲ್ಲಿ ನಡೆಯುತ್ತಿರುವ ಹೋರಾಟವನ್ನು ಯಾವ ಪೂರ್ವಗ್ರಹವೂ ಇಲ್ಲದೆ ಕಣ್ಣು ಬಿಟ್ಟು ಅಂದರೆ ವಾಸ್ತವದ ಗ್ರಹಿಕೆಯಿಂದ ನೋಡುವವನಿಗೆ ತಾನು ಯಾವ ಕಡೆ ಇರಬೇಕೆಂಬುದು ಗೊತ್ತಾಗುತ್ತದೆ. ಹಳೆಯ ಕಾಲದ ಬರಹಗಾರನ ದೃಷ್ಟಿಕೋನಕ್ಕಿಂತ ಭಿನ್ನವಾದ ರೀತಿಯಲ್ಲಿ ಈ ದಿನ ಸಮಾಜವಾದಿ ವಾಸ್ತವತೆಯನ್ನು ಗ್ರಹಿಸಿದ ಕವಿಗೆ ತಾನು ಜನಪರವಾಗಿರಬೇಕೆಂಬುದು ಸ್ಪಷ್ಟ ಮಾರ್ಗದರ್ಶನವಾಗುತ್ತದೆ. ಆಗ ಮೂಡಿಬರುವ ಕಾವ್ಯ ಗುಣಾತ್ಮಕವಾಗಿಯೂ ಉತ್ತಮ ಮಟ್ಟದ್ದಾಗಿರುತ್ತದೆ. ಅಂದರೆ ತಾನು ಸೃಷ್ಟಿಮಾಡುವ ಕಲಾಕೃತಿಯಿಂದ ಆ ದೃಷ್ಟಿಕೋನ ಬೇರೆಯಾದಾಗಿ ಇರುವುದಿಲ್ಲ. ಅವೆರಡೂ ಅಭಿನ್ನವಾಗಿರುತ್ತವೆ. ಇಂತಹುದೊಂದು ಅವಿನಾಭಾವ ಸಂಬಂಧವನ್ನು ಸಮಾಜವಾದಿ ವಾಸ್ತವತೆ ಕವಿಗೆ ತಂದುಕೊಡುತ್ತದೆ. ಇಡೀ ಬದುಕನ್ನು ಸತ್ಯನಿಷ್ಠವಾಗಿ ಗಮನಿಸಿ, ಅದರ ವಿಶ್ಲೇಷಣೆಗೆ ಕವಿ ತೊಡಗುವಂತೆ ಮಾಡುತ್ತದೆ.

ಒಬ್ಬ ಕೂಲಿ ಮಾಡುವವನು ದಿನವೆಲ್ಲಾ ದುಡಿದು ತಂದರೂ ಹೊಟ್ಟೆಗಿಲ್ಲದೆ, ಬಟ್ಟೆಗಿಲ್ಲದೆ ಕೊಳಕವಾಗಿ ನರಳುತ್ತಿದ್ದಾನೆಂದರೆ, ಅದಕ್ಕೆ ಶ್ರೀಮಂತ ಅವನನ್ನು ಕೆಲಸ ಮಾಡದ ಸೋಮಾರಿ ಎಂದೂ, ಮಠಾಧಿಪತಿ ಅದು ಅವನ ಕರ್ಮವೆಂದೂ

ಬುದ್ಧಿಜೀವಿ ಅದು ಅವನ ಅಜ್ಞಾನವೆಂದೂ ತಮ್ಮ ತಮ್ಮ ದೃಷ್ಟಿಕೋನಕ್ಕನುಗುಣವಾಗಿ ಹೇಳುತ್ತೇವೆನ್ನಬಹುದು. ಇವರೆಲ್ಲಾ ಹೀಗೆ ಹೇಳಿದರೂ ಈ ಹೇಳಿಕೆಗೆ ಹಿಂದಿನ ಆಲೋಚನೆ ಬಂಡವಾಳಷಾಹಿಯದೇ! ಕವಿಯೂ ಇವರ ಜೊತೆ ಸೇರಿದರೆ ಕೂಲಿಯವನ ನರಳಾಟಕ್ಕೆ ಈ ಮೂರು ಅಭಿಪ್ರಾಯಗಳನ್ನೂ ಕಾರಣಗಳಾಗಿ ಹೇಳಬಹುದು. ಇವರೊಡನಿಲ್ಲದೆ ಹೊರಗಿದ್ದಾಗ ಅವನ ಬಡತನಕ್ಕಿರುವ ಮೂಲಕಾರಣವನ್ನು ಹುಡುಕಲೂಬಹುದು. ಅದು ಸ್ಪಷ್ಟವಾಗಿ ತಿಳಿಯುವುದು ಸಮಾಜವಾದಿ ವಾಸ್ತವ ದೃಷ್ಟಿಕೋನದಿಂದ ಮಾತ್ರ.

ಈ ದೃಷ್ಟಿಕೋನದಿಂದಲೇ ಕೃತಿಯ ವಿಮರ್ಶೆ ಮಾಡಿದಾಗ ಆ ಕೃತಿಯ ಮೂಲಭೂತ ಸಾಮಾಜಿಕ ಸ್ವರೂಪವನ್ನು ಗುರುತಿಸಿಕೊಂಡು, ಅದು ಎತ್ತ ಸಾಗುತ್ತಿದೆ ಎಂಬುದನ್ನೂ ತಿಳಿಯಬಹುದು. ಒಂದು ಕೃತಿ ತನ್ನ ಕಾಲದ ಒಂದು ವಿಶಿಷ್ಟ ಸಂದರ್ಭದಲ್ಲಿ ಹುಟ್ಟುತ್ತದೆ. ಅಂಥ ಕೃತಿಯ ಲೇಖಕ ತಪ್ಪು ವಿಚಾರ ಧೋರಣೆಯಿಂದ ತನ್ನ ಕೃತಿಯನ್ನು ನೇಯ್ದರೆ ಅವನು ತನ್ನ ಕೃತಿಯನ್ನು ಹಾಳುಮಾಡಿಕೊಳ್ಳುತ್ತಾನೆ. ವಿಮರ್ಶಕ ಕೃತಿಯಲ್ಲಿ ಅಂತರ್ಗತವಾಗಿರುವ ವಿಚಾರವನ್ನು ಹೊರ ಹಾಕಬೇಕು. ಅಲ್ಲದೆ ವಿಮರ್ಶೆ ಎನ್ನುವುದು ಕೃತಿಯ ಸಾಮಾಜಿಕ ವಿಶ್ಲೇಷಣೆಯ ಮೂಲಭೂತ ಅಂಶವಾಗಬೇಕು. ವಿಮರ್ಶಕನನ್ನು ಮೆಚ್ಚಿಸುವುದಕ್ಕೆ ಕಾವ್ಯ ಬರೆಯುವುದಕ್ಕಿಂತ ಕಾವ್ಯಕ್ಕೆ ಅಧೋಗತಿ ಬೇರೊಂದಿಲ್ಲ. ನವ್ಯಕಾವ್ಯಕ್ಕೆ ಬಂದೊದಗಿದ ಗತಿ ಅದು. ವಿಮರ್ಶಕ ಕವಿ ಪರವಾಗಿ ಜನತೆಯ ಹತ್ತಿರಕ್ಕೆ ಕಾವ್ಯದ ಹೃದಯವನ್ನು ಪರಿಚಯಿಸಬೇಕು. ಜನತೆಯೊಡನಿದ್ದು ಕಾವ್ಯವನ್ನು ಪರಿಶೀಲಿಸಬೇಕು. ಹೀಗೆ ಮಾಡಿದಾಗ ಕಾವ್ಯ ಮತ್ತು ಜನತೆಯ ನಡುವೆ ಅಂತರ ಕಡಿಮೆಯಾಗುತ್ತದೆ. ಶಕ್ತ ಬರಹಗಾರನ ಕೃತಿ ಒಂದೇ ಕಾಲಕ್ಕೆ ಪಂಡಿತ ಪಾಮರ ಬೇಧವನ್ನು ತೊಡೆದು ಹಾಕಿ, ಅಭಿರುಚಿಯನ್ನು ಬೆಳೆಸಲು ಸಹಕಾರಿಯಾಗುತ್ತದೆ. ವಾಸ್ತವವನ್ನು ಪುನರ್ ಸೃಷ್ಟಿಸುವಾಗ ಪ್ರತಿಮೆಗಳ ಮೂಲಕ ಕಾವ್ಯ ನಿರ್ಮಾಣವಾಗುತ್ತದೆ. ಆದರೆ ಅಂತಹ ಪ್ರತಿಮೆಗಳು 'ವೈಯಕ್ತಿಕ' ಎನ್ನುವ ನುಣುಚಿಕೊಳ್ಳುವ ಶಬ್ದದ ಸುತ್ತ ಬೆಳೆಯದೆ, ಜೀವನ ಸಮುದ್ರದಲ್ಲಿ ರೂಪುಗೊಂಡ ಮುತ್ತುಗಳಾಗಿರುತ್ತವೆ. ಅವುಗಳಿಗೂ ಜನತೆಗೂ ಅರ್ಥವಾಗದ ತೊಡಕೊಂದು ಇರುವುದಿಲ್ಲ.

ಸಮಾಜವಾದಿ ವಾಸ್ತವತೆಯಿಂದ ಹೇಳುವಾಗ ಅದು ಕೇವಲ ವಾಸ್ತವದ ರಿಪೋರ್ಟ್ ಎಂದು ಭಾವಿಸಬಾರದು. ಇಲ್ಲಿ ಕವಿಯ ಸೃಷ್ಟಿಶೀಲ ಕಲ್ಪನೆಗೆ ಧಕ್ಕೆ ಬಂತೆಂದು ಅರ್ಥವಲ್ಲ. ಕನಸುಗಾರಿಕೆ, ಬೆಳೆಯುವ ಬದುಕಿಗೆ ಅನಿವಾರ್ಯವಾದ ಭಾಗ. ಆದರೆ ಕಾಣುವ ಕನಸು ಸುಳ್ಳಿನ ಭಾವನಾತ್ಮಕ ಶಬ್ದಾಡಂಬರವಾಗಿರುವುದಾದರೆ ಅದು ಕಾವ್ಯಕ್ಕೆ ಊನವಾಗುತ್ತದೆ. ಸಮಾಜದ ಬೆಳವಣಿಗೆಯ ನಿಯಮ

ಗಳನ್ನರಿತ ಅರ್ಥಪೂರ್ಣವಾದ ಕನಸು ರಮ್ಯವಾದರೂ ವಾಸ್ತವದ ನೆಲೆಯಲ್ಲಿ ಕೆಲಸ ಮಾಡುತ್ತಿರುತ್ತದೆ. ಇಂತಹುದೊಂದು ಸಮಾಜವಾದಿ ರಮ್ಯತೆ ಜನತೆಗೆ ಭಾವ ಚೈತನ್ಯವನ್ನೂ, ಸಾಮಾಜಿಕ ದೃಷ್ಟಿಯನ್ನೂ ಕೊಡುವುದಕ್ಕೆ ಕವಿಗೆ ಅಗತ್ಯವಾಗು ತ್ತದೆ. ಅಂತಹ ಒಬ್ಬ ಕವಿ ವರ್ಗಪ್ರಜ್ಞೆಯನ್ನು ಗಳಿಸಿ ಬದುಕಿನಾಳಕ್ಕಿಳಿದು ಅದನ್ನು ಜನತೆಗೆ ಅರ್ಥೈಸಬೇಕಾಗುತ್ತದೆ.

ಈ ದೃಷ್ಟಿಕೋನದಿಂದ ಕವಿ-ವಿಮರ್ಶಕರು ಕನ್ನಡ ಕಾವ್ಯದ ಚಾರಿತ್ರಿಕ ಬೆಳವಣಿಗೆಯನ್ನು ಪುನರ್‍ರಚಿಸಿಕೊಳ್ಳುವುದು ಅಗತ್ಯ. ಹೀಗೆ ಪುನರ್‍ರಚಿಸಿಕೊಳ್ಳು ವುದರಿಂದ ಕನ್ನಡ ಕಾವ್ಯದಲ್ಲಿ ಆಗಿರಬಹುದಾದ ಬದಲಾವಣೆಗಳಿಗೆ ಸ್ಪಷ್ಟವಾದ ಚಾರಿತ್ರಿಕ ಕಾರಣಗಳನ್ನು ಕಂಡುಕೊಳ್ಳಬಹುದು. ಇದುವರೆಗೆ ಕಾವ್ಯ ಲೋಕದಲ್ಲಿ ಉಂಟಾಗಿರುವ ಬದಲಾವಣೆಗಳನ್ನು ವ್ಯಕ್ತಿಗಳ ಪರವಾಗಿಯೋ, ಅವರ ಮೇಲೆ ಪ್ರಭಾವ ಬೀರಿದವರ ಪರವಾಗಿಯೋ ವಿವರಿಸುವುದು ವಾಡಿಕೆ. ಆದರೆ ಕಾವ್ಯ ಲೋಕದಲ್ಲಾದ ಬದಲಾವಣೆಗೆ ಸಾಮಾಜಿಕವಾದ ಕಾರಣಗಳುಂಟೆಂಬುದನ್ನು ಗುರು ತಿಸುವ ಅಗತ್ಯ ನಮ್ಮದಾಗಿದೆ.

ಎಲ್ಲ ಜನಾಂಗಗಳಲ್ಲಿರುವಂತೆ ಕನ್ನಡ ಜನತೆಯಲ್ಲೂ ಆರಂಭಕಾಲೀನ ಕಾವ್ಯ ಜನಪದವೇ ಆಗಿರುವುದರಲ್ಲಿ ಸಂಶಯವಿಲ್ಲ. ಕಾಲಮಾನ ನಿರ್ದಿಷ್ಟ ದಾಖಲಾತಿ ಯೊಡನೆ ಅದನ್ನು ನೋಡಲು ಸಾಧ್ಯವಾಗದಿದ್ದರೂ, ಅದರಲ್ಲಿ ವ್ಯಕ್ತವಾಗಿರುವ ಜನತೆಯ ಆಶೆ, ಆಶೋತ್ತರಗಳನ್ನು ಗಮನಿಸಿದರೆ, ಸಮುದಾಯ ಪ್ರಧಾನವಾದ ಚಟುವಟಿಕೆಗಳಲ್ಲಿ ಬದುಕಿದ ಜನರ ಜೀವನದ ದಾಖಲೆಗಳಾಗಿ ಅವು ಕಾಣಿಸುತ್ತವೆ. ಭಾರತೀಯ ಜಾನಪದ ಸಾವಿರಾರು ವರ್ಷಗಳಿಂದ 'ವೈದಿಕ' ಆಶಯಗಳ ಜೊತೆಯೇ, ಅದರ ಪ್ರಭಾವದಡಿಯಲ್ಲೇ ಬೆಳೆಯುತ್ತ ಬಂದಿದೆ. ಧಾರ್ಮಿಕ ಭಾವನೆಗಳ ವಿಚಾರ ದಲ್ಲಂತೂ, ಜಾನಪದ ಅಂಶಗಳನ್ನು ಹುಡುಕಿ ತೆಗೆಯಬೇಕಾದಷ್ಟು ಕಷ್ಟ ಎದುರಾಗು ತ್ತದೆ. ಜೀವನಕ್ಕೆ ಸಂಬಂಧಿಸಿದ ವಿಚಾರಗಳಲ್ಲಿ ವರ್ಗಹೋರಾಟಗಳ ವಿಶೇಷ ದಾಖಲಾತಿಗಳನ್ನೂ ಸದಾ ಶ್ರಮಜೀವನದ ಪರವಾದ ನಿಲುವುಗಳನ್ನೂ, ವಿಶೇಷವಾಗಿ ಕಾಣಬಹುದು. ಜಾನಪದದ ಅಧ್ಯಯನದ ಕೂಗು ಈಗ ನಮ್ಮ ಕಡೆಗೆ ಪಾಶ್ಚಾತ್ಯ ರಾಷ್ಟ್ರಗಳಿಂದ ಬರುತ್ತಿದೆ. ಅದರಲ್ಲೂ ಅಮೆರಿಕಾದ 'ರೂಪನಿಷ್ಠ' ಅಧ್ಯಯನದ ವಿಧಾನದ ಜೊತೆಗೆ 'ಹಳೆಯದೆಲ್ಲಾ ಬಂಗಾರ'ವೆಂದು ಒಪ್ಪಿ ಸ್ತುತಿಸುವ ಸಾಂಪ್ರ ದಾಯಿಕ ದೃಷ್ಟಿಕೋನವೂ ನಮ್ಮ ವಿದ್ವಾಂಸರಲ್ಲಿ ಬೆಳೆಯತೊಡಗಿದೆ. ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಕಾಣಿಸಿಕೊಂಡಿದ್ದ 'ಪ್ರಾಚೀನ ಪ್ರಿಯತೆ' ಈಗ ಮತ್ತೊಮ್ಮೆ ಕಾಣಿಸಿಕೊಳ್ಳುತ್ತಿದೆ. ಶಿಷ್ಟ ಸಂಪ್ರದಾಯ, ಆಶಯಗಳ ಜೊತೆ ಕಲಬೆರಕೆಯಾಗಿ ಹೋಗಿರುವ ಜಾನಪದವನ್ನು ಸಾರಾಸಗಟಾಗಿ ಜಾನಪದವೆಂದು ತಾರತಮ್ಯ ತೋರದೆ

ವೈಭವಿಸುವ ಪರಿಪಾಠ ಬೆಳೆಯುತ್ತಿದೆ. ನಮ್ಮ ಜಾನಪದ ಇಬ್ಬಾಯ ಕತ್ತಿ ಇದ್ದಂತೆ. ಅದರಲ್ಲಿ ಜನಸಾಮಾನ್ಯರ ಆಶೆ ಆಶೋತ್ತರಗಳು ಅಡಗಿರುವಂತೆಯೇ ಜನಸಾಮಾನ್ಯರನ್ನು ಹಿಡಿದಿಟ್ಟ ಸಾಂಪ್ರದಾಯಿಕ ವಿಚಾರಗಳೂ ಹೇರಳವಾಗಿವೆ. ಜಾನಪದವನ್ನು ಅಧ್ಯಯನ ಮಾಡುವವರು ಈ ಲಕ್ಷಣವನ್ನು ಗಮನಿಸದೆ ಹೋದರೆ, ಅವರು ಜನಪರವಾದ ನಿಲುವುಗಳನ್ನು ಜಾನಪದದಲ್ಲಿ ಗುರುತಿಸಲಾರರು. ಈಗಿರುವಂತೆಯೇ ಜಾನಪದವನ್ನು ಜನತೆಯಲ್ಲಿ ಪುನರ್ ಸ್ಥಾಪಿಸುವ ಪ್ರಯತ್ನದಿಂದ ಅದರ ರೂಪಗಳು ಜನತೆಯ ನಡುವೆ ಉಳಿಯದೆ ಹೋದರೂ, ಅದರಲ್ಲಿ ಅಡಕವಾಗಿರು ವಿಚಾರಗಳು ಮುಂದುವರೆಯುವ ಸಾಧ್ಯತೆಗಳಿವೆ. ಜಾನಪದ ಅಧ್ಯಯನಕ್ಕೂ ಕೂಡ ಸಮಾಜವಾದಿ ವಾಸ್ತವ ದೃಷ್ಟಿಕೋನವೊಂದೇ ಹೆಚ್ಚು ವೈಜ್ಞಾನಿಕ ಸಿದ್ಧಾಂತವಾಗಿ ಕೆಲಸಕ್ಕೆ ಬರುವಂತಹುದು. ಜಾನಪದವನ್ನು ರಕ್ಷಿಸಬೇಕೆಂದು ಹೇಳಿ ಯಥಾಸ್ಥಿತಿಯಲ್ಲಿ ಅದನ್ನು ಮುಂದುವರಿಸಿಕೊಂಡು ಹೋಗುವವರ ಕೈಯಿಂದ ತಪ್ಪಿಸಿ, ಸಮಾಜದ ಚಲನೆಯಲ್ಲಿ ಜೀವಂತ ಸೆಲೆಯಾಗಿ ಮುಂದುವರಿಸಲು ಅನುಕೂಲಮಾಡುತ್ತದೆ. ಇಂತಹುದೊಂದು ಮನಸ್ಥಿತಿಯಲ್ಲಿ ಕನ್ನಡ ಜನಪದ ಕಾವ್ಯದ ದಾಖಲೆಗಳನ್ನು ಗಮನಿಸಬೇಕಾಗಿದೆ.

ಬಡತನದ ತೀವ್ರ ಸಂಕಟದ ವಿವರಗಳು ಮಳೆರಾಜನ ಹಾಡಿನಲ್ಲಿ ವ್ಯಕ್ತವಾದಷ್ಟು ಗಂಭೀರವಾಗಿ ಬೇರೆಲ್ಲೂ ವ್ಯಕ್ತವಾಗಿಲ್ಲ ಎನ್ನುವುದರ ಜೊತೆಗೆ, ಕನ್ನಡ ನಾಡಿನಲ್ಲಿ ಆಗಿಹೋದ ಎರಡು ಕ್ಷಾಮಕಾಲಗಳ ವರ್ಣನೆಗಳನ್ನು ಹಾಡುಗಳಲ್ಲಿ ಮೂಡಿಸಲಾಗಿದೆ. ಜನತೆ ಕಂಗಾಲಾದ 1972ರ ಬರದ ವಿಚಾರ ನಮ್ಮ ಯಾವ ಕವಿಗಳಿಗೂ ಅಷ್ಟೊಂದು ಮಹತ್ವಪೂರ್ಣವಾಗಲಿಲ್ಲವೇಕೆ? ಜನ ತಾವು ಪಟ್ಟ ಬವಣೆಯನ್ನು, ಬರಗಾಲದ ಭೀಕರತೆಯನ್ನೂ ಈ ಲಾವಣಿಯಲ್ಲಿ ಹಾಡಿದ್ದಾರೆ. ಲಾವಣಿ ವ್ಯಕ್ತಿ ರಚನೆಯ ಮುದ್ರೆ ಹೊಂದಿದ್ದರೂ, ಅದು ಜನತೆಯ ಮನಸ್ಸಿನ ಅಭಿವ್ಯಕ್ತಿ ಎನ್ನುವುದನ್ನು ಮರೆಯುವಂತಿಲ್ಲ. ಈ ವಿಚಾರವೇ ಅಲ್ಲದೆ ಬ್ರಿಟಿಷರ ವಿರುದ್ಧ ಹೋರಾಡಿದ ಪ್ರಜಾ ಹೋರಾಟಕ್ಕೆ ಕಾರಣರಾದವರನೇಕರನ್ನು ಕುರಿತ ಹಾಡುಗಳೂ ನಮ್ಮ ಜನಪದ ಕಾವ್ಯದಲ್ಲಿದೆ. ಅವುಗಳಲ್ಲಿ ಕೂಡ ಜನರ ಹೋರಾಟದ ಮನಸ್ಸು ಚಿತ್ರಿತವಾಗಿದೆ. ಜನಪದ ಕಾವ್ಯ ಲಿಖಿತ ರೂಪದಲ್ಲಿಲ್ಲವಾದ ಕಾರಣ, ಕಾಲದಿಂದ ಕಾಲಕ್ಕೆ, ಆಯಾಕಾಲದ ಮಾರ್ಪಾಡುಗಳೊಂದಿಗೆ ಮುಂದುವರೆದುಕೊಂಡು ಬೆಳೆಯುತ್ತ ಹೋಗಿದೆ. ಆದ್ದರಿಂದ ಜನಪದ ಕಾವ್ಯವನ್ನು ನಿರ್ದಿಷ್ಟ ಕಾಲದಲ್ಲಿಟ್ಟು ನೋಡುವುದು ಕಷ್ಟ.

ಇನ್ನು ಕಾವ್ಯದ ಲಿಖಿತ ದಾಖಲೆಗಳ ವಿಚಾರಕ್ಕೆ ಬರುವುದಾದರೆ ಕಾವ್ಯದ ರೂಪವನ್ನು ಬಳಸಿಕೊಂಡು ಐದನೆ ಶತಮಾನದಿಂದ ನಿರ್ಮಾಣಗೊಂಡಿರುವ ಶಾಸನ

ಗಳನ್ನು ಮೊದಲು ಗಮನಿಸಬೇಕು. ಶಾಸನಗಳಲ್ಲಿ ಕಾವ್ಯಾಂಶಗಳು ಇರಬಹುದಾದರೂ, ಅವುಗಳು ಪ್ರಧಾನವಾಗಿ ಕಾವ್ಯೇತರ ವಿಚಾರಗಳಿಗಾಗಿ ಸೃಷ್ಟಿಯಾದವುಗಳು ಶಾಸನಗಳ ಚರಿತ್ರೆಯನ್ನು ಗಮನಿಸಿದರೆ, ಅವು ಪ್ರಭುಗಳ ಆಳುವ ವರ್ಗದ ದಾನಪತ್ರಗಳ ಕೀರ್ತಿಸ್ತುತಿಗಳು. ಇಂತಹ ಕಡೆ ಪ್ರತಿಭಟನೆಯನ್ನು ಹುಡುಕುವುದು ಕಷ್ಟದ ಕೆಲಸ. ಏಕೆಂದರೆ ಅವುಗಳಲ್ಲಿ ಅಂತಹ ಉದ್ದೇಶವು ಸುಳಿಯುವುದಕ್ಕೂ ಅವಕಾಶವಿರುವುದಿಲ್ಲ. ಹಾಗಿದ್ದೂ ಉತ್ತಮರಾಜನನ್ನು ಹೊಗಳುವಾಗ ಕೆಟ್ಟ ರಾಜನನ್ನು ಪ್ರಸ್ತಾಪಿಸುವಾಗ, ಉತ್ತಮ ಮಠಾಧಿಪತಿಯ ಹೊಗಳಿಕೆಯಲ್ಲಿ ಅಧಮನನ್ನು ತೆಗಳುವಾಗ, ದೊರೆಯಬಹುದಾದ ಅಂಶಗಳನ್ನು ಆಯ್ದುಕೊಂಡು ಗುರುತಿಸಬೇಕಾಗುತ್ತದೆ. ಪದ್ಯರೂಪದಲ್ಲಿಲ್ಲದ್ದರಿಂದ ತೆರಿಗೆ ಹೆಚ್ಚಾದಿದ್ದರಿಂದ, ಅದನ್ನು ಪ್ರತಿಭಟಿಸಿ ಮಡಿದ ವೀರನನ್ನು ಕುರಿತ ಶಾಸನವೂ ಎಮ್ಮೆಗೆ ತೆರಿಗೆ ಹಾಕಿದಾಗ ಊರಿನವರೆಲ್ಲ ಸೇರಿ ಪ್ರತಿಭಟಿಸಿ ಅದನ್ನು ತೆಗೆಸಿ ಹಾಕಿದ ಶಾಸನಗಳೂ ಇಲ್ಲಿ ಸೇರಿಲ್ಲವಾದರೂ ಗಮನಾರ್ಹವಾದುವು. 19ನೇ ಶತಮಾನದ ಜಮೀನುದಾರನೊಬ್ಬ ಮತ್ತೊಬ್ಬ ಜಮೀನುದಾರನಿಗೆ ತನ್ನ ಆಳಿನ ಹೆಂಡತಿಯನ್ನು ಮಾರಿದ ಗುಲಾಮಪದ್ಧತಿಯನ್ನು ಕುರಿತಂತೆ ದಾಖಲಾತಿಯನ್ನೊದಗಿಸುವ ತಾಮ್ರ ಶಾಸನವೂ ಗದ್ಯದಲ್ಲಿದ್ದರೂ ಗಣನೀಯವಾದದ್ದೆಂಬುದರಲ್ಲಿ ಅನುಮಾನವಿಲ್ಲ. ಶಾಸನಗಳು ಹೇಳಿಕೇಳಿ ಅರಸೊತ್ತಿಗೆಯ ಕಾನೂನು ಪಾಲನಾ ವಿಭಾಗಗಳಾಗಿ ಕೆಲಸ ಮಾಡಿದುದರಿಂದ ಅಲ್ಲಿ ದತ್ತಿ ಧರ್ಮ ಸ್ವಾಮಿನಿಷ್ಠೆಗಳನ್ನುಳಿದರೆ ಬೇರೇನೂ ಕಾಣಿಸುವುದಿಲ್ಲ.

ಕನ್ನಡ ಕಾವ್ಯದಲ್ಲಿ ಮನುಷ್ಯ ಸಮಾಜದ ಮೊದಲ ವರ್ಗಸಮಾಜವಾದ ಗುಲಾಮ ಸಮಾಜದ ದಾಖಲಾತಿಗಳಾಗಿ ಯಾವ ಕಾವ್ಯಗಳೂ ಸಿಕ್ಕುವುದಿಲ್ಲ. ಆದರೆ ಅದರ ಅವಶೇಷಗಳು, ಭಾವನೆಗಳ ಅವಶೇಷಗಳು ಮುಂದಿನ ಯುಗವಾದ ಊಳಿಗಮಾನ್ಯ ಪದ್ಧತಿಯ ಸಮಾಜದ ಕಾವ್ಯಗಳಲ್ಲಿ ಕಾಣಿಸುತ್ತವೆ.

ಕನ್ನಡ ಕಾವ್ಯ ಆರಂಭವಾದದ್ದೇ ಒಂದು ರೀತಿಯ ಪ್ರತಿಭಟನೆಯಿಂದ. ಅದು ಜೈನಧರ್ಮ, ವೈದಿಕ ಧರ್ಮಕ್ಕೆ ತೋರಿಸಿದ ಪ್ರತಿಭಟನೆಯಾಗಿ ಆರಂಭವಾಯಿತು. ಕನ್ನಡ ಕಾವ್ಯದ ಆರಂಭಕಾಲದಲ್ಲಿ ವೈದಿಕ ಕಾವ್ಯಗಳು ಏಕಿರಲಿಲ್ಲ ಎನ್ನುವುದಕ್ಕೆ ಚಾರಿತ್ರಿಕ ಕಾರಣಗಳಿವೆ. ಸಂಸ್ಕೃತದ ಮೂಲಕ ಬೌದ್ಧಿಕ ವ್ಯವಹಾರವನ್ನು ಮಾಡುತ್ತಿದ್ದ ವೈದಿಕರಿಗೆ ಜನರ ಮಾತಿನಲ್ಲಿ ಬೌದ್ಧಿಕ ಚಟುವಟಿಕೆಯನ್ನು ನಡೆಸುವ ಅಗತ್ಯ ಬೀಳಲಿಲ್ಲ. ಆದರೆ ಕರ್ನಾಟಕಕ್ಕೆ ಬಂದ ಜೈನರಿಗೆ ತಮ್ಮ ಧರ್ಮವನ್ನು ವೈದಿಕ ಧರ್ಮದ ವಿರೋಧೀ ನೆಲೆಯಲ್ಲಿ ಬೆಳೆಸಬೇಕಾಗಿತ್ತು. ಅದಕ್ಕೆ ಬೇಕಾದ ಜನ, ವೈದಿಕರಾಗಿರದೆ ಉಳಿದವರಾಗಿದ್ದರು. ದಾಸ ಪದ್ಧತಿಯಿಂದ ಬಿಡುಗಡೆ ಹೊಂದುವುದಕ್ಕಾಗಿ ಬಹಳಷ್ಟು ಜನಸಾಮಾನ್ಯರು ಬೌದ್ಧರೂ ಜೈನರೂ

ಆದರು. ಹಾಗೆ ನೋಡಿದರೆ ಈ ಎರಡೂ ಮತಗಳು ಶೋಷಣೆಯ ವಿರೋಧಕ್ಕಾಗಿಯೇ ಹುಟ್ಟಿದಂತಹವು. ಧಾರ್ಮಿಕವಾಗಿ ದೀಕ್ಷೆ ತೆಗೆದುಕೊಂಡವರಿಗೆ ತಿರಿದುಂಬುವ ಸ್ವಾತಂತ್ರ್ಯವಾದರೂ ಆಗ ಲಭಿಸುತ್ತಿತ್ತು. ಒಂದು ಧರ್ಮಕ್ಕೆ ಪ್ರತಿಭಟನೆಯಾಗಿ ಮತ್ತೊಂದು ಹುಟ್ಟಿರುವುದು ಐತಿಹಾಸಿಕ ಸತ್ಯ. ಈ ಪ್ರತಿಭಟನೆ ಆ ಧರ್ಮದ ನೆರಳಿನಲ್ಲಿದ್ದ ಕ್ರೂರ ಶೋಷಣೆಯ ವಿರೋಧಕ್ಕಾಗಿ ಹುಟ್ಟಿದ್ದೆಂಬುದೂ ಅಷ್ಟೇ ಸತ್ಯ.

ಹೀಗೆ ಪ್ರತಿಭಟನೆಯ ದನಿಯಾಗಿ ಕನ್ನಡದಲ್ಲಿ ಹುಟ್ಟಿದ ಜೈನ ಕಾವ್ಯ ಕೊಟ್ಟ ಆಶ್ವಾಸನೆ ಆದಿಪುರಾಣದಲ್ಲಿ ವರ್ಣಿತವಾಗಿರುವ ಸಮಾನತೆಯ ಸ್ವರ್ಗ. ಇದು ಆಶ್ವಾಸನೆಗೆ ಕೊಟ್ಟ ಭವ್ಯ ಕಲ್ಪನಾ ಚಿತ್ರವೆನ್ನುವುದರಲ್ಲಿ ಅನುಮಾನವಿಲ್ಲ. ಆದರೆ ಕೇವಲ ಕಲ್ಪನೆಯ ಮೆಲುಕಿನ ಚಿತ್ರ ವಾಸ್ತವದಲ್ಲಿ ಕಾರ್ಯಗತವಾಗುವಂತಹುದಲ್ಲ ಎನ್ನುವುದೂ ಅದರಲ್ಲೇ ಅಂತರ್ಗತವಾಗಿರುವ ಮತ್ತೊಂದು ಅಂಶ. ಪಂಪನಿಗಿಂತ ಹಿಂದೆ ಕನ್ನಡದಲ್ಲಿ ಕಾವ್ಯ ನಿರ್ಮಾಣ ಮಾಡಿದ್ದಕ್ಕೆ ಕವಿರಾಜ ಮಾರ್ಗವೇ ಮೊದಲಾದವುಗಳಿಂದ ಮಾಹಿತಿ ತಿಳಿದುಕೊಳ್ಳಬಹುದಾದರೂ, ಸಮಗ್ರವಾಗಿ ದೊರೆತಿರುವ ಪ್ರಥಮ ಕಾವ್ಯಗಳು ಪಂಪನವೇ ! ಪಂಪ ಆರಂಭಿಸಿದವೆಂದು ಹೇಳಲಾಗುವ ಲೌಕಿಕ, ಆಗಮಿಕ ಕಾವ್ಯ ಸಂಪ್ರದಾಯ ಐತಿಹಾಸಿಕವಾಗಿ, ಕವಿಯ ಸ್ವಧರ್ಮಕ್ಕೂ, ಪರಧರ್ಮೀಯನಾದ ರಾಜನಿಗೂ ಸಂದ ರಾಜಸೂತ್ರರೇ ! ಇಷ್ಟಾದರೂ ಆಯ್ದುಕೊಂಡ ಪುರಾಣ ಮಹಾಕಾವ್ಯಗಳ ವಸ್ತುಗಳಲ್ಲಿ ದಾಸ ಪದ್ಧತಿಯ ವೈಭವೀಕರಣಕ್ಕೆ ಅಂದರೆ ಯಜಮಾನನಿಗೆ ಎದುರಿಲ್ಲದೆ ನಡೆದುಕೊಳ್ಳುವುದಕ್ಕೆ ಪ್ರಾಶಸ್ತ್ಯವಿರುವುದನ್ನು ಕಾಣಬಹುದು.

ಇದೇ ಅಂಶಗಳು ಪಂಪರನ್ನರ ಕಾಲಕ್ಕೆ ಮಸಳಿಸಿದವುಗಳಾಗಿರಲಿಲ್ಲ. ಊಳಿಗಮಾನ್ಯ ಪದ್ಧತಿಯಲ್ಲಿ ಅಂದರೆ ಪ್ರಭುವೇ ಸರ್ವಸ್ವವಾಗಿದ್ದಾಗ, ಆಸ್ಥಾನದ ಮಹಾಕಾವ್ಯಗಳು ಮೈತಳೆದು ಅರಸೊತ್ತಿಗೆಯನ್ನು ಎತ್ತಿಹಿಡಿದು ರಾಜಗುಣಗಳನ್ನು ಕೀರ್ತಿಸಿದವು. ಹೀಗೆ ರಾಜಪ್ರಧಾನವಾದ ಇಲ್ಲವೇ ಧರ್ಮಪ್ರಧಾನವಾದ ಕಾವ್ಯಗಳನ್ನು ಬರೆದರೂ ಆ ವಸ್ತುವಿಗೆ ಮಾನವ ಜೀವನದ ಸಂಘರ್ಷವೇ ಮೂಲವಾದದ್ದು. ಮನುಷ್ಯನ ನಡುವಿನ ಸಂಬಂಧಗಳ ಸಂಘರ್ಷಗಳನ್ನು ಅವು ಪ್ರತಿಬಿಂಬಿಸಿ, ಆದರಿಂದ ಜೀವನದ ಪರಮಾರ್ಥಗಳನ್ನು ತಿಳಿಸುವುದು ಅವುಗಳ ಉದ್ದೇಶವಾದರೂ, ಅವುಗಳ ಕೇಳುಗರು ಸಾಮಾನ್ಯರೇ ! ಈ ಕಾವ್ಯಗಳ ವಸ್ತುವಿನಲ್ಲಿನ ಮಾನವ ಜೀವನದ ಸಂಘರ್ಷಗಳನ್ನು ಚಿತ್ರಿಸುವಾಗ ಪಂಪರನ್ನರಂತಹವರು ತಮ್ಮ ಕಾಲದ ರಾಜಕೀಯ ವಿಚಾರಗಳನ್ನೂ ಹಿಡಿದಿರಲು ಪ್ರಯತ್ನಿಸಿದರು. ಅವುಗಳಲ್ಲಿದ್ದ ದ್ವಂದ್ವಗಳನ್ನು ಗ್ರಹಿಸಿದ್ದರು. ಪಂಪ ತನ್ನ ಕಥಾನಾಯಕ ಅರಿಕೇಸರಿ ಎಂಬ

ಕೊಂಡರೂ, ಅವನು ತನ್ನ ರಾಜನೇ ಎಂದು ತಿಳಿದುಕೊಂಡಿದ್ದರೂ, ರಾಜರು ಅವಿವೇಕಿಗಳು. ಅವರನ್ನು ಓಲೈಸಿ ಬಾಳುವುದು ಕಷ್ಟವೆಂದು ಹೇಳಿಸಿಬಿಡುತ್ತಾನೆ. ಜಾತಿ ಕೂಡ ಪಂಪನಿಗೂ ಸವಾಲಾದದ್ದೆ. ಸ್ವತಃ ಅದರ ಇಕ್ಕಟ್ಟಿಗೊಳಗಾಗಿದ್ದ ಅವನಿಗೆ ಅದರ ವಿರೋಧಿ ನೆಲೆಯಲ್ಲಿ ನಿಂತು ಮಾತಾಡುವುದು ಸುಲಭವಾಗಿತ್ತು. ಅಂತಹುದೊಂದು ಮಾತನ್ನು ಆಡಿಸಿಬಿಡುತ್ತಾನೆ. ಪಂಪನ ಕರ್ಣಪರವಾದ ಪ್ರೀತಿ ನೂರಾರು ಹಿಡಿತಗಳಲ್ಲಿಯೂ ಸ್ವತಂತ್ರ ಅಸ್ತಿತ್ವವನ್ನು ಸ್ಥಾಪಿಸಿಕೊಂಡ ಹೋರಾಟಗಾರನನ್ನು ಗುರುತಿಸುವುದಾಗಿದ್ದರೂ, ಅದಕ್ಕೆ ಮತ್ತೊಂದು ಮುಖವೂ ಇದೆ. ಕರ್ಣನ ಸ್ವಾಮಿ ನಿಷ್ಠೆ, ಸತ್ಯ, ತ್ಯಾಗ ಮೊದಲಾದ ಮೌಲ್ಯಗಳು ಊಳಿಗಮಾನ್ಯ ಪದ್ಧತಿಯಲ್ಲಿ ಪ್ರಜೆಗಳಿಂದ ಪ್ರಭು ಬೇಡುತ್ತಿದ್ದ ಗುಣಗಳು. ಅಂತಹ ಗುಣಗಳಿಂದ ವಂಚಿತನಾಗೆಂದು ಕರ್ಣನಿಗೆ ಕೃಷ್ಣ ಪ್ರೇರೇಪಿಸಿದರೂ ಕೇಳದೆ ಸರ್ವಾರ್ಪಣ ಮಾಡುತ್ತಾನೆ. ಇದು ಪಂಪನ ಮನಸ್ಸಿಗೆ ಹಿತವನ್ನು ತಂದ ಪ್ರಸಂಗವಾದದ್ದರಿಂದ ಕರ್ಣರಸಾಯನಮಲ್ತೆ ಭಾರತಂ ಎನ್ನುತ್ತಾನೆ ಅವನು. ಮಾನವೀಯ ಸಂಘರ್ಷಗಳನ್ನು ಕಾವ್ಯಗಳಲ್ಲಿ ಹೇಳಿದರೂ, ಅವುಗಳಲ್ಲಿ ಅಂತರ್ಗತವಾದ ಆಲೋಚನೆಗಳು ಆಳುವ ವರ್ಗದ ಆಲೋಚನೆಗಳಾದದ್ದರಿಂದ ಈ ಕಾವ್ಯಗಳನ್ನು ಶೋಷಕವರ್ಗ ತಮ್ಮ ಅಸ್ತ್ರಗಳನ್ನಾಗಿ ಬಳಸಿ ದುಡಿಯುವ ಜನತೆಯನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿತು. ಇದೇ ಕಾವ್ಯಗಳಲ್ಲಿ ಅಡಗಿರುವ ಸಂಘರ್ಷಗಳನ್ನು ಕ್ರಾಂತಿಕಾರೀ ಜನಾಂಗದ ಆಶಯುಗಳಿಗನುಗುಣವಾಗಿ ಅರ್ಥೈಸುವುದಕ್ಕೂ ಸಾಧ್ಯವಿದೆ ಎಂಬುದನ್ನು ತೋರಿಸಿಕೊಡುವ ಅಗತ್ಯವಿದೆ.

ಚಕ್ರಾಧಿಪತ್ಯಗಳು ಬಲವಾಗಿದ್ದು ಅವುಗಳ ಆಶ್ರಯದಲ್ಲಿ ಕಾವ್ಯ ರಚಿಸುವಾಗ ಕವಿಗಳಿಗೆ ಆಸ್ಥಾನ, ಅದರ ವಿದ್ವನ್ ಮಂಡಳಿ ಎರಡೆ ಪ್ರಧಾನ ಗುರಿಯಾಗಿದ್ದವು. ಕಾವ್ಯದ ರೂಪ ಚಂಪೂ ಆದರೂ ಪಂಡಿತರತ್ತ ಮುಖ ಮಾಡಿತ್ತು. ವಿದ್ವತ್ತು ಅನಿವಾರ್ಯವಾಗಿತ್ತು. ಜೈನ ಕಾವ್ಯ ಚಂಪೂವಿನಲ್ಲಿ ಸಾಧಿಸಿದ ಸಾಧನೆಗೆ ಕೊನೆ ಬಂದದ್ದು ಧರ್ಮ ಇಳಿಮುಖವಾದದ್ದರಿಂದ ಎಂದು ಅನೇಕರು ಹೇಳುತ್ತಾರೆ. ಅದರೆ ಧರ್ಮಕ್ಕೆ ಆಶ್ರಯ ಕೊಟ್ಟಿದ್ದ ಸಾಮ್ರಾಜ್ಯಗಳು ಇಲ್ಲವಾಗಿ ಅದರ ಬೆಳವಣಿಗೆ ನಿಂತುಹೋಯಿತು. ಚಕ್ರಾಧಿಪತಿಗಳ ಬೆಂಬಲ ಇಳಿಮುಖವಾದ ಮೇಲೆ ಜೈನ ಕಾವ್ಯದ ರೀತಿ ಕೂಡ ಬದಲಾಗುವುದು ಅಗತ್ಯವಾಯಿತು. ಶೈವ ಮಠಗಳು ತಮ್ಮ ಹತೋಟಿಯನ್ನು ರಾಜರ ಬಳಿ ಸ್ಥಾಪಿಸಿಕೊಂಡು ಮೇಲೇರಲು ತೊಡಗಿದ ಮೇಲೆ, ಜೈನರು ಜನರ ನಡುವೆ ತಮ್ಮ ಪ್ರಾಬಲ್ಯವನ್ನು ಗಳಿಸಿಕೊಳ್ಳಲು ದೃಷ್ಟಿ ಹರಿಸಿದರು. ಜನರಿಗೆ ತಿಳಿಯುವ ರೀತಿಯಲ್ಲಿ ಅವರ ದಿನನಿತ್ಯದ ಬದುಕಿನಿಂದಲೇ ತೆಗೆದುಕೊಂಡ ಮಾತು, ವಿಚಾರಗಳನ್ನು ಪಾಂಡಿತ್ಯವಿಲ್ಲದೆ ಹೇಳಬೇಕಾಯಿತು. ಇಂತಹುದೊಂದು ಬದಲಾವಣೆ ಸಾಮಾಜಿಕ ಸಂಬಂಧಗಳಲ್ಲಿ ಉಂಟಾಗಬಹುದಾದ ಸ್ಥಿತ್ಯಂತರವನ್ನು

ಅವಲಂಬಿಸಿಯೇ ಆಗುವಂತಹುದು. ಆದರೆ ಸಮಾಜದಲ್ಲಿ ಮೂಲಭೂತ ಬದಲಾವಣೆಯಾಗದೆ ಇರುವಂತಹ ಸಂದರ್ಭದಲ್ಲಿ ಕಾವ್ಯಲೋಕದಲ್ಲಿ ವಸ್ತುವಿಗಿಂತ ರೂಪದಲ್ಲಿ ಬದಲಾವಣೆ ಬರುತ್ತದೆ. ಇಂತಹ ಬದಲಾವಣೆಯ ಕುರುಹಾಗಿ ನಯಸೇನನಂತಹ ಕವಿಗಳು ಬಂದರೆ, ಜನರನ್ನೇ ಗಮನದಲ್ಲಿರಿಸಿಕೊಂಡರೂ, ಮತೀಯ ಸ್ಪರ್ಧೆಯ ಕಾರಣದಿಂದ ಬ್ರಹ್ಮಶಿವನಂತಹ ಕವಿಗಳೂ ಹುಟ್ಟುತ್ತಾರೆ.

ಹತ್ತನೆ ಶತಮಾನ, ಅರಸರ ಸಾರ್ವಭೌಮಾಧಿಕಾರದ ಯುಗ. ಈ ಯುಗದ ಪ್ರಧಾನ ಗುಣಲಕ್ಷಣಗಳನ್ನೇ ವೀರತ್ಯಾಗಗಳೆಂದು ಕರೆಯಲಾಗಿದ್ದು, ಅವುಗಳನ್ನೇ ಆ ಕಾಲದ ಕಾವ್ಯಗಳು ಪ್ರತಿಫಲಿಸಿದವು. ರಾಜನ ಸಾರ್ವಭೌಮಾಧಿಕಾರವನ್ನು ಒಪ್ಪಿಕೊಂಡ ಧರ್ಮ ತನ್ನ ವಲಯಕ್ಕೆ ತಾನು ಸೀಮಿತವಾಗಿ, ರಾಜಾಶ್ರಯವನ್ನು ಪಡೆದಿತ್ತು. ಹನ್ನೊಂದನೆ ಶತಮಾನಕ್ಕೆ ಭದ್ರವಾಗಿದ್ದ ಅರಸೊತ್ತಿಗೆ ಅಭದ್ರವಾಗಿ ತನ್ನ ವೈಭವವನ್ನು ಕಳೆದುಕೊಂಡಿತು. ಅರಸರ ಸರ್ವಾಧಿಕಾರಕ್ಕೆ ಧರ್ಮದ ವಲಯದಿಂದ ಮಾತ್ರವಲ್ಲದೆ, ಹೊಸದಾಗಿ ಹುಟ್ಟುತ್ತಿದ್ದ ವ್ಯಾಪಾರೀ ವರ್ಗವೂ ಒಂದು ರೀತಿಯ ಸವಾಲನ್ನು ಹಾಕಲು ಪ್ರಯತ್ನಿಸುತ್ತಿತ್ತು. ನಗರಗಳ ಬೆಳವಣಿಗೆ, ಅವುಗಳನ್ನು ಆಶ್ರಯಿಸಿದ ವೃತ್ತಿಕೆಲಸಗಾರರ ಗುಂಪುಗಳು, ಹೊರನಾಡಿನ ವ್ಯಾಪಾರಿಗಳು ಈ ಎಲ್ಲ ಹೊಸ ಸಂಬಂಧಗಳ ಕಾರಣದಿಂದಾಗಿ ಅರಸರನ್ನು ಎದುರುಹಾಕಿಕೊಳ್ಳುವ ಸ್ಥಿತಿ ತಾನಾಗಿ ಕೆಲವು ಕಡೆಗಳಲ್ಲಿ ಉದ್ಭವಿಸುತ್ತಿತ್ತು. ಕೇಶಿರಾಜ ದಂಡನಾಯಕ, ಜೇಡರದಾಸಿಮಯ್ಯ ಇವರುಗಳ ಜೀವನ ಚಟುವಟಿಕೆಗಳನ್ನು ಗಮನಿಸಿದರೆ ಈ ಮಾತು ಸ್ಪಷ್ಟವಾಗುತ್ತದೆ. ರಾಜ, ಅಧಿಕಾರಿಗಳು ಮತ್ತು ಜಮೀನುದಾರರ ಹಿಡಿತಕ್ಕೆ ಸಿಕ್ಕಿ ಬಿಟ್ಟಿ ಕೆಲಸ ಮಾಡುತ್ತಿದ್ದ ಕುಶಲಕೆಲಸಗಾರರಿಗೆ, ವರ್ತಕರು ಶೋಷಿಸಿದರೂ ಹೊಸಲೋಕವೊಂದನ್ನು ತೆರೆದು ತೋರಿಸಿದ್ದರು. ಇಂತಹ ಸ್ಥಿತಿಯಲ್ಲಿ ಅವರು ಶೋಷಣೆಯನ್ನು ವಿರೋಧಿಸುವುದಕ್ಕೆ ರಕ್ಷಣೆಯೊಂದು ಬೇಕಾಯಿತು. ಕೇಶಿರಾಜ ದಂಡನಾಯಕ, ಜೇಡರದಾಸಿಮಯ್ಯ ಮೊದಲಾದವರು ಮುಂದುವರಿಸಿಕೊಂಡು ಬಂದ ಭಕ್ತಿಪಂಥ ಅವರಿಗೆ ಊರುಗೋಲಾಯಿತು. ಇದೇ ಸಮಯದಲ್ಲಿಯೇ ಭಕ್ತಿಪಂಥದ ಅನೇಕ ಚಳುವಳಿಗಳು ಭಾರತದಲ್ಲಿ ಆರಂಭವಾಗಿರುವುದಕ್ಕೂ, ಇಂತಹುದೇ ಚಾರಿತ್ರಿಕ ಕಾರಣಗಳು ಇವೆ. ಹೀಗೆ ಆರಂಭವಾದ ಭಕ್ತಿಪಂಥ ಮತ್ತಾವುದೋ ಹೊಸದಾಗಿ ಹುಟ್ಟಿದ ತತ್ವವಾಗಿರದೆ ಗುಲಾಮ ಪದ್ಧತಿಯಲ್ಲಿದ್ದ ಸ್ವಾಮಿ ಭಕ್ತಿ, ಸರ್ವಾರ್ಪಣ ಮಾಡಿದ ತೊತ್ತು ಪುರುಷ್ಯಗಳೇ ದೇವರಿಗೆ ಅರ್ಪಿತವಾದುವು. ರಾಜ್ಯಾಧಿಕಾರವನ್ನು ಧಿಕ್ಕರಿಸಿ ಬದುಕುವವರಿಗೆ ಇದಕ್ಕಿಂತ ಬೇರೆ ಆಶ್ರಯವಿರಲಿಲ್ಲ. ಇಷ್ಟಾದರೂ ಜೀವನ ಸಂಕಷ್ಟದಿಂದ ಬೆಂದುಬಂದ ಬಹಳಷ್ಟು ಜನ ಕಾಯಕ ಜೀವಿಗಳಿಗೆ ತಮ್ಮ ಜೀವನದ ವಿಮರ್ಶೆಗೆ ಅಭಿವ್ಯಕ್ತಿಯಾಗಿ, ತಮ್ಮಂತಹವರೇ ಆದ ಜನಕ್ಕೆ ಹೇಳಲು 'ವಚನ' ಅಭಿವ್ಯಕ್ತಿ ರೂಪಗೊಂಡಿತು.

ಅವುಗಳಲ್ಲಿನ ವಸ್ತು ಪರಂಪರಾನುಗತ ವರ್ಣಾಶ್ರಮ ವಿಚಾರಗಳಿಗಿಂತ ಹೆಚ್ಚಾಗಿ, ಕುಲ, ಹೆಣ್ಣು, ಕಾಯಕ, ವ್ಯಕ್ತಿ ಪರಿಶುದ್ಧತೆಯತ್ತ ಹರಿಯಿತು.* ಈ ಬದಲಾವಣೆಯಿಂದಾಗಿ ಕನ್ನಡ ಕಾವ್ಯದಲ್ಲೊಂದು ಹೊಸ ಪರಂಪರೆ ಆರಂಭವಾಯಿತು. ಸಮಾಜದಲ್ಲಿದ್ದ ಜಾತಿಪದ್ಧತಿಯ ಅದರಲ್ಲೂ ಅಸ್ಪೃಶ್ಯತೆಯ ಬಗೆಗೆ ಒಂದು ತೀವ್ರವಾದ ಪ್ರತಿಭಟನೆಯ ಧೋರಣೆ ಕಾಣಿಸಿಕೊಂಡಿತು. ಹೊಸ ವಸ್ತುವನ್ನು ತೆಗೆದುಕೊಂಡು ಹೇಳಬೇಕೆಂದುದನ್ನು ತೀವ್ರವಾಗಿ ಹೇಳಿದಾಗ ಉತ್ತಮ ಕಾವ್ಯ ಹುಟ್ಟುತ್ತದೆನ್ನುವುದಕ್ಕೆ ವಚನಗಳು ಉತ್ತಮ ನಿದರ್ಶನ. ಅಲ್ಲಿಯೂಕೂಡ ಸಮಾಜದ ಸಮಸ್ಯೆಗಳನ್ನು ಗೌಣವಾಗಿ ಕಂಡು ಅವುಗಳತ್ತ ಬೆನ್ನು ತಿರುಗಿಸಿ, ಅಲೌಕಿಕತೆಯನ್ನು ಹುಡುಕಿಕೊಂಡು ಹೊರಡುವವರಿಗೆ ಪ್ರತಿನಿಧಿಯಾಗಿ ಅಲ್ಲಮ ನಮಗೆ ಕಾಣಿಸುತ್ತಾನೆ. ಇಂತಹವರ ಸಾಹಚರ್ಯದಲ್ಲಿ 'ಅನುಭಾವ' ಹುಟ್ಟಿರುವಂತಹದು. ಇಂತಹ ಗುಂಗಿಗೆ ಬಂದವನಿಗೆ 'ಅಹಂ' ಒಂದೇ ಸತ್ಯವಾಗಿ ತನ್ನ ಸುತ್ತಲಿನ ಜಗತ್ತೆಲ್ಲ ಮಿಥ್ಯವಾಗಿ ಕಾಣುತ್ತದೆ. ಈ ಮಿಥ್ಯದಲ್ಲಿ ಜಗತ್ತಿನಲ್ಲಿರುವ ಸಮಸ್ಯೆಗಳನ್ನು ಇಲ್ಲದಂತೆ ಭಾವಿಸಲಾಗುತ್ತದೆ. ಆರ್ಥಿಕ ಶೋಷಣೆಯ ವಿರುದ್ಧ ಸಂಘಟಿತವಾದ ಕಾಯಕ ಜೀವಿಗಳ ಚಳುವಳಿಗೆ ಇಂತಹ ಮಿತಿ ಬಂದರೂ, ಅವರ ಸಾಮಾಜಿಕ ಅಸಮಾನತೆಯ ಹೋರಾಟದ ಹಿಂದೆಯೂ ಆರ್ಥಿಕ ಸ್ವರೂಪವೇ ಇದ್ದು, ಅದು ರಾಜಕೀಯ ಶಕ್ತಿಯಾದಾಗ, ಅರಸೊತ್ತಿಗೆ, ಸಂಪ್ರದಾಯ ಶಕ್ತಿಗಳು ಒಂದಾಗಿ ಅದನ್ನು ಮುರಿದುವು. ಸಂಘಟಕರು ಚಲ್ಲಾಪಿಲ್ಲಿಯಾಗಿ ಚಳುವಳಿ ನಿಂತುಹೋಯಿತು.

ವಚನ ಚಳುವಳಿ ನಿಂತು ಹೋದರೂ ಅದರ ಪ್ರಭಾವ ಜನಗಳ ಮೇಲೆ ಉಳಿದುದಲ್ಲದೆ, ವಿರೋಧಗಳ ತೀವ್ರತೆ ಕಡಿಮೆಯಾಗಿ, ಭಕ್ತಿಯೊಂದೇ ಪ್ರಧಾನ ಆಶಯವಾಗಿ ಉಳಿಯಿತು. ಅದರ ಕುರುಹಾಗಿ ಅರಸ, ಭಕ್ತಿಗಳೆರಡೂ ಒಟ್ಟಿಗೆ ಇರುವ ಸೂಚನೆಯಾಗಿ ಹರಿಹರನ ಗಿರಿಜಾಕಲ್ಯಾಣ ಕಾಣಿಸುತ್ತದೆ. ಆದರೆ ಇಲ್ಲಿಯೂ ಕೂಡ ಅರಸ ನೆಪಮಾತ್ರವಾದದ್ದರಿಂದ, ಘರ್ಷಣೆ ಅನಿವಾರ್ಯವಾಯಿತು. ಹರಿಹರ ಅರಸನಾಸ್ಥಾನದಲ್ಲಿ ಚಂಪೂ ಪಾಂಡಿತ್ಯವನ್ನು ಮೆರೆದವನು, ಅದನ್ನು ಬಿಟ್ಟು ದೇವಾಲಯ ಮಠವನ್ನು ಆಶ್ರಯಿಸಿದ ಹಾಗೆ ನೋಡಿದರೆ ವಚನಕಾರರಲ್ಲಿ ಕೊನೆಗಾಲದಲ್ಲಿ ಕಾಣಿಸಿಕೊಂಡ ಅರಸೊತ್ತಿಗೆಯ ತೀವ್ರ ವಿರೋಧ ಹರಿಹರನ ಶತಕಗಳಲ್ಲಿ ಪ್ರಖರವಾಗಿ ವ್ಯಕ್ತಗೊಳಿದಿದೆ. ಶತಕಗಳನ್ನು ರಚಿಸಿದ ಕವಿಗಳನೇಕರು ಸಾಮಾಜಿಕ ಜೀವನದ ತೀವ್ರವಾದ ಟೀಕೆಯನ್ನು ಮಾಡಿದರೂಕೂಡ ಶತಕಗಳೂ ಸಾಹಿತ್ಯ ದೃಷ್ಟಿ ಎಂದು ಯಾರೂ ಭಾವಿಸಲಿಲ್ಲ. ಹರಿಹರನಂತೆ ಮೊದಲು ರಾಜನ ಬಳಿ ಇದ್ದ ಕವಿಗಳು

* ಇದರ ಇನ್ನಷ್ಟು ವಿವರಗಳಿಗೆ ನನ್ನ 'ಹನ್ನೆರಡನೆ ಶತಮಾನದ ಕಾಯಕ ಜೀವಿಗಳ ಚಳುವಳಿ' ಓದಿ.

ಅವನನ್ನು ಬಿಟ್ಟು ದೇವರನ್ನಾಶ್ರಯಿಸಿ ಶತಕಗಳನ್ನು ಹೇಳಿದರು. ಒಟ್ಟಿನಲ್ಲಿ ಶತಕಗಳು ರಾಜಾಶ್ರಯದಿಂದ ದೂರವಾದುವುಗಳೆಂದೇ ಹೇಳಬಹುದು.

ರಾಜನ ಮೇಲೆ ಕೋಪಗೊಂಡ ಹರಿಹರನಿಗೆ ಮಠ ಮತ್ತು ಮಠದ ಭಕ್ತಜನ ಆಶ್ರಯದಾತರಾದರು. ತಾನು ಈಗ ಹೇಳುವುದು ರಾಜನ ಕಥೆಯಲ್ಲವೆಂದೂ, ತನ್ನ ನಾಲಿಗೆಯನ್ನು ದೇವರಿಗೆ ಮಾರಿದ್ದೇನೆಂದೂ ಕವಿ ಪ್ರತಿಜ್ಞೆ ಮಾಡಿದ. ತಾನೇ ಸ್ವತಃ ಆವೇಶದಿಂದ ಕೂಡಿದ ಭಕ್ತನಾದದ್ದರಿಂದ ಭಕ್ತಿಯು ಆವೇಶದ ಅಭಿವ್ಯಕ್ತಿಗೆ ಅಗತ್ಯವಾದ ರೂಪವಾಗಿ ರಗಳೆಯನ್ನೂ, ವೈವಿಧ್ಯಕ್ಕೆ ಅದರಲ್ಲೇ ಗದ್ಯವನ್ನೂ, ಅದನ್ನು ಕೇಳಬೇಕಾಗಿದ್ದ ಸಾಮಾನ್ಯರಿಗಾಗಿ ರೂಪಿಸಿಕೊಂಡ. ಭಕ್ತಿಯೊಂದೇ ಪ್ರಧಾನವಾದದ್ದರಿಂದ, ಕಥೆ ಇರಲಿ ಇಲ್ಲದಿರಲಿ ಅದರ ಪ್ರಧಾನ ಕೇಂದ್ರ ಕವಿ ಹೃದಯ. ಅಂದರೆ ಕವಿಯ ಆತ್ಮಾಶ್ರಯ ಕವಿತ್ವ. ಅದಕ್ಕಾಗಿಯೇ ಹರಿಹರನಲ್ಲಿ ಭಾವಗೀತೆಗಳ ಗುಣ ಹೆಚ್ಚಿರುವುದು. ಇವನ ಭಕ್ತಿಯ ಏಕತಾನತೆಯಲ್ಲಿ ಜೀವನ ಸಂಘರ್ಷದ ಚಿತ್ರಗಳು ಮಸಳಿಸಿದವು. ಕಾವ್ಯರೂಪ ಎಷ್ಟು ವೈಯಕ್ತಿಕವಾಯಿ ತೆಂದರೆ ಅದು ಹರಿಹರನಿಗೇ ನಿಂತು ಹೋಯಿತು. ಇದೇ ಭೂಮಿಕೆಯಲ್ಲಿ ಬಂದ ರಾಘವಾಂಕನಿಗೆ ಅರಸೊತ್ತಿಗೆಯ ಆಶ್ರಯವಿದೆ. ಭಕ್ತಿ ಮತ್ತು ರಾಜತ್ವಗಳನ್ನು ಮೇಳವಿಸಿ ಬರೆದ ಅವನ ಹರಿಶ್ಚಂದ್ರ ಕಾವ್ಯಕ್ಕೆ ಪಂಡಿತಪಾಮರ ರಂಜಕತೆಯನ್ನುಳ್ಳ ಷಟ್ಪದಿ ವಾಹಕವಾಯಿತು. ಇದೂಕೂಡ ಹರಿಹರನ ಭಕ್ತಿ ನಿಷ್ಠೆಗೆ ಸಹಿಸದೆ ಹೋಯಿತೆನ್ನುವ ಕಥೆ ಇದೆ. ರಾಘವಾಂಕನ ಆಸ್ಥಾನ ಜೀವನಕ್ಕೆ ಶೈವ ವೀರ ಶೈವಗಳು ಸಮ್ಮೇಳನಗೊಂಡು, ಧಾರ್ಮಿಕ ವಲಯದ ಪರಿಸರದಲ್ಲಿ 'ವೀರಧರ್ಮ'ದ ಶ್ರದ್ಧೆಯನ್ನು ಪ್ರಕಟಿಸುವ ಕೃತಿಗಳು ಆನಂತರದಲ್ಲಿ ಮೈತಾಳಿವೆ. ವಚನಕಾರರು ಹೇಳಿದ ಜಾತಿಯ ಸಮಸ್ಯೆಯನ್ನ ಹರಿಶ್ಚಂದ್ರ ಕಾವ್ಯದಲ್ಲಿ ಪ್ರಸ್ತಾಪಿಸಿದ್ದರೂ, ಅದಕ್ಕೆ ಉತ್ತರವನ್ನು ಹೇಳುವಲ್ಲಿ ರಾಘವಾಂಕ ಸಾಂಪ್ರದಾಯಿಕ ನೆಲೆಗೆ ತಲುಪಿದ್ದಾನೆ.

ಇದೇ ಕಾಲಕ್ಕೆ ಕರ್ನಾಟಕಕ್ಕೆ ಬಂದ ರಾಮಾನುಜಾಚಾರ್ಯರ ಪಂಥವೂ ಕೆಲವೊಂದು ವಿಚಾರಗಳಲ್ಲಿ ಪ್ರಗತಿಪರವಾಗಿದ್ದು ಹೊಯ್ಸಳ ರಾಜಾಶ್ರಯವನ್ನು ಪಡೆದರೂ ಕನ್ನಡದಲ್ಲಿ ಕಾವ್ಯಗಳನ್ನು ರಚಿಸುವ ಕವಿಗಳನ್ನು ಪಡೆಯದೇ ಹೋಯಿತು. ರಾಮಾನುಜಾಚಾರ್ಯರು ತಮಿಳಿನವರಾಗಿದ್ದದ್ದೂ ಇದಕ್ಕೆ ಕಾರಣವಿರಬಹುದು. ಹೊಯ್ಸಳರ ಕಾಲಕ್ಕೆ ಮತ್ತೆ ರಾಜಾಶ್ರಯವನ್ನು ಪಡೆದ ಜೈನಧರ್ಮದ ಕವಿಗಳು ಉಭಯ ಕಾವ್ಯ ನಿರ್ಮಾಣಕ್ಕೂ ಜೈನ ವಸ್ತುವನ್ನೇ ತೆಗೆದುಕೊಂಡು, ಅಲ್ಲಲ್ಲಿ ಬ್ರಾಹ್ಮಣ ಧರ್ಮವನ್ನು ಛೇಡಿಸಿ, ತಿಳಿಯಾದ ದೇಸೀ ಭಾಷೆಯಲ್ಲಿ ಕಾವ್ಯರಚನೆ ಮಾಡಬೇಕಾಯಿತು. ಜನ್ನನ ಕಾಲದಲ್ಲೂ ಚಂಪೂ ಕೃತಿಯಾಗಿ ಸಂಸ್ಕೃತದಿಂದ ಪಂಚತಂತ್ರ ಕನ್ನಡಕ್ಕೆ ಬಂತು. ರಾಜನೀತಿ ಪರವಾದ ಕಾವ್ಯವಾದರೂ, ಅದರ

ಲೋಕ ವ್ಯವಹಾರದ ವ್ಯಾಪ್ತಿ ಎಲ್ಲಾ ವರ್ಗಗಳ ಸ್ವಭಾವಗಳನ್ನೂ ಗ್ರಹಿಸುವುದರಲ್ಲಿ ಯಶಸ್ವಿಯಾಗಿದ್ದುದರಿಂದಲೇ ಅದೂ ಕನ್ನಡಕ್ಕೆ ಬಂದು ಜನಪ್ರಿಯವಾಯಿತು.

ಹೊಯ್ಸಳ ಸಾಮ್ರಾಜ್ಯದ ಅವನತಿಯ ನಂತರ ಕರ್ನಾಟಕದಲ್ಲಿ ಬಹಳಷ್ಟು ಕಾಲ ಉತ್ತಮ ಸಾಹಿತ್ಯ ತಲೆಹಾಕಲಿಲ್ಲ. ರಾಜಕೀಯವಾಗಿ ಪ್ರಭಾವಶಾಲಿಗಳಲ್ಲದ ರಾಜರುಗಳ ಆಸ್ಥಾನಗಳಲ್ಲಿ, ಅಷ್ಟೇನೂ ಪ್ರಮುಖವಲ್ಲದ ಕೃತಿಗಳ ನಿರ್ಮಾಣ ನಡೆಯುತ್ತ ಬಂತು. ಈ ಕಾಲಕ್ಕೆ ಅಂದರೆ ಹದಿನೈದನೆ ಶತಮಾನದ ಆರಂಭಕಾಲಕ್ಕೆ ದಕ್ಷಿಣ ಭಾರತದ ಮೇಲೆ ಮುಸಲ್ಮಾನರ ದಾಳಿ ಬಹಳ ಹೆಚ್ಚಿತು. ಪಾಳೇಗಾರರಂತಿದ್ದ ರಾಜರುಗಳೆಲ್ಲ ಒಬ್ಬೊಬ್ಬರಾಗಿ ಅವರ ಕೈವಶವಾದರು. ಇದರ ಜೊತೆಗೆ ಬಹಳಷ್ಟು ಜನ ಮುಸಲ್ಮಾನರಾಗಿ ಮತಾಂತರ ಹೊಂದಿದರು. ಇಲ್ಲಿಯವರೆಗೆ ವೈದಿಕಧರ್ಮ ತನ್ನ ವಿರುದ್ಧ ತಿರುಗಿ ಬಿದ್ದಿದ್ದ ಜೈನ, ಬೌದ್ಧ, ವೀರಶೈವ ಇವೇ ಮೊದಲಾದುವು ಗಳನ್ನು ತನ್ನ ಚೌಕಟ್ಟಿನಲ್ಲಿ ಅರಗಿಸಿಕೊಂಡು ತನ್ನ ಯಜಮಾನಿಕೆಯನ್ನುಳಿಸಿ ಕೊಂಡಿತ್ತು. ಈಗ ವೈದಿಕಧರ್ಮದ ಜೊತೆಗೆ ಉಳಿದ ಧರ್ಮಗಳೂ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವ ಸ್ಥಿತಿಗೆ ಬಂದವು. ಇಂತಹ ವಿಪತ್ಕಾರಕ ಸ್ಥಿತಿಯಿಂದ ತಮ್ಮನ್ನು ಉಳಿಸುವ ಸರ್ವಶಕ್ತನಾದ ರಾಜನೊಬ್ಬನ ಅಗತ್ಯ ಈ ಎಲ್ಲ ಧರ್ಮಗಳಿಗೂ ಬಂದೊದಗಿತು. ಧರ್ಮ ರಾಜಕೀಯವಾಗಿ ಶಕ್ತಿ ಗಳಿಸಬೇಕೆಂದು ಕ್ರಿಯಾತ್ಮಕವಾಗಿ ಹೆಜ್ಜೆಯಿಟ್ಟು, ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಲ್ಲಿ ಸಫಲವಾಯಿತು. ಈ ಕಾಲದಲ್ಲೇ ಚೇತನರಹಿತವಾಗಿದ್ದ ಜೈನ–ವೀರಶೈವ–ವೈದಿಕ ಮತಗಳು ತಮ್ಮಲ್ಲಿನ ಒಳಬೇಧಗಳನ್ನು ಮರೆತು, ಬುಕ್ಕರಾಯನ ಶಾಸನ ಹೇಳುವಂತೆ ರಾಜಿಯಾಗಿ, ತಮ್ಮ ತಮ್ಮ ಧರ್ಮಗಳ ಪುನರುತ್ಥಾನ ಮಾಡಲು ಪ್ರಯತ್ನಿಸಿದವು. ಇಂತಹುದೊಂದು ಸ್ಥಿತಿಯಲ್ಲಿ ಸರ್ವಶಕ್ತನೂ, ಪವಾಡಪುರುಷನೂ ಆದ ಕಥಾನಾಯಕನೊಬ್ಬನನ್ನು ಎಲ್ಲರೂ ಕಲ್ಪಿಸಿಕೊಂಡರು. ಕುಮಾರವ್ಯಾಸನಿಗೆ ಕೃಷ್ಣ, ಚಾಮರಸನಿಗೆ ಅಲ್ಲಮ, ರತ್ನಾಕರನಿಗೆ ಭರತೇಶ ಹೀಗೆ ಮೂರೂ ಧರ್ಮ ದವರಿಗೆ ಇಂತಹವನೊಬ್ಬ ಪವಾಡಪುರುಷ ಆ ಯುಗದ ಕರೆಯಾಗಿ ಬರಬೇಕಾಗಿತ್ತು. ಅದು ಅಲ್ಪ ಸ್ವಲ್ಪ ಕಾಲ ಕೃಷ್ಣದೇವರಾಯನಲ್ಲಿ ಕಾಣಿಸಿಕೊಂಡಿತ್ತಾದರೂ, ದೀರ್ಘ ಕಾಲ ಮುಂದುವರೆಯಲಿಲ್ಲ.

ತತ್ಕಾಲೀನ ಸಾಮಾಜಿಕ ಸಂಘರ್ಷಗಳಿಗೆ ದೂರ ಉಳಿದ ಕುಮಾರವ್ಯಾಸನಿಗೆ ಮಾನವ ಜೀವನದ ಸಂಘರ್ಷದ ಚಿತ್ರಣವನ್ನು ಅದ್ಭುತವಾಗಿ ಸಾಧಿಸುವುದು ಸಾಧ್ಯ ವಾದರೂ, ಅವನು ಭಾಗವತ ಪರಂಪರೆಯವನಾಗಿ ಕಷ್ಟದಿಂದ ಪಾರುಮಾಡುವ ಸರ್ವಾಂತರ್ಯಾಮಿಯನ್ನು ತನ್ನ ಕಾವ್ಯದ ಲೀಲಾನಾಯಕನನ್ನಾಗಿ ಮಾಡಿದ. ಅಷ್ಟರಲ್ಲೂ ತಾನು ಕಂಡಿದ್ದ ಧೀಮಂತ ಹಳ್ಳಿ ಹೆಣ್ಣನ್ನು ದ್ರೌಪದಿಯಲ್ಲಿ ಕಂಡು

ಅಮರವನ್ನಾಗಿಸಿದ. ಚಾಮರಸನನ್ನು ಪ್ರತಿನಿಧಿಯನ್ನಾಗಿ ಮಾಡಿಕೊಂಡ ವೀರಶೈವ ಧರ್ಮದ ಚಳುವಳಿ ತೀವ್ರರೀತಿಯಲ್ಲಿ ಸಂಘಟನೆಗೆ ತೊಡಗಿತಾದರೂ, ಕೊಬ್ಬರಿ ಇಲ್ಲದ ಚಿಪ್ಪಿನಂತೆ, ಕೇವಲ ಪಂಡಿತ ಜ್ಞಾನಕ್ಕೆ, ಮತದ ನೀತಿ ನಿರೂಪಣೆಗೆ, ಒಟ್ಟಿನಲ್ಲಿ ವಚನಕಾರರ ಚಳುವಳಿಗಿದ್ದ ಪ್ರಗತಿಪರ ವಿಚಾರಗಳಿಗೆ ತಿಲಾಂಜಲಿಯನ್ನು ಕೊಟ್ಟಿತು. ಯೋಗ ಭೋಗ ಸಮನ್ವಯದ ತೊಡಕಿಗೆ ಸಿಕ್ಕಿ ರತ್ನಾಕರ ಜೈನಧರ್ಮವನ್ನು ಇಬ್ಬಂದಿಯಾಗಿಸಿ, ಇಕ್ಕಟ್ಟಿಗೆ ಸಿಕ್ಕಿಸುವಂತಾಯಿತು.

ಮತಗಳಿಗೆ ಒದಗಿದ ಇಕ್ಕಟ್ಟಿನ ಸ್ಥಿತಿಯಲ್ಲೇ ಹುಟ್ಟಿದ ಮತ್ತೊಂದು ಪರಂಪರೆ ಹರಿದಾಸರದು. ಭಕ್ತಿಪಂಥದ ಮುಂದುವರಿಕೆಯಾಗಿ ಬಂದ ಹರಿದಾಸರು ಮಧ್ವ ಮತದ ಆಶ್ರಯದಲ್ಲಿ, ದಾಸಕೂಟವಾಗಿ ಜನರ ಹತ್ತಿರಕ್ಕೆ ಹೋದರು. ಅನ್ಯ ಮತೀಯರ ಧಾಳಿಯಿಂದ ರಕ್ಷಿಸುವ ಸಮರ್ಥ ನಾಯಕತ್ವವಿಲ್ಲದೆ ಪದೇ ಪದೇ ಸಂಕಷ್ಟ ಕ್ಕೊಳಗಾಗುತ್ತಿದ್ದ ಜನರಿಗೆ ಲೋಕ ವ್ಯವಹಾರದ ವಿಚಾರಗಳನ್ನು ಜನರ ಮಾತಿ ನಲ್ಲಿಯೇ ಸಂಗೀತದ ಮೂಲಕ ಆಧ್ಯಾತ್ಮವಾಗಿ ಹೇಳಿದರು. ಈ ಹರಿದಾಸರಲ್ಲಿಯೂ ಕೂಡ ಕನಕದಾಸನೊಬ್ಬನೇ ಜೀವನದ ನೇರ ಸವಾಲುಗಳನ್ನು ಎದುರಿಸಿರುವಂತೆ ಕಾಣುವುದು. ಕೀಳುಜಾತಿಯವನೆಂಬ ಕಾರಣದಿಂದ ಈತ ಇತರರಿಂದ ಅನುಭವಿಸಿದ ಕಿರುಕುಳವನ್ನು ಅವನು ಜಾತಿಯ ಬಗೆಗೆ ಖಾರವಾಗಿ ಮಾತನಾಡಿ ಪ್ರತಿ ಭಟಿಸಿದ್ದಾನೆ. ಅವನಿಗೆ ಬೆಂಬಲವಾಗಿ ಪುರಂದರದಾಸನೂ ದನಿಗೂಡಿಸಿದ್ದಾನೆ. ವಚನಕಾರರು ಮತ್ತು ದಾಸರಿಗೆ ಅವರು ಎಷ್ಟೇ ಇಹವನ್ನು ಬಿಡುತ್ತೇವೆಂದರೂ, ವ್ಯವಸ್ಥೆಯಲ್ಲಿ ಮನುಷ್ಯನಿಂದ ಬಿಡುಗಡೆ ಪಡೆದು, ಕುರುಡು ವಿಧಿಯಾಗಿರುವ ಹಣದ ಮಹಿಮೆ ಕಣ್ಣಿಗೆ ತಟ್ಟದೆ ಹೋಗಿಲ್ಲ. ಆದರೆ ಅದರ ಹಿಡಿತ ತಮಗೆ ಮೀರಿದ್ದೆಂದು ಅವರು ಭಾವಿಸಿ, ಅದನ್ನು ನಿರಾಕರಿಸಿ, ಬಡತನದ ಮೂಲಕವೇ ಭಕ್ತಿಯ ಸಂಪತ್ತನ್ನು ಗಳಿಸುವುದು ಸುಲಭವೆಂದುಕೊಂಡರು. ಇದಕ್ಕೆ ಅಪವಾದವಾಗಿ ಕನಕದಾಸನ 'ರಾಮಧಾನ್ಯ ಚರಿತ್ರೆ' ಇದ್ದು, ಅದು ಅವನ ವರ್ಗಪ್ರಜ್ಞೆಯ ಆಳವಾದ ತಿಳುವಳಿಕೆಗೆ ಸಾಕ್ಷಿಯಾಗಿದೆ. ಹರಿದಾಸರ ಚಟುವಟಿಕೆ ಶ್ರೀಕೃಷ್ಣ ಭಕ್ತಿಗಷ್ಟೆ ಸೀಮಿತವಾದದ್ದ ರಿಂದ, ಅದರ ಪ್ರಭಾವ ಕಾವ್ಯಲೋಕಕ್ಕೆ ವಿಸ್ತರಿಸಲಿಲ್ಲ. ಆದರೂ ವೈವಿಧ್ಯಮಯ ವಾದ ವ್ಯಕ್ತಿತ್ವವುಳ್ಳ ಕನಕದಾಸನಂತಹವನು 'ನಳಚರಿತ್ರೆ'ಯಂತಹ ನೀತಿ ಕತೆ ಯನ್ನೂ, ರುಕ್ಮಿಣೀ ಕಲ್ಯಾಣದಂತ ಪ್ರಣಯ ಕಾವ್ಯವನ್ನೂ ರಚಿಸಿದ್ದಾನೆ.

ಕನಕದಾಸನು ರಚಿಸಿದ ಪ್ರಣಯ ಕಾವ್ಯಕ್ಕೂ, ಭರತೇಶ ವೈಭವಕ್ಕೂ, ಮುಂದೆ ಬಂದ ಲಕ್ಷ್ಮೀಶನ ಜೈಮಿನಿ ಭಾರತಕ್ಕೂ ಒಂದು ರೀತಿಯ ಸಾಮಾನ್ಯ ಲಕ್ಷಣಗಳಿವೆ. ವಿಜಯನಗರದ ಪತನಾನಂತರ ಕಾವ್ಯಕ್ಕೆ ಆಶ್ರಯವನ್ನಿತ್ತವರು ವೀರ ಶೂರರಲ್ಲದ ವಿಷಯಾಸಕ್ತರಾದ ಪಾಳೆಯಗಾರರು. ಮಾನವ ಜೀವನದ ಕ್ರಿಯೆಯಲ್ಲಿ,

ಸನ್ನಿವೇಶದಲ್ಲಿ ಅಂತರ್ಗತವಾಗಿರುವ ಕವಿತಾಶಕ್ತಿಯಲ್ಲಿ ಈ ಆಶ್ರಯದಾತರಿಗೆ ಆಸಕ್ತಿ ಇರಲಿಲ್ಲ. ಸಮಾಜದ ನಿತ್ಯ ಸಂಘರ್ಷಣದಿಂದ ದೂರವಾಗಿದ್ದ ಇವರಿಗೆ ಕ್ರಿಯಾವಂತ ಕಥೆ ಬೇಕಿರಲಿಲ್ಲ. ಆದ್ದರಿಂದ ಕಥನಾಂಶ ಕಡಿಮೆಯಾದ, ವರ್ಣನಾಂಶಗಳು ಹೆಚ್ಚಾದ, ಅದರಲ್ಲೂ ಶೃಂಗಾರ ಭರಿತವಾದ ಕಾವ್ಯಗಳು ಹುಟ್ಟಿಕೊಂಡವು. ಅವು ಗಳಿಗೆ ಮೇಲುಗಡೆ ಭಕ್ತಿಯ ಲೇಪನವಿದ್ದರೂ ಒಳಗಿದ್ದುದೆಲ್ಲಾ ಶೃಂಗಾರವೇ. ರಸಿಕತೆಯೇ ಕಾವ್ಯಾಸ್ವಾದನೆಗೆ ಗುಣವಾಯಿತು. ಇಂತಹ ಸಂದರ್ಭದಲ್ಲಿ ಪಾಳೇಗಾರರ ಆಶ್ರಯದಲ್ಲಿದ್ದ ರತ್ನಾಕರ ಅಲ್ಲಿಂದ ಹೊರಬಂದು ಶತಕವನ್ನು ರಚಿಸಿ, ಪ್ರಾಯಶ್ಚಿತ್ತ ಮಾಡಿಕೊಂಡವನಂತೆ ಕೆಲವು ವಾಸ್ತವ ಸಂಗತಿಗಳನ್ನು ತಿಳಿಸುತ್ತಾನೆ. ಲಕ್ಷ್ಮೀಶನ ಭಾರತವಂತೂ, ಅದರ ವರ್ಣನೆಗಳ ರುಚಿಯಿಂದಾಗಿ ಶಬ್ದನಾದದಿಂದಾಗಿ ಕುಮಾರ ವ್ಯಾಸನಿಗೂ ಮೀರಿ ಜನಪ್ರಿಯತೆಯನ್ನು ಪಡೆಯಿತು. ಇಂತಹುದೊಂದು ಬದಲಾವಣೆ ಒಂದು ಇಡೀ ಸಂದರ್ಭದಲ್ಲಾದುದೆಂಬುದನ್ನು ಗಮನಿಸಿದರೆ, ಚರಿತ್ರೆಯ ಗತಿಯಲ್ಲೇ ಕಾವ್ಯದ ಸ್ವರೂಪವೂ ನಿರ್ಧಾರಗೊಳ್ಳುತ್ತ ಹುಟ್ಟುತ್ತದೆಂಬುದನ್ನು ಖಚಿತಪಡಿಸಿಕೊಳ್ಳಬಹುದು.

ಹೀಗೆಯೇ ಮುಂದುವರೆದ ಬರಡು ಕಾಲದಲ್ಲೂ ಗಮನಾರ್ಹನಾದ ಕವಿ ಸರ್ವಜ್ಞ. ರಾಜಾಶ್ರಯನಿಂದ ದೂರನಾಗಿ, ಅವಧೂತನಂತೆ ಅಲೆಮಾರಿಯಾಗಿದ್ದ ಅವನಿಗೆ ಜನಜೀವನದ ಆಳವಾದ ಗ್ರಹಿಕೆ ಸಾಧ್ಯವಾಗಿದೆ. ಜನರ ಬದುಕಿನ ನಾಡಿ ಯನ್ನು ಹಿಡಿದ ಕವಿ ಸರ್ವಜ್ಞ. ಕನ್ನಡನಾಡಿನ ಸಾಮಾಜಿಕವಾದ ಬದುಕನ್ನು ಆಳವಾಗಿ ಅರಿತ ಕವಿಗಳಲ್ಲಿ ಸರ್ವಜ್ಞ ಮತ್ತು ನಯಸೇನರಿಬ್ಬರೇ ಪ್ರಮುಖರು. ನಯಸೇನನ ಅನುಭವಶಕ್ತಿ ಜೀವಂತ ಬದುಕನ್ನು ಅರ್ಥೈಸುವುದಕ್ಕೆ ಉಪಯೋಗ ವಾಗದೆ ರೂಪಕಗಳ ಸರಮಾಲೆಯಲ್ಲಿ ನಂದಿಹೋಗಿದೆ. ಆದರೆ ಸರ್ವಜ್ಞ ಕಾವ್ಯ ವೊಂದರ ಚೌಕಟ್ಟಿಗೆ ಬಂಧಿತನಾಗಲಿಚ್ಛಿಸದೆ, ತಾನು ಕಂಡ ಲೋಕ ವೈರುಧ್ಯಗಳನ್ನು ತೀಕ್ಷ್ಣವಾಗಿ ಬಿಡಿವಚನಗಳಲ್ಲಿ ವಿಮರ್ಶಿಸಿದ್ದಾನೆ. ಹಾಗೆ ಮಾಡುವಾಗ ಅವನು ಬಳಸಿಕೊಂಡ ಮಾಧ್ಯಮವೂಕೂಡ ಜನಪದದಲ್ಲಿ ಬಳಕೆಯಿದ್ದ ತ್ರಿಪದಿಯೇ. ಇಷ್ಟಾದರೂ ಸರ್ವಜ್ಞನಲ್ಲಿ ಒಮ್ಮುಖ ಸಾಧ್ಯವಾಗದೇ ಹೋಗಿರುವುದಕ್ಕೆ, ಅವನು ಲೋಕವನ್ನು ಇದ್ದ ಸ್ಥಿತಿಯಲ್ಲಿ ಒಪ್ಪಿದವನಾಗಿರುವುದೇ ಕಾರಣ. ಹಾಗೆ ಒಪ್ಪಿದವ ನಾಗಿಯೂ, ಲೋಕದಲ್ಲಿದ್ದ ಅನ್ಯಾಯಗಳ ವಿರುದ್ಧ ದನಿಎತ್ತಿದ ಹೋರಾಟಗಾರನಾಗಿ ಸರ್ವಜ್ಞ ನಮಗೆ ಕಾಣಿಸುತ್ತಾನೆ. ಈವತ್ತಿನ ಕವಿಗೆ ಸರ್ವಜ್ಞನಿಂದ ಕಲಿಯ ಬೇಕಾದದ್ದು ಇದೆ. ಅವನಂತೆ ಲೋಕವನ್ನು ಸಮಗ್ರವಾಗಿ ಗ್ರಹಿಸುವುದು ಸಾಧ್ಯ ವಾಗಬೇಕು. ಹಾಗೆಯೇ ಅವನು ತನ್ನ ಕಾಲದ ಜನಕ್ಕೆ ಹೇಳುವುದಕ್ಕೆ ಸಾಧಿಸಿ ಕೊಂಡ ಕಾವ್ಯರೂಪದಂತೆ, ಜನತೆಯನ್ನು ಮುಟ್ಟಲು ಸಾಧ್ಯವಾಗುವ ಕಾವ್ಯರೂಪ ವನ್ನು ಸಾಧಿಸಬೇಕು. ಇವೆರಡಿದ್ದೂ ಸರ್ವಜ್ಞನಲ್ಲಿಲ್ಲದೆ, ಇಂದಿಗೆ ಅಗತ್ಯವಾದ

ಸಾಮಾಜಿಕ ವಾಸ್ತವ ದೃಷ್ಟಿಕೋನವನ್ನು ಗಳಿಸಿಕೊಳ್ಳುವುದು ಇಂದಿನ ಕವಿಯ ಹೆಚ್ಚಿನ ಹೊಣೆಗಾರಿಕೆ.

ಹದಿನೇಳು ಹದಿನೆಂಟು ಹತ್ತೊಂಭತ್ತನೆ ಶತಮಾನದ ಮೊದಲ ಭಾಗದವರೆಗೆ ಕಾವ್ಯ ಹೇಳಿಕೊಳ್ಳುವಂತಹುದೇನನ್ನೂ ಸಾಧಿಸದಿರುವುದಕ್ಕೆ ನಾವು ಕಾಲಕ್ಕೆ ಮೊರೆ ಹೋಗಬೇಕು. ತಮ್ಮ ತಮ್ಮಲ್ಲೇ ಕಚ್ಚಾಡುತ್ತಿದ್ದ ಪಾಳೆಯಗಾರರು ಮತ್ತು ರಾಜರು ಗಳು ; ಈ ರಾಜರುಗಳನ್ನು ಆಗಾಗ ಬಡಿದು ಚಚ್ಚಿ ಹಾಕುತ್ತಿದ್ದ ಮುಸಲ್ಮಾನ್ ಮತ್ತು ಮರಾಠೆಯವರು ; ಇವರೆಲ್ಲರ ಮೇಲೆ ಹಿಡಿತ ಸಾಧಿಸಲು ಪ್ರಯತ್ನಿಸುತ್ತಿದ್ದ ಪೋರ್ಚುಗೀಸ್, ಫ್ರೆಂಚ್ ಮತ್ತು ಇಂಗ್ಲೀಷರು. ಇಂತಹ ಕಚ್ಚಾಟದ ವಾತಾವರಣ ದಲ್ಲಿ ಜನತೆ ಮತ್ತು ಕವಿ ಆತ್ಮವಿಶ್ವಾಸವನ್ನು ಕಳೆದುಕೊಂಡು ಬದುಕುತ್ತಿದ್ದ ವಾತಾವರಣದಲ್ಲಿ ಕೇವಲ ಪಾಂಡಿತ್ಯ ಪೂರ್ಣವಾದ ಕೃತಿಗಳು, ಕಾಮಶಾಸ್ತ್ರಗಳು, ಚಿತ್ರ ಕವಿತ್ವವೇ ಮೊದಲಾದ ಕೃತಿಗಳು ಹುಟ್ಟಿಕೊಂಡವು. ಮೈಸೂರು ಅರಸರ ಆಸ್ಥಾನದಲ್ಲಿ ನೀರೋಪಿಟೀಲು ಬಾರಿಸಿದಂತೆ, ಪುರಾಣ ಕಾವ್ಯಗಳ ನಿರೂಪಣೆಯಾದು ದಲ್ಲದೆ, ಸತಿಯರಿಗೆ ಉಪದೇಶ ಮಾಡುವ ಹದಿಬದೆಯ ಧರ್ಮದಂತಹ ಕೃತಿಗಳೂ ಹುಟ್ಟಿದವು. ಅಂತಹ ಕೃತಿಯಲ್ಲೂ ಕೂಡ ಕವಯಿತ್ರಿಯ ವಾಸ್ತವ ಗ್ರಹಿಕೆಯಿಂದ ಹೆಣ್ಣಾಗಿ ಹುಟ್ಟಿದರೆ ಕುಂದೇನು ? ಎಂಬ ಮಾತು ಹುಟ್ಟಿತು. ಇದಿಷ್ಟನ್ನು ಬಿಟ್ಟರೆ ಹೊಸಗನ್ನಡ ಕಾವ್ಯದ ಉದಯದವರೆಗೆ ಕನ್ನಡ ಕಾವ್ಯ ಚಟುವಟಿಕೆ ನಿಂತೇ ಹೋಗಿತ್ತು.

ಕನ್ನಡದಲ್ಲಿ ನವೋದಯ ಕಾವ್ಯದ ಉಗಮಕ್ಕೆ ಈಗಾಗಲೇ ಅನೇಕ ಕಾರಣ ಗಳನ್ನು ಹೇಳಲಾಗಿದೆ. ಹೀಗೆ ಹೇಳುವಾಗ ಇಂಗ್ಲೀಷ್ ವಿದ್ಯಾಭ್ಯಾಸದ ಫಲ, ಸಮಾಜ ಸುಧಾರಣೆಗಳ ಪ್ರಭಾವಗಳನ್ನು ಗುರುತಿಸಲಾಗಿದೆ. ಇವುಗಳ ಪ್ರಭಾವವನ್ನು ಕಡೆಗಣಿಸುವಂತಿಲ್ಲವಾದರೂ, ಚಾರಿತ್ರಿಕವಾಗಿ ಸಮಾಜದಲ್ಲುಂಟಾದ ಬದಲಾವಣೆಯೇ ಪ್ರಧಾನವಾದುದು. ಬ್ರಿಟಿಷರಿಂದ ಸಂಸ್ಥಾನಾಧಿಪತಿಗಳೆಲ್ಲ ನಿರ್ನಾಮವಾದ ಮೇಲೆ ಬುದ್ಧಿಜೀವಿಗಳಿಗೆ ಆಶ್ರಯತಪ್ಪಿತು. ಬ್ರಿಟಿಷರಿಗೆ ತಮ್ಮ ಆಡಳಿತವನ್ನು ನಡೆಸಿ ಕೊಂಡು ಹೋಗುವ ಅವಶ್ಯಕತೆಯಿಂದಾಗಿ, ಅವರು ಜ್ಞಾನದ ಬಾಗಿಲನ್ನು ಜಾತಿಮತ ಭೇದವಿಲ್ಲದೆ ಎಲ್ಲರಿಗೂ ತೆರೆದರು. ಹಳೆಯ ಯಜಮಾನನ ಸ್ಥಾನದಲ್ಲಿ ಹೊಸ ಯಜಮಾನ ಬಂದರೂ, ಸಂಬಂಧ ಮೊದಲಿನಷ್ಟು ಬಿಗಿಯಾದುದಾಗಲೀ, ಹಾಡಿಹರಸ ಬೇಕೆಂಬ ನಿಯಮವಾಗಲೀ ಇರಲಿಲ್ಲ. ಇದಲ್ಲದೆ ಈ ದೇಶದಲ್ಲಿ ಬೆಳೆಯುತ್ತಿದ್ದ ಬಂಡವಾಳ ಶಾಹಿಯೂ ಕೂಡ, ಇಂತಹುದೊಂದು ಬದಲಾವಣೆಗೆ ಕಾರಣವಾಯಿತು. ರಾಜರ ಜಮೀನುದಾರರ ಕೈಯಿಂದ ಬಿಡಿಸಿಕೊಂಡು ಸ್ವತಂತ್ರವಾಗಿ ಉಸಿರಾಡುವ ನೆಲೆಗೆ ಅದು ಬಂದು ತಲುಪಿತು. ಕವಿಯನ್ನೂ ತನ್ನ ಹಾಗೆ ರಾಜನಿಂದ, ದೇವರಿಂದ

ಬಿಡಿಸಿ ಲೋಕದತ್ತ ತಳ್ಳಿತು. ಹೀಗೆ ಹಳೆಯ ಸಂಬಂಧವನ್ನು ಕಳಚಿಕೊಂಡ ಕವಿಗೆ ತಾನು ಸ್ವತಂತ್ರನೆಂದೂ, ಮತಧರ್ಮಗಳಿಗೆ ಅತೀತನೆಂದೂ, ವಸ್ತು ಮತ್ತು ರೂಪದ ಆಯ್ಕೆಯಲ್ಲಿ ಮುಕ್ತನೆಂದೂ ಸಾರಿಕೊಳ್ಳುವ ಅಹಂಭಾವ ಬಂದಿತು. ಇಂತಹ ಸ್ಥಿತಿಯಲ್ಲಿ ಮಾನವಲೋಕದಲ್ಲಿ ಸ್ವತಂತ್ರವ್ಯಕ್ತಿಯನ್ನು ನಿರ್ಮಿಸುವ ದಾರಿಯಲ್ಲಿ ಕವಿಗಳು ಹೊರಟರು. ಈ ಬದಲಾವಣೆ ಜಮೀನುದಾರಿ ಪದ್ಧತಿಯಿಂದ ಬಂಡವಾಳಶಾಹಿ ಪದ್ಧತಿಗೆ ಬದಲಾಗಿ, ಜೀತದಾಳು ಕೂಲಿಕಾರನಾಗಿ ಗಳಿಸಿದ ಸ್ವಾತಂತ್ರ್ಯದಂತೆಯೇ ಅನಿವಾರ್ಯ ಅಗತ್ಯವಾಯಿತು.

ಪ್ರಾರಂಭದ ನವೋದಯ ಕಾಲದ ಕವಿಗಳಲ್ಲಿ ಕವಿಯೆಂದು ಹೇಳಲಾಗದಿದ್ದರೂ ಬಾಲಲೀಲಾ ಮಹಾಂತಶಿವಯೋಗಿ ಎನ್ನುವ ವಿರಕ್ತ, ಗಮನಾರ್ಹ ವ್ಯಕ್ತಿಯಾಗಿ ಕಾಣಿಸುತ್ತಾನೆ. ಅರಸನೊಬ್ಬ ಛತ್ರಚಾಮರಗಳನ್ನಿತ್ತು ಗೌರವಿಸಿದರೆ, ಅವುಗಳನ್ನೆಲ್ಲಾ ಅರಸನಿಗೇ ಹಿಂತಿರುಗಿಸ ಹೇಳಿದ ಮನೋಭಾವ, ಅವನು ರಚಿಸಿರುವ ಪದ್ಯಗಳಲ್ಲಿ ವ್ಯಕ್ತವಾಗಿದೆ. ಸರಿ ಸುಮಾರು ಅದೇ ಕಾಲಕ್ಕೆ ಪ್ರೈಮರಿ ಶಾಲೆಯ ಮಾಸ್ತರುಗಳಾಗಿ ಕೆಲಸ ಮಾಡಿದ ಬಸವಾರ್ಯ ಮತ್ತು ಆತನ ಶಿಷ್ಯ ನಾಗಿಶೆಟ್ಟಿ ಇವರುಗಳ ಸಾಮಾಜಿಕ ದೃಷ್ಟಿಕೋನ ಮೆಚ್ಚತಕ್ಕದ್ದಾದದ್ದು ಮಾತ್ರವಲ್ಲ. ಇವರು ಕಾವ್ಯಲೋಕದಲ್ಲಿ ಪ್ರಸಿದ್ಧರಾಗಿಲ್ಲದಿದ್ದರೂ ಅವರ ಕಾವ್ಯಮನೋಧರ್ಮ ಪ್ರಗತಿಪರವಾದದ್ದು ಎಂಬುದನ್ನು ಗಮನಿಸಬೇಕು.

ಇವರಂತೆಯೇ ಶಾಲಾಮಾಸ್ತರಾಗಿ ಕನ್ನಡ ಕಾವ್ಯದಲ್ಲಿ ಹೊಸ ಶಕೆಯನ್ನು ಆರಂಭಿಸಿದವರು ಪಂಜೆ ಮಂಗೇಶರಾಯರು. ಕನ್ನಡ ಕಾವ್ಯದ ಹೊಸ ಉದಯವನ್ನು ಜನಪರವಾದ ಧೋರಣೆಗಳಿಂದ ಆರಂಭ ಮಾಡಿದ ಪ್ರಗತಿಪರ ಕವಿ ಪಂಜೆ. ಕನ್ನಡ ನಾಡಿನ ಬದುಕಿನಲ್ಲಿ ಬೇರು ಬಿಟ್ಟ ಕನ್ನಡದ ಸ್ವಂತಿಕೆಯಲ್ಲಿ ಹೊಸಗನ್ನಡ ಕಾವ್ಯವನ್ನು ಹುಟ್ಟು ಹಾಕಿದ ಕೀರ್ತಿ ನಿಜವಾಗಿ ಪಂಜೆಯವರಿಗೇ ಸಲ್ಲಬೇಕು. ಅವರ ತೆಂಕಣ ಗಾಳಿಯಾಟವಂತೂ ಹೊಸ ಕನ್ನಡ ಪ್ರತಿಭಟನೆ ಕಾವ್ಯದ ನಾಂದಿಗೀತೆ. ಹಾಗೆಯೇ ಅವರು ರಚಿಸಿದ ಹೊಲೆಯನ ಹಾಡು ಮತ್ತು ಕಬ್ಬಿಣ ಚಿನ್ನಗಳ ವಾಗ್ವಾದದ ಕವಿತೆಗಳು, ಅವರಿಗಿದ್ದ ವಾಸ್ತವ ದೃಷ್ಟಿಗೆ ಸಾಕ್ಷಿಯಾಗಿವೆ. ಇಷ್ಟಾದರೂ ಅವರು ಆರಂಭಿಸಿದ ಈ ನಾಡಿನ ಸಮಸ್ಯೆಗಳನ್ನು ಕುರಿತ ಕಾವ್ಯ ಮುಂದುವರೆಯದೆ ಹೋದುದಕ್ಕೆ ಕಾರಣಗಳು ನಮ್ಮ ಕಾವ್ಯದ ಚರಿತ್ರೆಯಲ್ಲಿವೆ.

ಬ್ರಿಟಿಷರ ಆಳ್ವಿಕೆಯ ದೆಸೆಯಿಂದಾಗಿ ತನ್ನ ಪ್ರಭಾವವನ್ನು ಬೆಳೆಸಿಕೊಂಡ ಬಂಡವಾಳ ಶಾಹಿಯ ಸ್ವಾತಂತ್ರ್ಯ ಕಲ್ಪನೆಗೆ ಇಂಗ್ಲಿಷ್ ಕಾವ್ಯಸ್ಫೂರ್ತಿ ನೆಲೆಯಾಯಿತು. ಶ್ರೀಯವರಿಂದ ಆರಂಭವಾದ ಕೊಳುಕೊಡುಗೆಯ ಮೂಲಕ ಈ ಪರಂಪರೆ ಮುಂದುವರೆಯಿತು. ಅಲ್ಲಿನ ರಮ್ಯಕವಿಗಳ ಆಲೋಚನೆಗಳು ಇಲ್ಲಿನವರಿಗೆ

ದಾರಿ ದೀಪವಾದುವು. ಕವಿ, ನಮ್ಮ ನಾಡಿನಲ್ಲಿ ಅದುವರೆಗೆ ಅನುಭವಿಸಿದ್ದ ಸಮೂಹ ಸಂಬಂಧದಿಂದ ಭಿನ್ನವಾದ, ವ್ಯಕ್ತಿ ಪ್ರಜ್ಞೆಯ ದ್ರಷ್ಟಾರನ ಸ್ಥಾನವನ್ನು ಪಡೆದ ; ಅಂದರೆ ಬಂಡವಾಳ ಷಾಹಿ ಹೇಗೆ ತನ್ನ ಬಂಡವಾಳಕ್ಕೆ ಯಜಮಾನನಾದನೋ ಹಾಗೆ. ಇದರಿಂದ ಕೇಳುಗ ಸಮೂಹವಿದ್ದ ಕನ್ನಡ ಕಾವ್ಯಕ್ಕೆ ಒಬ್ಬನೇ ಓದುಗನೂ ಬೇಕಾಯಿತು. ಕವಿಗೆ ತನ್ನ ನೆಲದಲ್ಲಿನ ಬಡತನ, ರೋಗ ರುಜಿನಗಳು, ಶೋಷಣೆ ಇವುಗಳು ಅಸಹ್ಯವಾಗಿ ಕಂಡವು. ಈ ಕಾಲದಲ್ಲಿ ಬರೆಯುವುದಕ್ಕೆ ಆರಂಭ ಮಾಡಿದವರೆಲ್ಲ ಮಧ್ಯಮ ವರ್ಗದ ಇಂಗ್ಲೀಷ್ ವಿದ್ಯಾಭ್ಯಾಸಕ್ಕೆ ಪರಿಚಿತರಾದುದ ರಿಂದ, ಅವರ ಕನಸುಗಳಿಗೆ ಈ ನೆಲದ ವಾಸ್ತವ ಸರಿಯಾದ ಭೂಮಿಕೆಯಾಗಲಿಲ್ಲ ಅಥವಾ ಹೋರಾಟಕ್ಕೆ ಸ್ಫೂರ್ತಿಯನ್ನು ಕೊಡುವಂತಹ ಯಾವುದೇ ಜೀವಂತ ಚಟುವಟಿಕೆಗಳು ಕವಿಯ ಸುತ್ತ ನಡೆಯುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ರಾಜ ನಿಂದ, ದೇವರಿಂದ ಬಿಡುಗಡೆಯನ್ನು ತಂದುಕೊಟ್ಟ ಬಂಡವಾಳಷಾಹಿಗೆ ಮುಖಾ ಮುಖಿಯಾಗದೆ ಕವಿ ಪ್ರಕೃತಿಯತ್ತ, ಅಲೌಕಿಕ ಆನಂದವನ್ನು ಕಲ್ಪಿಸಿಕೊಳ್ಳುವತ್ತ ಮುಖಮಾಡಿದ. ಪ್ರಕೃತಿಯಲ್ಲಿ ತಾನೂ ಒಂದು ಭಾಗವಾಗಿ ಎಲೆಯಲ್ಲಿ ಎಲೆಯಾಗಿ, ಹೂವಿನಲ್ಲಿ ಹೂವಾಗಿ ಇದ್ದುಬಿಡುವ ಮನಸ್ಸು ಮಾಡಿದ ಕವಿಗೆ ಹಸಿವು, ತೊಂದರೆ ಗಳು ಚಿಂತೆ ಒದ್ದಾಟಗಳು ಒಂದೂ ಇಲ್ಲವಾಯಿತು. ಯಾವ ಸಂಘರ್ಷಗಳೂ ಇಲ್ಲದ ಅಂದವಾದ ಜಗತ್ತನ್ನು ಕವಿ ಕಂಡ. ವಸ್ತು ವಾಸ್ತವ ಪ್ರಪಂಚದ್ದಾಗಿರದೆ ಕವಿಯ ಮನೋಪ್ರಪಂಚದ್ದಾಯಿತು. ಇಲ್ಲಿನ ಪಾತ್ರಗಳೆಲ್ಲ ಭಾವನಾತ್ಮಕ ಊಹೆಗಳಾದುವು. ಪ್ರಣಯವನ್ನು ವೈಭವಿಸಿ ಆದರ್ಶೀಕರಿಸಲಾಯಿತು. ರತ್ನಾಕರ ಮತ್ತು ಲಕ್ಷ್ಮೀಶರ ಮತ್ತು ನಂತರದ ಕಾವ್ಯಗಳಲ್ಲಿ ಹೆಣ್ಣನ್ನು ಭೋಗವಸ್ತುವೆಂದು ಚಿತ್ರಿಸಿದ್ದರೆ, ಇಲ್ಲಿ ಶರೀರಕ್ಕೆ ಅಸ್ತಿತ್ವವಿಲ್ಲದೆ ಇರುವ ಕಾಲ್ಪನಿಕ ಹೆಣ್ಣು ಸೃಷ್ಟಿ ಯಾದಳು. ಇಂತಹ ಅವಾಸ್ತವ ಚಿತ್ರಣಕ್ಕೆ, ಅರ್ಥಾತ್ ಲೋಕಾತೀತವಾದ ಭ್ರಾಮಕ ಕಲ್ಪನೆಗಳಿಗೆ ಕಾರಣ, ಆಗ ತಾನೇ ಬೆಳೆಯತೊಡಗಿದ್ದ ಬಂಡವಾಳ ಷಾಹಿಯು ತನ್ನ ಹಿಡಿತವನ್ನು ಹೆಚ್ಚಿಸಿಕೊಳ್ಳಲು ಸಮಾಜದಲ್ಲಿದ್ದ ಎಲ್ಲ ಹಳೆಯ ಮಾನವೀಯ ಸಂಬಂಧಗಳನ್ನೂ ಕುಟ್ಟಿ ಪುಡಿಮಾಡಿ, ಪ್ರತಿಯೊಂದು ಹಣವನ್ನು ಅವಲಂಬಿಸುವಂತೆ ಮಾಡಿದ್ದು. ಇದು ಕವಿಮನೋಧರ್ಮಕ್ಕೆ ಅನ್ಯಾಯವೆಂದು ಕಂಡು, ಈ ಅನ್ಯಾಯದ ವಿರುದ್ಧ ಪ್ರತಿಭಟನೆಯ ಸಲುವಾಗಿಯೇ ಕನ್ನಡ ಕಾವ್ಯದ ಆಶಯದ ಸ್ವರೂಪ, ಕಾವ್ಯಕ್ಕೆ ಕಾವ್ಯವೊಂದೇ ಆಶಯ ಎನ್ನುವಂತಾಯಿತು. ಇದರ ಸೂಚನೆಗಳು ಬೇಂದ್ರೆ ಮತ್ತು ಪುಟ್ಟಪ್ಪನವರ ಕವನಗಳಲ್ಲಿ ಕಾಣಿಸುತ್ತವೆ.

ಹಣದ ಕ್ರೂರ ಹಿಡಿತದ ಸಮಾಜದಿಂದ ಕವಿಯನ್ನು ಬಿಡಿಸಿ ಅವನನ್ನು ಸ್ವೇಚ್ಛಾಜೀವಿ ಎನ್ನುವಂತೆ ಭಾವಿಸಿದ ರಮ್ಯಕಾವ್ಯ, ಕವಿಯನ್ನು ಇಹಲೋಕದ ಜಂಜಡದಿಂದ ದೂರನೆಂಬಂತೆ ಕಂಡಿತು. ಉತ್ಪಾದಕನಾದ ರೈತನ ಬವಣೆಯನ್ನು

ಕಂಡರೂ, ಅವನನ್ನು ಯೋಗಿಯ ಸ್ಥಿತಿಯಲ್ಲಿ ಕೂರಿಸಿತು. ಇದಲ್ಲದೆ ಸಾಮಾನ್ಯನ ಬದುಕು ಕಾವ್ಯದೊಳಕ್ಕೆ ತಂದುಕೊಂಡರೂ ಅದರ ಅಂತರಂಗದೊಳಗೆ ಆದರ್ಶ ವ್ಯಕ್ತಿತ್ವವೊಂದು ಅಡಗಿಕುಳಿತುಬಿಟ್ಟಿತ್ತು (ರತ್ನನಪದಗಳು). ಕಾವ್ಯ ಅರ್ಥ ವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತ ಎಂದುಕೊಂಡು ತನ್ಮಯತೆಯನ್ನು ಅನುಭವಿ ಸಿತು. ಬಡವರಿಗೆ ಪ್ರೀತಿಯೊಂದೇ ಸಾಕೆಂದಿತು. ಈ ಆದರ್ಶೀಕೃತ ವೇದಾಂತ ದಿಂದಾಗಿ ವಾಸ್ತವ ಜಗತ್ತಿನ ಸಂಘರ್ಷಗಳಿಗೆ ಬೆನ್ನು ತಿರುಗಿಸಿದ ಕಾವ್ಯ, ತಾನು ಯಾವುದಕ್ಕೆ ವಿರೋಧವಾಗಿ ದೂರವಾಯಿತೋ, ಅದಕ್ಕೇ ಸಹಕಾರಿಯಾಗುತ್ತಿದ್ದೇ ನೆಂಬುದನ್ನು ಗಮನಿಸಲಿಲ್ಲ.

ನವೋದಯದ ಪ್ರಾರಂಭದ ದಶಕಗಳಲ್ಲಿ ಸಾಂಪ್ರದಾಯಿಕ ಆಲೋಚನೆಗಳಿಗೆ ವಾಹಕವಾದ ಕಾವ್ಯಕ್ಕೆ ಇದ್ದಕ್ಕಿದ್ದಂತೆ ಹೊಸ ಚೈತನ್ಯವೊಂದು ಬಂತು. ದೇಶೀಯ ಬಂಡವಾಳಷಾಹಿ ತನ್ನ ಪ್ರಭಾವವನ್ನು ಬೆಳೆಸಿಕೊಳ್ಳುವ ಸಲುವಾಗಿ, ಅಲ್ಲಿಯವರೆಗೆ ಪ್ರಬಲವಾಗಿದ್ದ ವಿದೇಶೀ ಏಕಸ್ವಾಮ್ಯ ಬಂಡವಾಳವನ್ನು ಎದುರು ಹಾಕಿಕೊಳ್ಳದೆ ಬೇರೆ ದಾರಿ ಇರಲಿಲ್ಲ. ಹೀಗಾಗಿ ಬೇರೆ ಬೇರೆ ಸಾಮಂತ ರಾಜರುಗಳ ಕೈ ಕೆಳಗಿದ್ದ ಬ್ರಿಟಿಷ್ ಇಂಡಿಯಾಕ್ಕೆ ರಾಷ್ಟ್ರೀಯತೆಯ ಕಲ್ಪನೆ ಪ್ರಬಲವಾಗಿ ಹುಟ್ಟಿತು. ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಯು ಹುಟ್ಟಿ ಬೆಳೆದು, ಸ್ವದೇಶೀ ಆಂದೋಲನವೂ ಗರಿಗಟ್ಟಿಕೊಂಡವು. ಈ ಭಾವನಾತ್ಮಕ ಐಕ್ಯತಾ ಆಂದೋಲನಕ್ಕೆ ರಾಷ್ಟ್ರದ ಎಲ್ಲ ವರ್ಗಗಳನ್ನೂ ಒಗ್ಗೂಡಿಸುವುದರಲ್ಲಿ ದೇಶೀ ಬಂಡವಾಳಗಾರರು ಸಫಲರಾದರು. ವರ್ಗಗಳಲ್ಲಿನ ಅಂತರ್ ವಿರೋಧಕ್ಕಿಂತ ಹೊರಗಿನ ಶತ್ರುವನ್ನು ಎದುರಿಸುವುದು ಪ್ರಮುಖವಾಯಿತು. ಕವಿ ಈ ಹೋರಾಟದ ಪ್ರವಾಹಕ್ಕೆ ಸಿಕ್ಕದೆ ಹೊರಗುಳಿಯು ವುದು ಸಾಧ್ಯವಾಗದ್ದಾದುದರಿಂದ, ನಾಡುನುಡಿಗಳ ಬಿಡುಗಡೆಗಾಗಿ ಹೋರಾಟವನ್ನು ಆರಂಭಿಸಿದ. ಇದನ್ನು ಆವೇಶದಿಂದ, ಭಕ್ತಿಯಿಂದ, ತನ್ಮಯತೆಯಿಂದ ಕೈಗೊಂಡು, ತನ್ನ ಸಮಾಜಕ್ಕೆ ಸೇವೆ ಸಲ್ಲಿಸಬೇಕೆಂಬ ಪ್ರಯತ್ನದಲ್ಲಿ ಸಫಲನಾದ. ಇಂತಹ ಸಂದರ್ಭದಲ್ಲಿ ಅನೇಕರು ಪಾಶ್ಚಾತ್ಯ ಸಂಸ್ಕೃತಿಯನ್ನು ಅದರ ಪ್ರಭಾವವನ್ನು ಕಿತ್ತು ಹಾಕಬೇಕೆಂದು, ಪ್ರಾಚೀನ ಕಾಲದ ಬದುಕಿನ ಮೌಲ್ಯಗಳನ್ನು ಎತ್ತಿ ಹೇಳಿ ವೈಭವಿಸಿ, ಅವು ಪುನರುತ್ಥಾನಗೊಳ್ಳಬೇಕೆಂದು ಆಶಿಸಿದರು. ಇದರಿಂದಾಗಿ ಅನೇಕ ಹಳೆಯ ಕಾವ್ಯ ಪ್ರಕಾರಗಳೂ, ಆಶಯಗಳೂ ಹೊಸ ಕನ್ನಡ ಕಾವ್ಯದಲ್ಲೂ ತಲೆ ದೋರಿದವು. ಆ ಕಾಲದ ಬಹುಪಾಲು ಕವಿಗಳು ನಾಡು ನುಡಿಗಳನ್ನು ರಕ್ಷಿಸುವ, ಬಿಡುಗಡೆ ಮಾಡುವ ದನಿಗೆ ದನಿಗೂಡಿಸಿದರು. ಅಂತಹುದರಲ್ಲೂ ಶ್ರೀಯವರಾಗಲೀ, ಮಾಸ್ತಿಯವರಾಗಲೀ ತಮ್ಮ ಬರವಣಿಗೆಗಳಲ್ಲಿ ಈ ಆಂದೋಲನಕ್ಕೆ ಅವಕಾಶವನ್ನು ಕೊಡದಿರುವುದನ್ನು ಗಮನಿಸಿದರೆ, ಇವರು ರಾಜಭಕ್ತಿಯಲ್ಲಿದ್ದುದೇ ಕಾರಣ ವೆನ್ನಿಸುತ್ತದೆ.

ನಾಡು ನುಡಿಗಳ ಹೋರಾಟವೂ ಕೂಡ ಕಾವ್ಯದಲ್ಲಿ ಉತ್ಸಾಹ ಸ್ಥಾಯಿಯಾದ ರಮ್ಯವೇ ಆದುದರಿಂದ ಮನೋಭಾವದಲ್ಲಿ ಈ ಪೀಳಿಗೆಯ ಕವಿಗಳಿಗೆ ಯಾವುದೇ ವ್ಯತ್ಯಾಸವು ಆಲೋಚನೆಯ ಮಟ್ಟದಲ್ಲಿ ಕಾಣಿಸಲಿಲ್ಲ. ಸ್ವಾತಂತ್ರ್ಯ ಚಳುವಳಿಯ ಮೇಲೆ ಪ್ರಭಾವ ಬೀರಿದ ಮತ್ತೊಂದು ಪ್ರಮುಖ ಅಂಶವೆಂದರೆ ರಷ್ಯಾದಲ್ಲಿ ನಡೆದ ಸಮಾಜವಾದೀ ಕ್ರಾಂತಿ. ಈ ಕ್ರಾಂತಿಯ ಸಾಧನೆಯ ಬೆಳಕಿನಲ್ಲಿ, ಭಾರತೀಯ ಲೇಖಕರನೇಕರು ಭಾರತದ ಬಿಡುಗಡೆಯನ್ನು ಕಂಡರು. ಇದಲ್ಲದೆ ಸ್ವಾತಂತ್ರ್ಯ ಚಳುವಳಿಯ ಹೋರಾಟದಲ್ಲಿ ಪಾಲ್ಗೊಂಡವರಲ್ಲಿ ಅನೇಕರಿಗೆ ಇದೇ ಗುರಿಯಾಯಿತು.

ಪ್ರಗತಿಶೀಲ ಚಳುವಳಿಯು ಭಾರತದ ಎಲ್ಲಾ ಕಡೆಗಳಲ್ಲಿ ಆರಂಭವಾದ ಹಾಗೆ ಕರ್ನಾಟಕದಲ್ಲಿಯೂ ಗದ್ಯ ಬರವಣಿಗೆಯಲ್ಲಿ ವಿಶೇಷವಾಗಿ ಕಾಣಿಸಿಕೊಂಡಿತು. ಆಗ ಕಾವ್ಯರಚನೆ ಮಾಡುತ್ತಿದ್ದವರಲ್ಲಿ ಪ್ರಮುಖರಾದ ಕುವೆಂಪು, ಬೇಂದ್ರೆ ಮೊದಲಾದವರಲ್ಲದೆ, ನವ್ಯ ಕವಿಗಳಾದ ಗೋಪಾಲಕೃಷ್ಣ ಅಡಿಗರೂ ಈ ಚಳುವಳಿಯ ಸೆಳೆತಕ್ಕೆ ಸಿಕ್ಕಿ ಬಹಳ ಶಕ್ತಿಶಾಲಿ ಕವನಗಳನ್ನು ರಚಿಸಿದರು. ಆದರೆ ಪ್ರಗತಿಶೀಲ ಚಳುವಳಿ ಕನ್ನಡ ಕಾವ್ಯದಲ್ಲಿ ನೆಲೆಯೂರುವುದಕ್ಕೆ ಬೇಕಾದ ತಾತ್ವಿಕ ಹಿನ್ನೆಲೆಯನ್ನು ಒದಗಿಸುವ ಪ್ರಯತ್ನವನ್ನು ಆ ಕಾಲದ ಸಮಕಾಲೀನ ವಿಮರ್ಶೆ ಮಾಡದೆ ಹೋಯಿತು.

ವಸ್ತು ಪ್ರಧಾನತೆ ಗದ್ಯ ಬರವಣಿಗೆಯಲ್ಲಿ ಕಾಣಿಸಿಕೊಂಡಂತೆ ಕಾವ್ಯ ಕ್ಷೇತ್ರದಲ್ಲಾಯಿತಾದರೂ, ವಿಮರ್ಶೆಯ ಪ್ರಮಾಣಗಳು ಕಾವ್ಯವನ್ನು ವ್ಯಕ್ತಿಗತವಾಗಿಯೇ ನೋಡಿದ್ದರಿಂದ, ಸಾಮಾಜಿಕ ಕಾಳಜಿಯುಳ್ಳ ಕವಿತೆಗಳನ್ನು ಎರಡನೆ ದರ್ಜೆಯ ಕವಿತೆಯೆಂದೋ, ಪ್ರಚಾರ ಕವಿತೆಯೆಂದೋ ನಿಂದಿಸಿ, ಅಂತಹ ಕಾವ್ಯದ ಬೆಳವಣಿಗೆಯನ್ನು ಚಿವುಟಿ ಹಾಕಲು ಪ್ರಯತ್ನಿಸಿದವು. ಇದು ಎಷ್ಟು ಅನಾರೋಗ್ಯಕರವಾದ ಮಟ್ಟವನ್ನು ಮುಟ್ಟಿತೆಂದರೆ, "ಕವಿತೆಯನ್ನು ಬರೆದು ಅನ್ನದಂಥ ಸಮಸ್ಯೆಯನ್ನು ಬಿಡಿಸುವುದಾದರೂ ಹೇಗೆ? ಹೇಳಿ ಕೇಳಿ ಕಾವ್ಯ ಒಂದು ಕಲೆ ; ಅದರ ಸಾಮಗ್ರಿ ಕಣ್ಣಿಗೂ ಕಾಣದ ಭಾಷೆ, ಅದರ ಗುರಿ ಮಾನವ ಹೃದಯ" ಇಂತಹ ಸಾಂಪ್ರದಾಯಿಕ ಜಡ ವಿಮರ್ಶೆಯೇ ಕವಿಗಳಿಗೆ ಮಾರ್ಗದರ್ಶನವಾಯಿತು. ಇನ್ನೂ ನೆಲೆಯೂರದಿದ್ದ ಈ ಚಳುವಳಿಗೆ ನೆಲೆ ತಂದುಕೊಡಬೇಕಾದ ಕೆಲಸವನ್ನು ಗದ್ಯ ಕ್ಷೇತ್ರದಲ್ಲಿ ಚಳುವಳಿಯ ಯಶಸ್ಸನ್ನು ಅಲ್ಪ ಸ್ವಲ್ಪ ಸಾಧಿಸಿದ್ದ ಲೇಖಕರು ಮಾಡಲಾರದೇ ಹೋದರು. ಇದಲ್ಲದೆ ಅವರಿಗೂ ಪ್ರಗತಿಶೀಲ ಚಳುವಳಿಯ ತಾತ್ವಿಕ ನೆಲೆಗಟ್ಟಿನ ಸರಿಯಾದ ತಿಳುವಳಿಕೆ ಇರಲಿಲ್ಲವೆಂಬುದೂ ಅವರಲ್ಲಿ ಅನೇಕರ ಬರವಣಿಗೆಯನ್ನು ಗಮನಿಸಿದರೆ ಸ್ಪಷ್ಟವಾಗುತ್ತದೆ. ಅಂದರೆ ತುಂಬಾ ಬಾಲಿಶವಾದ ರಮ್ಯ ಕಲ್ಪನೆ ಅವರು ಬರವಣಿಗೆಯಲ್ಲಿ ತಂದುಕೊಂಡರು. ಹೋಟೆಲ್ ಮಾಣಿಯನ್ನು ದೊಡ್ಡ ಹೋಟೆಲ್ ಮಾಲೀಕನನ್ನಾಗಿ ಮಾಡುವ, ಅನಾಮಧೇಯ ನಟನನ್ನು ರಸಿಕಾಗ್ರಣಿಯಾದ ನಟಸಾರ್ವಭೌಮನನ್ನಾಗಿಸುವ, ಸೂಳೆಯನ್ನು ಪವಿತ್ರಾತ್ಮಳನ್ನಾಗಿ ಚಿತ್ರಿಸು

ನತ್ತ ಈ ಬರಹಗಾರರಲ್ಲಿ ಮುಖ್ಯರಾದವರ ಗಮನ ಕೇಂದ್ರೀಕೃತವಾಯಿತು. ಅದನ್ನೇ ಸಮರ್ಥಿಸುವ ಸಾಹಿತ್ಯ ಮೀಮಾಂಸೆಯೂ ಅವರಿಂದಲೇ ಹುಟ್ಟಿತು. ಇಂತಹ ಸಂದರ್ಭದಲ್ಲೂ ನಿರಂಜನ, ಕಟ್ಟೀಮನಿಯಂಥವರು ತಮ್ಮ ಬರಹಗಳಲ್ಲಿ ಸಮಾಜ ವಾದೀ ದೃಷ್ಟಿಕೋನವನ್ನು ಪ್ರತಿಬಿಂಬಿಸಲು ಪ್ರಯತ್ನಿಸಿ ಯಶಗಳಿಸಿದರು. ಆದರೆ ಕಾವ್ಯಲೋಕದಲ್ಲಿ ಈ ಚಳುವಳಿಯ ಗುಂಪಿನ ಪ್ರಧಾನತೆ ಇಲ್ಲದ್ದರಿಂದ, ಯಾವ ಗುಂಪಿಗೂ ಸೇರದಂತಿದ್ದ ಕವಿಗಳು ಸಾಂದರ್ಭಿಕವಾಗಿ ಉಂಟಾದ ಚಳುವಳಿಯ ಪ್ರಭಾವಕ್ಕೆ ಅನುಗುಣವಾಗಿ, ಕೆಲವು ಸಮಾಜವಾದೀ ದೃಷ್ಟಿಕೋನವನ್ನುಳ್ಳ ಕವಿತೆ ಗಳನ್ನು ರಚಿಸಿದರು. ಅಷ್ಟು ಬಿಟ್ಟರೆ ಮತ್ತೆ ಯಥಾ ರೀತಿಯಲ್ಲಿ ಅವರು ಸ್ವಾತಂತ್ರ್ಯ ಹೋರಾಟ, ಪ್ರೇಮಲೋಕದ ಸಮಾನತೆಗಳು, ಪ್ರಕೃತಿಯಾರಾಧನೆ ಇದೇ ಮೊದ ಲಾದ ವಸ್ತುಗಳಿಗೆ ತಮ್ಮ ಕಾವ್ಯಕ್ಷೇತ್ರವನ್ನು ಸೀಮಿತಗೊಳಿಸಿದರು. ಇದಲ್ಲದೆ ಸ್ವಾತಂತ್ರ್ಯ ಚಳುವಳಿಯ ಹೋರಾಟದ ನಾಯಕತ್ವ ಬಂಡವಾಳಷಾಹಿಯ ಕೈಯಲ್ಲಿ ಕೇಂದ್ರೀಕೃತವಾದಂತೆಲ್ಲ, ಸಮಾಜವಾದಿ ದೃಷ್ಟಿಕೋನವನ್ನುಳ್ಳ ಬರವಣಿಗೆ ಗಳಿಗೆ ಸ್ಫೂರ್ತಿತಪ್ಪುತ್ತಾ ಬಂತು.

ಸ್ವಾತಂತ್ರ್ಯ ಬಂದು ನಾಲ್ಕಾರು ವರ್ಷಗಳವರೆಗೂ ಎಲ್ಲವನ್ನೂ ಪಡೆದೆವೆಂಬ 'ಸಂತೃಪ್ತಿ'ಯ ನಡೆ ಈ ದೇಶದ ಜನತೆಗೆ ಬಂದಂತೆಯೇ, ಕವಿಗಳಿಗೂ ಬಂದಿತ್ತು. ಕೆಲವು ಪ್ರಗತಿಶೀಲ ಲೇಖಕರು ಇದಕ್ಕೆ ಅಪವಾದವಾಗಿದ್ದರು ಅಷ್ಟೆ. ಅಧಿಕಾರ ವರ್ಗಾವಣೆಯ ಮೂಲಕ ವರ್ಗಸಾಮರಸ್ಯದ ಕನಸುಕಂಡ ಹಲವಾರು ಕವಿಗಳಿಗೆ ನಿಧಾನವಾಗಿ ಭ್ರಮನಿರಸನವಾಗತೊಡಗಿತು. ಅಧಿಕಾರ ವರ್ಗಾವಣೆ ಅದೇ ವ್ಯವಸ್ಥೆಯ ಅದಲುಬದಲು ಕ್ರಿಯೆ ಎನ್ನುವ ಕಟು ಸತ್ಯವನ್ನು ಕಂಡುಕೋಡವರಿಗೂ, ಅದನ್ನು ಕಂಡುಕೊಳ್ಳಲಾರದೇ ಹೋದವರಿಗೂ ಮಧ್ಯೆ ಒಂದು ದೊಡ್ಡ ತಾತ್ವಿಕ ಘರ್ಷಣೆಯೇ ಏರ್ಪಟ್ಟಿತ್ತಾದರೂ, ಕನ್ನಡ ಕಾವ್ಯಲೋಕದಲ್ಲಿ ಆದರ ಪ್ರಭಾವವೇ ಉಂಟಾಗಲಿಲ್ಲ. ಇದ್ದುದರಲ್ಲಿ ತಾತ್ವಿಕ ನೆಲೆಗಟ್ಟಿನಿಂದ ರಮ್ಯ ಕಾವ್ಯದ ಪೊಳ್ಳುತನ ವನ್ನು, ಅದರ ಕಾಲ್ಪನಿಕ ಲೋಕವನ್ನು ವಿಡಂಬಿಸಿ, ವಾಸ್ತವಕ್ಕೆ ಕವಿಯನ್ನು ಎಳೆದು ತರಲು ಪ್ರಯತ್ನಿಸಿದ ಪ್ರಥಮ ಪ್ರಯತ್ನ ವಿ. ಜಿ. ಭಟ್ಟರದು. ವ್ಯಂಗವನ್ನೇ ಸ್ಥಾಯಿಯನ್ನಾಗಿ ಮಾಡಿಕೊಂಡ ಇವರ ಕಾವ್ಯ ಹೊರಟ ಜಾಡು ಕನ್ನಡ ಕಾವ್ಯಲೋಕಕ್ಕೆ ಬಹಳ ಮಹತ್ತರವಾದ ಸಾಮಾಜಿಕ ಚಿಂತನೆಯ ಕಾವ್ಯ ಜಗತ್ತನ್ನು ಸೃಷ್ಟಿಸಿಕೊಡುವ ಮಾರ್ಗದರ್ಶಿಯಾಗಬೇಕಿತ್ತು. ಆದರೆ ವಿಮರ್ಶೆ ಮತ್ತು ಈಗಾಗಲೇ ಅಂತಹುದೊಂದು ವಿಮರ್ಶೆಯಿಂದ ತರಪೇತು ಪಡೆದ ಕವಿಗಳು ಮತ್ತು ಓದುಗರು ಈ ಬಗೆಯ ಕಾವ್ಯಕ್ಕೆ ಅಷ್ಟೇನೂ ಪುರಸ್ಕಾರವನ್ನು ನೀಡಲಿಲ್ಲ. ಸ್ವಾತಂತ್ರ್ಯದ ರಮ್ಯ ಕಲ್ಪನೆಯು ಒಡೆದು ಹೋದರೂ, ಹೋರಾಡಬಲ್ಲ ಶಕ್ತಿಯಿರುವ ಜನತಾ ಚೈತನ್ಯವನ್ನು ಗುರುತಿಸಿಕೊಂಡು, ಅದರ ಮುಖವಾಣಿ

ಯಾಗುವ ಕೆಲಸವನ್ನು ಸಮಾಜದಲ್ಲಿ ನಂಬಿಕೆಯನ್ನುಳಿಸಿಕೊಂಡ ಇಂತಹ ಕವಿತ್ವ ಮಾಡಬಲ್ಲುದಾಗಿತ್ತು. ಇದೇ ಸಂದರ್ಭದಲ್ಲಿ ರಮ್ಯ ಕಾವ್ಯದ ಆದರ್ಶಲೋಕಕ್ಕೆ ಶರಣು ಹೊಡೆದ ಗೋಕಾಕ್ ಮತ್ತು ಅಡಿಗರು, ಲೋಕ ಮತ್ತು ಮನುಷ್ಯನ ನಡುವಿನ ವಾಸ್ತವ ಸಂಬಂಧಗಳನ್ನು ರಮ್ಯ ಗುರುತಿಸಲಾರದೆಂದು ಅರಿತು, ಆರಂಭಕ್ಕೆ ಪ್ರತಿಭಟನಾತ್ಮಕವಾದ ದನಿಗಳನ್ನೆತ್ತಿದರು. ಈ ದನಿಕೂಡ ಕವಿಗಳ ವೈಯಕ್ತಿಕ ಚಟವೋ, ಹಟವೋ ಆಗಿ ಬಂದದ್ದೆಂದು ಟೀಕಿಸುವಾಗಲೋ, ಹೊಗಳುವಾಗಲೋ ಅನೇಕ ವಿಮರ್ಶಕರು ಆರೋಪಿಸುವುದುಂಟು. ಆದರೆ ಈ ನಡೆ ಕೂಡ ಅವರ ವೈಯಕ್ತಿಕ ಇಚ್ಛಾನಿಚ್ಛೆಗಳನ್ನು ಮೀರಿದ ಸಾಮಾಜಿಕ ನಡೆಯ ಒಂದು ಅಂಗ ಎಂಬುದನ್ನೂ, ಆಗಿನ ಚಾರಿತ್ರಿಕ ಸ್ಥಿತಿಗಳನ್ನು ಗುರುತಿಸುವುದರಿಂದ ತಿಳಿಯ ಬಹುದಾಗಿದೆ.

ಸ್ವಾತಂತ್ರ್ಯಾನಂತರ ಬಂಡವಾಳಶಾಹಿಯ ಬೆಳವಣಿಗೆಯ ಜೊತೆ ನಗರದ ಜೀವನದ ಬೆಳವಣಿಗೆಯೂ ಆಯಿತು. ಎರಡನೆ ಮಹಾಯುದ್ಧಾನಂತರ ಅದರ ಪರಿಣಾಮಗಳೂ ದೇಶದ ಸ್ಥಿತಿಗತಿಗಳ ಮೇಲೆ ವಿಶೇಷ ಪರಿಣಾಮವನ್ನು ಬೀರಿದವು. ವ್ಯಕ್ತಿ ವ್ಯಕ್ತಿಗಳ ನಡುವಿನ ಸಂಬಂಧಗಳು ಬಂಡವಾಳಶಾಹಿ ಸಮಾಜದಲ್ಲಿ ದಿಕ್ಕು ತಪ್ಪಿದವು. ಮಧ್ಯಮ ವರ್ಗಕ್ಕೆ ತ್ರಿಶಂಕು ಸ್ಥಿತಿ ಉಂಟಾದದ್ದು ಮಾತ್ರವಲ್ಲದೆ, ಇತ್ತ ಮೇಲುವರ್ಗವನ್ನು ಓಲೈಸಲಾಗದ, ಕೆಳವರ್ಗದ ಆಶೋತ್ತರಗಳನ್ನು ಗ್ರಹಿಸ ಲಾರದ ಸ್ಥಿತಿ ಬಂತು. ಇವರಲ್ಲೂ ಅನೇಕ ಜನ ಖ್ಯಾತ ಕವಿಗಳು ಅಕಾಡೆಮಿ ಪ್ರಶಸ್ತಿ ಗಳನ್ನೋ, ಸರ್ಕಾರದ ಇತರ ಅನುಕೂಲಗಳನ್ನೊ ಪಡೆದು ಅರವಿಂದ, ರಾಮಕೃಷ್ಣ, ಸಾಯಿಬಾಬಾ, ಶ್ರೀಮಾತಾ ಇವರೇ ಮೊದಲಾದವರ ಪ್ರಾರ್ಥನೆಯಲ್ಲಿ ಕಾವ್ಯಲಾಪ ವನ್ನು ಮುಂದುವರೆಸಿದರು. ಬಂಡವಾಳಶಾಹಿಯ ಕ್ರೌರ್ಯಕ್ಕೆ ಪಕ್ಕಾದ ಕವಿಗಳು ಇದನ್ನು ಪ್ರತಿಭಟಿಸಲೇಬೇಕೆಂಬ ಮನೋಧರ್ಮಕ್ಕೆ ಬಂದಾಗ, ಇಡಿಯಾಗಿ ರಮ್ಯ ಪರಂಪರೆಯನ್ನು ತಿರಸ್ಕರಿಸಿದರು. ಹಾಗೆ ತಿರಸ್ಕರಿಸುವಾಗ ತಮ್ಮಂತೆಯೇ ಬಂಡವಾಳ ಶಾಹಿಯಲ್ಲಿ ಇಕ್ಕಟ್ಟಿಗೆ ಒಳಗಾಗಿದ್ದ, ಪಾಶ್ಚಾತ್ಯ ಕವಿಗಳಾದ ಏಟ್ಸ್, ಏಡನ್, ಪೌಂಡ್ ಮತ್ತು ಇಲಿಯಟ್ ಇವರ ವಿಚಾರ ಸರಣಿ ನೆರವಿಗೆ ಬಂತು. ಪತನ ಹೊಂದುತ್ತಿರಬಹುದಾದ, ಸಾಮಾಜಿಕ ಜೀವನದ ಮೌಲ್ಯಗಳು, ಇದರಿಂದ ಸೃಷ್ಟಿ ಶೀಲ ವ್ಯಕ್ತಿತ್ವಕ್ಕೊದಗಬಹುದಾದ ಪರಕೀಯತೆಯಿಂದ ಅವನು ಸಮಾಜಕ್ಕೆ ದೂರ ವಾಗುತ್ತಾನೆನ್ನುವ ಸಿದ್ಧಾಂತಕ್ಕೆ ಈ ಕವಿಗಳೆಲ್ಲರೂ ಬಂದರು. ಕವಿ ಯಾವುದಕ್ಕೂ, ಯಾವನಿಗೂ ಜವಾಬ್ದಾರನಾಗಿರಬೇಕಾಗಿರದಂತಹ ಉದಾಸೀನ ಪ್ರವೃತ್ತಿಯೊಂದು ಬೆಳೆಯುತ್ತಿರುವಾಗಲೇ, ಓದುಗ ಭಾವಲೋಕದಲ್ಲಿ ತನ್ಮಯನಾಗುವುದಕ್ಕೆ ಬದಲಾಗಿ ಚಿಂತನಶೀಲನಾಗಬೇಕಾದುದನ್ನು ನಿರೀಕ್ಷಿಸಿತು. ಹಳಗನ್ನಡ ಕಾವ್ಯದಲ್ಲಿ ಅಕ್ಷರಬಾರ ದಿದ್ದರೂ ಕೇಳುಗರಾಗಿದ್ದ ಕನ್ನಡದ ಬಹುಪಾಲು ಶ್ರೋತೃಗಳಿಂದ ದೂರವಾಗಿ,

ಕಾವ್ಯ ಅಚ್ಚುಕೂಟದಿಂದ ಹೊರಬಂದು ವ್ಯಕ್ತಿಯನ್ನು ಓದುಗವನ್ನಾಗಿ ಮಾಡಿಕೊಂಡಾಗ, ಓದುವುದಕ್ಕೆ ಬರುವ ಮಧ್ಯಮವರ್ಗದ ಸಿದ್ಧ ಓದುಗರಿಗೆ ಸೀಮಿತವಾಯಿತು. ನವ್ಯಕಾವ್ಯದ ಉಗಮದಿಂದಾಗಿ, ಅದರ ಎಲ್ಲಾ ತಾಂತ್ರಿಕ ಪರಿಕರಗಳ ಅರಿವಿನಿಂದ ಅದನ್ನು ಅರ್ಥೈಸಿಕೊಳ್ಳುವ ಕೆಲವೇಮಂದಿ ಓದುಗರನ್ನು ಆಯ್ದುಕೊಂಡಿತು. ಶೈಲಿಯಲ್ಲಿ ಶಬ್ದಗಳ ಅರ್ಥಪೂರ್ಣ ರಚನೆ ಇಲ್ಲಿ ಆಯಿತಾದರೂ, ಅವನ್ನು ಅರ್ಥೈಸುವುದಕ್ಕೆ ಅದರಲ್ಲಿದ್ದ ವೈಯಕ್ತಿಕ ಮಿತಿಗಳು ಅಡ್ಡಬಂದವು. ಹೀಗೆ ನವ್ಯಕಾವ್ಯದ ಓದುಗ ಅದರ ಶಿಲ್ಪ, ಸಾಮರ್ಥ್ಯವನ್ನು ಪ್ರಶಂಶಿಸುವ, ಇಲ್ಲವೇ ತೆಗಳುವವನಾಗಿ ಬದಲಾವಣೆಯಾದ.

ಇದಕ್ಕೂ ಕಾರಣ ಆ ಕಾವ್ಯದ ಕ್ಲಿಷ್ಟ ಶೈಲಿಯಲ್ಲಿರದೆ, ಆ ಕಾವ್ಯಕ್ಕೂ, ಸಮಾಜಕ್ಕೂ ಇದ್ದ ಸಂಬಂಧದಲ್ಲೇ ಇದೆ. ಪ್ರಗತಿಶೀಲ ರಚನೆಗಳಲ್ಲಿ ವಸ್ತು ಪ್ರಧಾನತೆ ಇದ್ದದ್ದು, ಇಲ್ಲಿ ಕವಿತ್ವದ ರೂಪಕ್ಕೆ ಪ್ರಾಧಾನ್ಯತೆ ಬರಲು ಪ್ರಾರಂಭವಾಯಿತು. ಹೇಳಿದ್ದನ್ನೇ ಹೇಳುವುದಿಲ್ಲವೆಂದು, ರೂಪದಲ್ಲಿ ಪ್ರಯೋಗಕ್ಕೆ ತೊಡಗಿತು ನವ್ಯಕಾವ್ಯ. ಹೀಗಾಗುವುದಕ್ಕೆ, ಈ ಹಿಂದೆ ಕವಿಗೆ ಮತ್ತು ಸಮಾಜಕ್ಕಿದ್ದ ಅನ್ಯೋನ್ಯ ಸಂಬಂಧ ಕಡಿದುಹೋಗಿತ್ತು. ತನ್ನತನವನ್ನು ಆ ಸಮಾಜದಿಂದ ಹೊರಕ್ಕೆ ತರಬೇಕೆಂಬ, ಪ್ರತ್ಯೇಕತಾ ಮನೋಭಾವ ಕವಿಯಲ್ಲಿ ಹುಟ್ಟಿದುದರಿಂದ, ಅದರಿಂದಲೇ ವಾಸ್ತವಾಂಶಗಳ ನಿರೂಪಣೆ ಸಾಧ್ಯ ಎಂಬ ತರ್ಕ ಅದರ ಹಿಂದೆ ಇತ್ತು. ಈ ತರ್ಕದಿಂದಾಗಿ ಕವಿ ಸಮಾಜದ ನಿರಂತರ ಬೆಳವಣಿಗೆಯಲ್ಲಿ ಅಡಗಿರುವ ಘರ್ಷಣೆಗಳ ಹಿಂದಿನ ಚಲನಶೀಲ ಕ್ರಿಯಾಶಕ್ತಿಗಳನ್ನು ಗುರುತಿಸಿಕೊಳ್ಳಲಾರದೆ ಹೋಗಿದ್ದಾನೆ. ಇಂತಹ ಸ್ಥಿತಿಯಲ್ಲಿ ಅವನು ಸಮಾಜದ ನಿತ್ಯ ಚಟುವಟಿಕೆಗಳಿಗೆ ಮುಖ ತಿರುಗಿಸಿದ್ದು ಮಾತ್ರವಲ್ಲದೆ, ತತ್ಕಾಲೀನತೆಯ ಆಚೆಯಿರುವ ಭೂಮಿಯ ಅನಂತತೆಯ ಹುಡುಕಾಟವನ್ನು ಮಾಡಲು ತೊಡಗಿದ. ಕವಿಗೆ ಸಮಾಜಕ್ಕಿಂತ ಹೆಚ್ಚಾಗಿ, ಅದರಲ್ಲೂ ತನ್ನ ಅಂತರ್ಮುಖತೆಗೆ ಪ್ರಾಮಾಣಿಕನಾಗಿದ್ದರೆ ಸಾಕೆನ್ನಿಸಿತು. ತನ್ನ ಹುಡುಕಾಟವೇ ಕಾವ್ಯದ ಹುಡುಕಾಟವಾಗಿ ತನ್ನಂತಾಗದವನಿಗೆ ಕಾವ್ಯ ದೂರವಾದದ್ದೆನ್ನುವಂತಾಯಿತು. ಇದನ್ನೇ ಪ್ರಾಮಾಣಿಕವಾದ ಅಭಿವ್ಯಕ್ತಿಯೆಂದು ಒಪ್ಪೈಸುವ ವಿಮರ್ಶಕ ಓದುಗರು ಒಂದು ಗುಂಪಾಗಿ ಮಿತಿ ಪಡೆದರು. ಕಾವ್ಯ ಬರೆಯುವವರು ವಿಮರ್ಶಕರಿಗಾಗಿ, ಅವರ ಭಯದಿಂದ ಕಾವ್ಯ ಬರೆದುದಲ್ಲದೆ ಓದುಗರನ್ನು ಮರೆತರು. ಇಂತಹ ಸ್ಥಿತಿಯಲ್ಲಿ ಹೇಳಬೇಕಾದದ್ದಕ್ಕಿಂತ, ಹೇಳುವುದರ ವೈಚಿತ್ರ ಸೃಷ್ಟಿಯಲ್ಲಿ ಗಮನಸೆಳೆಯಬೇಕೆಂಬ ಹಟ ಚಿತ್ರಕವಿತ್ವವನ್ನು ಮುಟ್ಟಿದ್ದೂ ಉಂಟು. ಕವಿ ಸಾಮಾಜಿಕಸಂಬಂಧಗಳಿಗೆ, ವಾಸ್ತವ ಹೋರಾಟಗಳಿಗೆ, ದೂರಾದಾಗಲೆಲ್ಲಾ ಇಂತಹುದೊಂದು ಸ್ಥಿತಿ ಏರ್ಪಡುತ್ತದೆ. ಆಗ ಕಾವ್ಯದಲ್ಲಿ ವಿಷಯಕ್ಕಿಂತ ಹೆಚ್ಚಾಗಿ, ಅಭಿವ್ಯಕ್ತಿ ನೈಪುಣ್ಯಕ್ಕೆ, ಶಬ್ದ ದೊಂಬರಾಟಕ್ಕೆ ಆದ್ಯತೆ

ಒಂದು ಕವಿ ಅದರ ನಡುವೆ ಕಳೆದುಹೋಗುತ್ತಾನೆ. ಈ ಚಳುವಳಿಯ ಪ್ರಮುಖರಾದ ಅಡಿಗರು ಶೈಲಿನಿಷ್ಠರಾದಂತೆಯೇ, ಪರಂಪರಾನುಗತ ಸಾಂಪ್ರದಾಯಿಕ ವಿಚಾರಗಳ ಪ್ರತಿಪಾದಕರಾಗಿ, ಅದೇ ಕಂಬವನ್ನು ಸುತ್ತಿದರು. ಯಾವ ಬಂಡವಾಳ ಷಾಹಿಯ ಅನಿಷ್ಟ ಪರಿಣಾಮಗಳನ್ನು ವಿರೋಧಿಸಿ ನವ್ಯಕಾವ್ಯ ಹೊರಟಿತೋ ಬಂಡವಾಳ ಷಾಹಿಯನ್ನು ಉಪೇಕ್ಷೆ ಮಾಡುತ್ತಿದ್ದೇನೆಂಬ ಭ್ರಮೆಯಲ್ಲಿ ಅದರ ಪರೋಕ್ಷ ಬೆಂಬಲಿಗನಾಯಿತು.

ಅಡಿಗರ ಕಾವ್ಯದಲ್ಲಿದ್ದ ತಾತ್ವಿಕ ಹಿನ್ನೆಲೆಯನ್ನು ಒಂದು ಘಟ್ಟದಲ್ಲಿ ಅವರ ಮುಂದಿನ ಪೀಳಿಗೆಯ ಕವಿಗಳನೇಕರು ಗುರುತಿಸಿದರು. ಅವರಲ್ಲಿ ಅನೇಕರಿಗೆ ಅದು ವೈದಿಕ ಪರಂಪರೆಯ ವಿಚಾರಗಳೆನ್ನಿಸಿತು. ಇದೇ ಸಂದರ್ಭಕ್ಕೆ ಬಂಡವಾಳ ತನ್ನ ಪ್ರಭಾವಲಯವನ್ನು ಕಲಾಪ್ರಪಂಚದ ಶಕ್ತಿಶಾಲೀ ಮಾಧ್ಯಮವಾದ ಸಿನಿಮಾ ಪ್ರಪಂಚದ ಮೇಲೆ ಸ್ಥಾಪಿಸಿಕೊಂಡು, ಬೇಸರಗೊಂಡ ಜನರನ್ನು ತಣಿಸುವುದಕ್ಕೆ ಕಾಮ ಪ್ರದರ್ಶನವನ್ನು ಎಗ್ಗಿಲ್ಲದೆ ಸಾಗಿಸತೊಡಗಿತು. ಯುವ ಪೀಳಿಗೆಯ ನವ್ಯ ಕವಿಗಳಿಗೆ ಅಡಿಗರ ಸಾಂಪ್ರದಾಯಿಕ ಆಲೋಚನೆಗಳಿಗಿಂತ, ಕಾಮದಿಂದ ಸ್ವಾತಂತ್ರ್ಯ ಪಡೆಯುವುದೇ ಬಿಡುಗಡೆಯಾಗಿ ಕಂಡಿತು. ಫ್ರಾಯ್ಡನ ಸಿದ್ಧಾಂತದಿಂದ ಪ್ರಭಾವಿತರಾದ ಫ್ರೆಂಚ್ ಮತ್ತು ಪಾಶ್ಚಾತ್ಯ ಬರಹಗಾರರಲ್ಲಿ ಪ್ರಮುಖರಾದ ಕಾಫ್ಕ, ಕಾಮೂ, ಸಾತ್ರೆ ಮೊದಲಾದವರ ವಿಚಾರಸರಣಿಯೂ ಆಸರೆಯಾಯಿತು. ಸಮಾಜ ವನ್ನು ಕಾಮದ ಹಿಡಿತದಿಂದ ಮುಕ್ತಮಾಡಿ, ಅದರ ನಿಗೂಢತೆಗಳನ್ನು ಬಯಲು ಮಾಡಿ, ಅದನ್ನು ಸಹಜಗೊಳಿಸುವ ಪ್ರತಿಜ್ಞೆ ಹೊತ್ತು ಹೊರಟ ಅನೇಕ ಕವಿಗಳು ಬಹಳಷ್ಟು ರುಚಿರುಚಿಯಾದ ಕವನಗಳನ್ನು ಅವರಂತೆಯೇ ಚಡಪಡಿಸುತ್ತಿದ್ದ ವಿಮರ್ಶಕ ಓದುಗರಿಗೆಕೊಟ್ಟು ಸಮಾಧಾನ ಪಡಿಸಿದರು. ರಮ್ಯಕಾವ್ಯದಲ್ಲಿ ಆದರ್ಶೀಕರಣಕ್ಕೆ ಒಳಪಟ್ಟ ಹೆಣ್ಣು, ಮಾಂಸಗಳಿಲ್ಲದ ಗಾಳಿಯಾಗಿದ್ದರೆ, ಇಲ್ಲಿ ಕೇವಲ ಪಶುರೂಪಿಯಾದ ಮಾಂಸದ ಮುದ್ದೆಯಾದಳು. ಕಾವ್ಯ ಜಗತ್ತಿನೆಲ್ಲಾದ ಈ ಬದಲಾವಣೆಗೆ ಬಂಡವಾಳ ಷಾಹಿಯ ಪೋಷಣೆ ಯಥೇಚ್ಛವಾಗಿ ಸಿಕ್ಕಿತು. ಇದು ಬಹಳ ಕಾಲ ನಡೆದು ಚರ್ವಣವಾದಂತೆ ಕರ್ನಾಟಕದಲ್ಲಿ ಮತ್ತೊಂದು ಹೊಸ ರೀತಿಯ ಚಟುವಟಿಕೆ ತಲೆಹಾಕಿತು.

ತಮಿಳುನಾಡಿನಲ್ಲಿ ಪೆರಿಯಾರ್ ನಡೆಸಿದ ಶೂದ್ರರ ವೈದಿಕ ವಿರೋಧಿ ಚಳುವಳಿ ಇಲ್ಲಿನ ಕೆಲವು ಶೂದ್ರ ಲೇಖಕರಿಗೆ ಮೆಚ್ಚುಗೆಯಾಗಿ ಕಂಡಿತು. ಅದಕ್ಕೆ ಕಾರಣವಾಗ ಬಹುದಾದ ಕೆಲವು ಅಂಶಗಳು ತಮಿಳುನಾಡಿನಲ್ಲಿದ್ದಂತೆ ಕನ್ನಡ ನಾಡಿನಲ್ಲೂ ಇದ್ದವು. ಅಕಾಡೆಮಿಗಳಿಂದ ಹಿಡಿದು, ವಿಶ್ವವಿದ್ಯಾಲಯಗಳು, ರೇಡಿಯೋ, ಪತ್ರಿಕೆ ಮುಂತಾದ ಎಲ್ಲಾ ಸಾಂಸ್ಕೃತಿಕ ಅಧಿಕಾರ ಕೇಂದ್ರಗಳಲ್ಲೂ ಬ್ರಾಹ್ಮಣರೇ ಇದ್ದುದರಿಂದ,

ಬ್ರಾಹ್ಮಣರ ಜೊತೆ ಸಾಂಸ್ಕೃತಿಕ ಸಮಾನತೆಯನ್ನು ಗಳಿಸಲು ಪ್ರಯತ್ನಿಸುತ್ತಿದ್ದ ಲಿಂಗಾಯಿತ ಮತ್ತು ಒಕ್ಕಲಿಗ ಜನಾಂಗದ ಲೇಖಕರಿಗೆ ತಾವು ಅನ್ಯಾಯಕ್ಕೊಳಗಾಗಿದ್ದೇವೆಂದನ್ನಿಸಿತು. ಅವರು ಈ ಅನ್ಯಾಯವನ್ನು ಪ್ರತಿಭಟಿಸಬೇಕೆಂದು ಉಳಿದ 'ಶೂದ್ರ' ಲೇಖಕರನ್ನೆಲ್ಲಾ ಒಗ್ಗೂಡಿ 'ಒಕ್ಕೂಟ ರಚನೆ'ಯ ಮೂಲಕ ಹೋರಾಡಬೇಕೆಂದು ಕರೆಕೊಟ್ಟರು. ಕೇವಲ ಜಾತಿಜಗಳದಂತೆ ಕಂಡು ಬಂದ ಈ ಸಂಘಟನೆಯ ಪರಿಣಾಮವಾಗಿ ಕಾವ್ಯರೂಪಕ್ಕಿಂತ ಗದ್ಯ ಮತ್ತಿತರ ರೂಪಗಳಲ್ಲಿ, ದುಡಿಯುವ ರೈತಾಪಿ ಜನಜೀವನವನ್ನು ಚಿತ್ರಿಸುವ, ರೂಪಕ್ಕಿಂತ ವಸ್ತು ಪ್ರಧಾನತೆಯತ್ತ ಸಾಗಿದ ಬರಹಗಳು ಬಂದವು.

ಈ ಒಕ್ಕೂಟದ ರಚನೆಯನ್ನು ವಿರೋಧಿಸಿದ, ತಾವು ಜಾತಿವಾದಿಗಳಲ್ಲವೆಂದು ಹೇಳಿಕೊಂಡ ಬ್ರಾಹ್ಮಣ ಲೇಖಕರು ಇದು ಲಿಂಗಾಯಿತ ಒಕ್ಕಲಿಗರ ಪಿತೂರಿ, ಬ್ರಾಹ್ಮಣರು ಎಂದೋ ಗ್ರಾಮೀಣ ಪ್ರದೇಶದಿಂದ ಕಾಲ್ತೆಗೆದಿದ್ದಾರೆ. ಈ ದಿನ ಅವರಷ್ಟು ಅಸಹಾಯಕರು ಬೇರೆ ಯಾರೂ ಇಲ್ಲ. ನಿಜವಾಗಿ ದಲಿತರನ್ನು, ಇನ್ನುಳಿದ ಹಿಂದುಳಿದ ಜಾತಿಗಳನ್ನು ಬೌದ್ಧಿಕವಾಗಿ ಮತ್ತು ಆರ್ಥಿಕವಾಗಿ ಶೋಷಿಸುತ್ತಿರುವವರು ಜಮೀನುದಾರಿ ಲಿಂಗಾಯಿತರು ಮತ್ತು ಒಕ್ಕಲಿಗರು ಎಂದು ಚಾಣಾಕ್ಷತನದಿಂದ ವಾದಿಸಿದರು. ಈ ಶೂದ್ರ ಬ್ರಾಹ್ಮಣ ಜಗಳದ ಹಿಂದೆ ಸಮರ್ಥವಾದ ತಾತ್ವಿಕ ನೆಲೆಯನ್ನು ಒಕ್ಕೂಟದ ಬರಹಗಾರರು ರೂಪಿಸಿಕೊಳ್ಳದೆ ಹೋದುದಲ್ಲದೆ, ತಾವು ಹೇಳಿಕೊಂಡು ಹೊರಟದ್ದಕ್ಕೂ ಬದ್ಧರಾಗದೇ ಹೋದುದರಿಂದ, ಅವರಲ್ಲಿ ಬಹಳಷ್ಟು ಜನ ಸಮಯಾನುಸಾರ ತಮ್ಮ ವಿಚಾರಗಳನ್ನು ಹಿಗ್ಗಿಸಿ ಹೊಂದಿಸಿಕೊಂಡು ಹೋದರು. ಇದರ ತಾತ್ವಿಕ ನೆಲೆ ಬಹಳ ದುರ್ಬಲವೂ, ಸವಲತ್ತುಗಳಿಗಾಗಿ ಮಧ್ಯಮವರ್ಗದ ಬುದ್ಧಿಜೀವಿಗಳ ಪರಸ್ಪರ ಕಿತ್ತಾಟವೂ ಆಗಿದ್ದುದರಿಂದ, ಇದೊಂದು ಹೋರಾಟವಾಗಿ ರೂಪತಳೆಯಲಾರದೆ ಹೋಯಿತು. ಇದಲ್ಲದೆ ಇದರ ಚಟುವಟಿಕೆಗಳನ್ನು ಒಳಗಿದ್ದ ಕೆಲವರು ಖಂಡಿಸುತ್ತ ತಾವು ಪಕ್ಷಾತೀತರೆಂದು ಕರೆಸಿಕೊಂಡರೆ, ಮತ್ತೆ ಕೆಲವರಿಗೆ ವ್ಯವಸ್ಥೆ ಬುದ್ಧಿವಂತಿಕೆಯಿಂದ ಕೆಲವು ಅವಕಾಶಗಳನ್ನೂ ಮಾಡಿಕೊಟ್ಟಿದ್ದರಿಂದ ಚಳುವಳಿಯ ಬಿಸಿ ಕಡಿಮೆಯಾಯಿತು. ಇದರೊಳಗೆ ಇದ್ದ ಕೆಲವು ಪ್ರಾಮಾಣಿಕರು ತಮ್ಮ ಪಾಡಿಗೆ ತಾವು ತಮಗೆ ತೋರಿದ ರೀತಿಯಲ್ಲಿ ವಿರೋಧವನ್ನು ವ್ಯಕ್ತ ಮಾಡುತ್ತ ಮುಂದುವರೆದರು. ಈ ಸಂಘಟನೆಯಿಂದಾದ ಒಂದು ಪರಿಣಾಮವೆಂದರೆ ಕನ್ನಡ ಕಾವ್ಯಕ್ಕೆ ಕೆಳವರ್ಗಗಳ ಜೀವನವನ್ನು ವಸ್ತುವನ್ನಾಗಿ ಬಳಸಿಕೊಳ್ಳಬೇಕೆಂಬ ಒತ್ತಡ ಹೆಚ್ಚಿದ್ದು. ಅದರ ಮೂಲಕ ಕಾವ್ಯ ವಸ್ತುವಿನತ್ತ ಹೆಚ್ಚು ಗಮನ ಹರಿಸಬೇಕೆಂಬ ಬದಲಾವಣೆಯೂ ಆಯಿತು.

ಈ ಒಕ್ಕೂಟ ಚಳುವಳಿಯನ್ನು ಹತ್ತಿಕ್ಕಲೋ ಅಥವಾ ಅದರ ತಪ್ಪನ್ನು ಎತ್ತಿ ತೋರಿಸಲೋ, ಎಂದೋ ಮರೆತು ಹೋಗಿದ್ದ ಪ್ರಗತಿಶೀಲರಲ್ಲಿ ಕೆಲವರು ಇದ್ದಕ್ಕಿ

ದ್ದಂತೆ ಎಚ್ಚೆತ್ತು ತಮ್ಮದೇ ನಿಜವಾದ ವರ್ಗರಹಿತ ಹೋರಾಟವನ್ನು ಮುಂದುವರೆಸಿಕೊಂಡು ಹೋಗುವ ಜವಾಬ್ದಾರಿ ಎಂದು ಕರೆದುಕೊಟ್ಟು ಪ್ರಗತಿ ಪಂಥವನ್ನು ಪುನರುದ್ಘಾಟಿಸಿದರು. ಇದನ್ನು ಕಟ್ಟಿದ್ದರ ಹಿಂದೆ ಬ್ರಾಹ್ಮಣರ ಪಿತೂರಿ ಇದೆ ಎಂದು ಒಕ್ಕೂಟದವರು ಕರೆದರು. ಅಂತೂ ಇದು ಯಾವ ಹಿನ್ನೆಲೆಯಿಂದ ಹೊರಟಿದ್ದರೂ ಹೊಸ ಬರಹಗಾರರ ಮೇಲೆ ಯಾವ ಪ್ರಭಾವವನ್ನೂ ಬೀರಲಾರದಷ್ಟು ಸವೆದು ಹೋಗಿದ್ದುದರಿಂದ ಇದು ಕೊನೆಗೂ ಕೇಳುವವರಿಲ್ಲದ ಮಗುವಾಗಿಯೇ ಮುಕ್ತಾಯ ಹೊಂದಿತು.

ಇವಿಷ್ಟು ಚಟುವಟಿಕೆಗಳು ನಡೆಯುತ್ತಿರುವಂತೆಯೇ ಭಾರತದ ರಾಜಕೀಯ ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆಗಳು ನಡೆದವು. ಬಂಡವಾಳಷಾಹಿ ಜಗತ್ತಿನ ಆರ್ಥಿಕ ಬಿಕ್ಕಟ್ಟು ಎಷ್ಟು ತೀವ್ರ ಸ್ವರೂಪದ್ದಾಗಿತ್ತೆಂದರೆ, ಯಾವ ಪ್ರತಿರೋಧವೂ ಇಲ್ಲದೆ ಜನತೆಯನ್ನು ತುರ್ತುಪರಿಸ್ಥಿತಿಗೆ ತಳ್ಳಿತು. (ಬಾಂಗ್ಲಾ ದೇಶದ ಯುದ್ಧ ಇಂತಹುದೊಂದು ಕ್ರಿಯೆಯನ್ನು ಸಮರ್ಥಿಸಿಕೊಳ್ಳಲು ಸಹಕಾರಿಯಾದ ಅಂಶವಾಯಿತು.) ಮಧ್ಯಮವರ್ಗವನ್ನು ಮತ್ತು ಸಾಮಾನ್ಯಪ್ರಜೆಯನ್ನು ಭಯದ ವಾತಾವರಣ ಆವರಿಸಿದ್ದಲ್ಲದೆ, ಮೂಲಭೂತ ಹಕ್ಕುಗಳನ್ನು ಕಸಿದುಕೊಳ್ಳಲಾಯಿತು. ಬಿಹಾರದಲ್ಲಿ ವಿದ್ಯಾರ್ಥಿಗಳು ಆರಂಭಿಸಿದ ಚಳುವಳಿಗೆ ಜೆ. ಪಿ. ನಾಯಕತ್ವ ದೊರೆತು, ಅದೊಂದು ರಾಷ್ಟ್ರವ್ಯಾಪೀ ಆಂದೋಲನವಾಯಿತು. ಸಮಾಜ ವಿಮುಖರಾಗಿದ್ದ ಅನೇಕ ಜನ ಕವಿಗಳು ಈ ಹೋರಾಟದಲ್ಲಿ ಪಾಲುಗೊಂಡರು. ಈ ಹೋರಾಟದಲ್ಲಿ ತೀವ್ರವಾಗಿ ಭಾಗವಹಿಸಿದ ಕೆಲವರು ಕನ್ನಡ ಕಾವ್ಯಕ್ಕೊಂದು ಹೊಸ ಜಗತ್ತನ್ನೇ ತೆರೆದಿಟ್ಟರು. ಬಂಧಿಯ, ಹೋರಾಟಗಾರನ ತುಮುಲಗಳ ಕಾವ್ಯ ಕನ್ನಡದಲ್ಲಿ ಕಾಣಿಸಿಕೊಂಡಿತು. ಬಹಳಷ್ಟು ಜನ ತರುಣ ಲೇಖಕರು ತಮ್ಮ ಕಾವ್ಯದ ಮೂಲಕ ಈ ಹೋರಾಟದಲ್ಲಿ ಪಾಲುಗೊಂಡರು. ಮಧ್ಯಮವರ್ಗ ಇಷ್ಟರಮಟ್ಟಿಗೆ ತನ್ನ ಹಕ್ಕುಗಳಿಗಾಗಿ ಒಂದಾಗಿ ಹೋರಾಡಿದ್ದು ಮಾತ್ರವಲ್ಲದೆ, ಕಡ್ಡಾಯ ಶಸ್ತ್ರಚಿಕಿತ್ಸೆಯಂತಹ ಭಯಾನಕ ವಾತಾವರಣದಿಂದ ತಲ್ಲಣಿಸಿಹೋಗಿದ್ದ, ದುರ್ಬಲವರ್ಗವನ್ನೂ ಈ ಹೋರಾಟಕ್ಕೆ ಆಕರ್ಷಿಸಿತು. ಕನ್ನಡ ಕಾವ್ಯಕ್ಕೆ ಹೋರಾಟದ ದನಿ ಇಲ್ಲಿ ಹುಟ್ಟಿಕೊಂಡಿತು.

ಈ ಜನತಾ ಹೋರಾಟ ನಡೆದು, ಜನತಾ ಸರ್ಕಾರ ಅಧಿಕಾರಕ್ಕೆ ಬಂದು, ತನ್ನೊಳಗಿನ ವೈರುಧ್ಯಗಳನ್ನು, ಹೊರಸಮಸ್ಯೆಗಳನ್ನು ಪರಿಹರಿಸುವಲ್ಲಿ ವಿಫಲವಾಗಿ, ತನ್ನ ಅಂತ್ಯಕ್ಕೆ ತಾನೇ ಕಾರಣವಾಯಿತು. ಇಟ್ಟ ನಂಬಿಕೆ ಕುಸಿದು, ಬೇರೊಂದು ಮಾರ್ಗವಿಲ್ಲದೆ ಜನತೆ ಮತ್ತೆ ಇಂದಿರಾಗಾಂಧಿಯವರ ಪಕ್ಷವನ್ನು ಅಧಿಕಾರಕ್ಕೆ ತಂದ ಸಮಯಕ್ಕೆ ಮಧ್ಯಮವರ್ಗ ನಿರಾಶೆಯ ಹಾದಿಯನ್ನು ಹಿಡಿದು ಕೈಕಟ್ಟಿ ಕೂತು

ಬಿಟ್ಟು ನಡೆದದ್ದಕ್ಕೆ ಮೌನಸಮ್ಮತಿ ಕೊಟ್ಟಿತು. ಜನತಾ ಅಧಿಕಾರಕ್ಕೆ ಬದಂ ಸಂದರ್ಭದಲ್ಲಿ ಮೇಲುವರ್ಗಗಳು ನಡೆಸಿದ ದೌರ್ಜನ್ಯದಿಂದಾಗಿಯೋ, ವರ್ಗ ಹೋರಾಟವನ್ನು ಹೇಳುವ ಪಕ್ಷಗಳಿಂದ ಹೊರಬರುವಂತೆ ಮಾಡುವ ಪ್ರತಿಗಾಮಿ ತಂತ್ರದಿಂದಾಗಿಯೋ ಅಥವಾ ದಲಿತರ ಹೋರಾಟವನ್ನು ದಲಿತರೇ ಮಾಡಬೇಕೆಂಬ ಕರೆಯಿಂದಾಗಿಯೋ ಮಹಾರಾಷ್ಟ್ರವೇ ಮೊದಲಾದ ಕಡೆಗಳಲ್ಲಿ ನಡೆದಿದ್ದ ದಲಿತ ಚಳು ವಳಿಯು ಕರ್ನಾಟಕದಲ್ಲಿಯೂ ಪುನಶ್ಚೇತನ ಪಡೆದು ಚುರುಕಾಯಿತು. ಇದಕ್ಕೆ ನಕ್ಸಲೀಯರನೇಕರು ಬೆಂಬಲಿಸಿದರಲ್ಲದೆ, ಸಂಪ್ರದಾಯವಾದಿಗಳೂ ಪೋಷಿಸಿದರು.

ದಲಿತ ಕವಿಗಳಲ್ಲಿ ಅನೇಕರು ತಮ್ಮ ಜನಾಂಗದ ನೋವು ಸಂಕಷ್ಟಗಳಿಗೆ ಕಾರಣವೆಂದು ಮೇಲು ಜಾತಿಗಳನ್ನು ಇಡಿಯಾಗಿ ಬೈದರು; ಹೀನಾಯವಾಗಿ ಚಿತ್ರಿಸಿ ದರು. ಶತಮಾನಗಳ ತುಳಿತಕ್ಕೆ ಈ ಬಗೆಯ ಆಕ್ರೋಶ ಬಹಳ ಮೆದುವಾದ ಪ್ರತಿಭಟನೆಯಾದರೂ, ಈ ಆಕ್ರೋಶವೂ ಕೂಡ ದೌರ್ಬಲ್ಯವಾಗುವುದು ಅದಕ್ಕಿರುವ ತಾತ್ವಿಕ ಮಿತಿಯಲ್ಲಿ ಎಂಬುದನ್ನು ನಾವು ಮರೆಯುವಂತಿಲ್ಲ. ಇಡಿಯ ಸಾಮಾಜಿಕ ಸಂದರ್ಭದಲ್ಲಿ ಹೋರಾಟ ತನ್ನಂತೆಯೇ ತುಳಿತಕ್ಕೊಳಗಾದವರ ನಡುವಿನ ಸಂಬಂಧ ದಲ್ಲಿದೆ ಎಂಬುದನ್ನು ದಲಿತ ಹೋರಾಟಗಾರರು ಗುರುತಿಸಿಕೊಳ್ಳದೆ ಹೋದರೆ, ಎರಡೂ ಕಡೆ ಇರುವ 'ಉಳ್ಳವರಿಗೆ' ಅವರು ಉಪಯೋಗವಾಗುವ ಅಪಾಯವಿದೆ. ಜಾತಿಯ ಆಧಾರದ ಮೇಲೆ ಹೋರಾಟ ಸಾಗಿಸುವುದಕ್ಕೆ ಹೊರಟರೆ ಆಗುವ ಅಪಾಯ ಇದು. ಜಾತಿ ಶೋಷಣೆಯು ಅನೇಕ ಅಂಗಗಳಂತೆಯೇ ಒಂದು ಪ್ರಮುಖ ಅಂಗವೆಂಬುದು ನಿಜ. ಆದರೆ ಅದನ್ನು ಗುರುತಿಸಿಕೊಂಡೇ, ಆ ನೆಲೆಯನ್ನು ಕತ್ತರಿಸಲು ಎಲ್ಲಿಂದ ಆರಂಭಿಸಬೇಕೆಂಬುದನ್ನು ತಿಳಿಯದಿದ್ದರೆ, ದೈವವಾದವನ್ನು ತುಳಿಯಲು ತರ್ಕದ ನೆಲೆ ಯಲ್ಲೇ ನಿಂತ ನಿರೀಶ್ವರವಾದಿಗಳು ವಿಫಲರಾದಂತೆ ಈ ಚಳುವಳಿಯೂ ಸೋಲುತ್ತದೆ. ಇದಲ್ಲದೆ ಮಹಾರಾಷ್ಟ್ರದಲ್ಲಾದಂತೆ ದಲಿತ ಲೇಖಕರನೇಕರಿಗೆ ಅಕಾಡೆಮಿ ಮತ್ತಿತರ ಬಹುಮಾನಗಳ ಆಮಿಷಗಳು ಸೆರೆಹಿಡಿದಂತೆ ಸೆರೆಹಿಡಿಯುವ ಸಾಧ್ಯತೆಗಳೂ ಇವೆ.

ಆದರೆ ದಲಿತ ಕವಿಗಳಲ್ಲಿ ಅನೇಕರಿಗೆ ಈ ಸತ್ಯ ಕಣ್ಣಿಗೆ ಎದ್ದು ಕಂಡಿದೆ. ಅವರು ಚರಿತೆಯ ಗತಿ ತಾರ್ಕಿಕ ಬೆಳವಣಿಗೆಯನ್ನು ತಿಳಿದು, ಅದರ ಬೆಳವಣಿಗೆಗೆ ಸಹಕಾರಿಯಾಗುವ ತಾತ್ವಿಕ ಚಿಂತನೆಗೆ ಮನಸ್ಸು ಕೊಟ್ಟಿದ್ದಾರೆ. ಆ ದೃಷ್ಟಿಕೋನ ದಲ್ಲಿ ಕಾವ್ಯ ನಿರ್ಮಾಣವನ್ನೂ ಮಾಡುತ್ತಿದ್ದಾರೆ.

ದಲಿತ ಚಳುವಳಿಯ ಜೊತೆ ಜೊತೆಗೇ ಜನ್ಮತಾಳಿದ ಮತ್ತೊಂದು ಚಳುವಳಿ ಬಂಡಾಯ ಸಾಹಿತ್ಯದ್ದು. ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಪ್ರಕಟವಾದ ಕವನ ಸಂಕಲನಗಳಲ್ಲಿ ಇದರ ಆರಂಭದ ಸೂಚನೆಗಳನ್ನು ಗುರುತಿಸಬಹುದಾದರೂ, ಇದಕ್ಕೊಂದು ತಾತ್ವಿಕ ನೆಲೆಗಟ್ಟು ರೂಪಗೊಂಡದ್ದು ಬಂಡಾಯ ಸಾಹಿತ್ಯ

ಸಮ್ಮೇಳನದಲ್ಲಿ. ಪರಿಷತ್ತಿನ ಸಾಹಿತ್ಯಸಮ್ಮೇಳನವನ್ನು ಪ್ರತಿಭಟಿಸುವುದಕ್ಕಾಗಿ ಹುಟ್ಟಿದಂತೆ ಮೇಲುನೋಟಕ್ಕೆ ಕಂಡರೂ, ಇದರ ಹುಟ್ಟಿಗೆ ಇರಬಹುದಾದ ಚಾರಿತ್ರಿಕ ಕಾರಣಗಳು ಮಹತ್ವ ಪೂರ್ಣವಾದವುಗಳು.

ಜನತಾ ಅನಾಯಕತ್ವದಿಂದಾಗಿ, ಆ ಹೋರಾಟಕ್ಕೆ ದನಿತೆತ್ತ ಅನೇಕ ತರುಣರಿಗೆ ದಿಕ್ಕುತಪ್ಪಿದಂತಾಯಿತು. ಅದೇ ಕಾಲಕ್ಕೆ ಚುನಾವಣೆಯಲ್ಲಿ ಇಂದಿರಾ ಗಾಳಿಯ ಭ್ರಾಮಕಹಿಡಿತವಿದ್ದರೂ, ಅದನ್ನು ಭೇದಿಸಿ ನಿಂತ ಪಶ್ಚಿಮ ಬಂಗಾಳ, ಕೇರಳ ಮತ್ತು ತ್ರಿಪುರಾಗಳ ಜನತೆಯ ರಾಜಕೀಯ ಪ್ರಜ್ಞೆಯ ಬೆಳವಣಿಗೆ, ಹೋರಾಟಕ್ಕೆ, ಕಾವ್ಯಕ್ಕೆ ದಾರಿಯನ್ನು ತೋರಿಸಿತು. ರಾಜಕೀಯವಾಗಿ ಜನತೆಯನ್ನು ಬೆಳೆಸದೆ ಯಾವುದೇ ಬದಲಾವಣೆಗಳೂ ಭದ್ರವಾಗಿ ನೆಲೆಯೂರಲಾರವೆಂಬ ಅರಿವು ಈ ತರುಣ ಲೇಖಕರಿಗೆ ಬಂತು. ಚರಿತ್ರೆಯ ಮುಂದಿನಗತಿ ಎತ್ತ ಸಾಗುತ್ತಿದೆ ಎಂಬುದರ ತಿಳುವಳಿಕೆಯಿಂದಾಗಿ, ಇಂತಹುದೊಂದು ಸಮ್ಮೇಳನವನ್ನು ತೆಲುಗಿನ ವಿಖ್ಯಾತ ಕವಿ ಶ್ರೀ ಶ್ರೀಯವರ ನೇತೃತ್ವದಲ್ಲಿ ನಡೆಸಲಾಯಿತು. ಈ ಸಮ್ಮೇಳನದ ಆರಂಭದಿಂದ ಹಿಡಿದು ಇಲ್ಲಿನವರೆಗೆ ಅನೇಕ ರೀತಿಯ ಟೀಕೆ ಟಿಪ್ಪಣಿಗಳು ಈ ಚಳುವಳಿಯ ಬಗೆಗೆ ಹೊರಟಿವೆ. ಕೆಲವು ಗಂಭೀರವಾಗಿ ತೆಗೆದುಕೊಳ್ಳಬಹುದಾದವುಗಳಾದರೆ, ಮತ್ತೆ ಕೆಲವು ಸಾಂಪ್ರದಾಯಿಕ ಹಿತಾಸಕ್ತಿಗಳು ಸಂಘಟನೆಯನ್ನು ಎಳೆಯದರಲ್ಲೇ ಚಿವುಟಿಹಾಕಲು ನಡೆಸುವ ಪ್ರಯತ್ನಗಳೆಂದು ಎಚ್ಚರದಿಂದ ನೋಡಬೇಕಾಗಿದೆ. ಸಂಘಟನೆಯೊಂದು ಬೆಳೆಯುವಾಗ, ಅದು ಬೆಳೆಯುತ್ತಿರುವಂತೆಯೇ, ಅದರ ತಾತ್ವಿಕ ನೆಲೆ ನಿಲುವುಗಳ ಪರೀಕ್ಷೆ, ಗೆಲುವು ಸೋಲುಗಳು ನಿರ್ಧಾರಿತವಾಗುತ್ತವೆ. ಆದರೆ ಒಂದು ವಿಶೇಷ ಅಂಶವೇನೆಂದರೆ ಬಂಡಾಯ ಸಂಘಟನೆ ಜಾತ್ಯತೀತವಾದ್ದಾಗಿರುವುದಾಗಿ ಘೋಷಿಸಿ ಕೊಂಡಿರುವುದು ಮಾತ್ರವಲ್ಲ. ವರ್ಗರಹಿತ ಸಮಾಜ ಸ್ಥಾಪನೆಗೆ ಹೋರಾಡುವುದಾಗಿಯೂ ಒಪ್ಪಿಕೊಂಡಿದೆ. ಇಂತಹುದೊಂದು ಸಂಘಟನೆ ಯಾರದೋ ಇಚ್ಛೆಗಾಗಿ ಹುಟ್ಟಿದ್ದಲ್ಲ. ಚರಿತ್ರೆಯ ಅವಶ್ಯಕತೆಗಾಗಿ ಮೈತಳೆದದ್ದು, ಅದು ಗಳಿಸಿಕೊಳ್ಳುವ ಪ್ರಜಾ ಶಕ್ತಿ, ತಾತ್ವಿಕ ಖಚಿತತೆಗಳನ್ನವಲಂಬಿಸಿಕೊಂಡು ಅದರ ಬೆಳವಣಿಗೆಯ ದಿಕ್ಕು ನಿರ್ಧಾರವಾಗುತ್ತದೆ. ಈಗಿರುವಂತೆ ಅದರ ಜಾಡು ಪ್ರಜಾ ಹೋರಾಟದ್ದು. ಇದೇ ರೀತಿಯ ಸಂಘಟನೆಯಾಗಬೇಕಾಗಿದ್ದ, ಪ್ರಗತಿಶೀಲ ಚಳುವಳಿ ಅದರ ಒಳದೋಷಗಳು ಮತ್ತು ಬಾಹ್ಯ ಸಮಸ್ಯೆಗಳನ್ನು ನಿವಾರಿಸಲಾರದೆ ಸೋಲೊಪ್ಪಿತು. ಆ ಅನುಭವದ ಬೆಳಕಿನಲ್ಲಿ ಇಂದಿನ ಸಂಘಟನೆ ಬೆಳೆಯಬೇಕಾಗಿದೆ. ಹೊಸದೊಂದು ಚಳುವಳಿಯನ್ನು ಆರಂಭಮಾಡಿ ಅದನ್ನು ಸಮರ್ಥಿಸಿಕೊಳ್ಳುವ ಯಾವ ಕವಿಗಾದರೂ ಅಭಿವ್ಯಕ್ತಿ ಸಮಸ್ಯೆ ಕಾಡದೆ ಇರುವುದಿಲ್ಲ. ಏಕೆಂದರೆ ಅವನ ಪರಂಪರೆಯ ಶೈಲಿ ಅವನನ್ನು ಹಿಡಿದಿಟ್ಟುಕೊಳ್ಳುತ್ತಲೇ ಇರುತ್ತದೆ. ಹೊಸ ವಸ್ತುವಿಗೆ ಹೊಸ ಮಾಧ್ಯಮದ ಹುಡುಕಾಟವೇ ಸಾಧನೆಯುತ್ತ ಕರೆದೊಯ್ಯುತ್ತದೆ.

ಹೊಸ ಕವಿಗಳಲ್ಲಿ ಬಹಳಷ್ಟು ಜನ ಅಂತಹ ಹೋರಾಟಕ್ಕೊಳಗಾಗಿರುವುದೂ, ಕೆಲವರಾದರೂ ಹೊಸ ಅಭಿವ್ಯಕ್ತಿಯ ಸಾಧನೆಯ ದಿಕ್ಕಿನಲ್ಲಿರುವುದೂ ಗಮನಾರ್ಹ ವಾಗಿದೆ.

ಎಂತಹ ಕಾವ್ಯ ಚಳುವಳಿಗಳಲ್ಲೂ ವಿವಿಧ ದರ್ಜೆಯ ಕವಿಗಳು ಇದ್ದೇ ಇರುತ್ತಾರೆ. ರಷ್ಯನ್ ಲೇಖಕರೆಂದರೆ ಗಾರ್ಕಿ, ಷೋಲೊಕೋಲ್ ಮಾತ್ರವಲ್ಲ. ನವೋದಯವೆಂದರೆ ಬೇಂದ್ರೆ, ಕುವೆಂಪು ಇಬ್ಬರೇ ಅಲ್ಲ. ಈ ಇಬ್ಬಿಬ್ಬರಿಂದಲೇ ಆಯಾ ಸಾಹಿತ್ಯಗಳು ಶ್ರೀಮಂತವಾಗಿರುವುದಿಲ್ಲ. ಉಳಿದವರೂ ಬೇರೆ ಬೇರೆ ಕಾರಣಗಳಿಗಾಗಿ ಮುಖ್ಯರಾಗುತ್ತಾರೆ. ಬಂಡಾಯ ಕಾವ್ಯ ನಿರ್ಮಾಣದಲ್ಲೂ ಇದು ಅನಿವಾರ್ಯವೇ ಆದುದರಿಂದ, ದುರ್ಬಲ ರಚನೆಗಳತ್ತ ಬೆಟ್ಟು ಮಾಡಿ ತೋರಿಸುವವರಿಗೆ ಒಂದು ಕಿವಿ ಮಾತು. ಏನೆಂದರೆ ಶಕ್ತನಾದ ಕವಿಯ ಎಲ್ಲಾ ಕವಿತೆಗಳೂ ಒಂದೇ ತರವಾದವುಗಳಲ್ಲ. ಅವುಗಳಲ್ಲೂ ಕಳಪೆ ಇಲ್ಲದೆ ಇರುವುದಿಲ್ಲ ಎಂಬುದು. ಆದರೆ ಕವಿ ತತ್ವಹೀನವಾದ ಶೂನ್ಯದಲ್ಲಿ ಶಬ್ದಗಳ ವ್ಯರ್ಥಾಲಾಪ ಮಾಡುವುದನ್ನು ಈ ಎಲ್ಲಾ ಪರಿಗಣನೆಯಿಂದಲೂ ಹೊರಹಾಕಬೇಕಾದ್ದು ಅಗತ್ಯ. ಏಕೆಂದರೆ ಹೊತ್ತು ಕಳೆಯುವುದಕ್ಕೆಂದೇ ಒಂದು ಕಾಲಕ್ಕೆ ನಿರ್ಮಾಣವಾದ ಕಾವ್ಯ ಮತ್ತೊಂದು ಕಾಲದ ಬದುಕಿನ ಹೋರಾಟದ ಆಶೋತ್ತರಗಳನ್ನು ಈಡೇರಿಸುವುದಕ್ಕೆ ಬರುವುದಿಲ್ಲ. ಅದನ್ನು ಮಕ್ಕಳಾಟದಂತೆ ನಾವು ಎಷ್ಟೇ ಮೆಚ್ಚಿಕೊಂಡರೂ ಕೂಡ ಅಗಾಧವಾದ ವಿಜ್ಞಾನದ ಮತ್ತು ಸಾಮಾಜಿಕ ವಿಜ್ಞಾನದ ಬೆಳವಣಿಗೆಯಾಗಿರುವಾಗ, ಕವಿ ಎಷ್ಟೆಷ್ಟು ಹುಚ್ಚನಂತೆ ಹುಂಬನಾದರೆ ಅಷ್ಟು ಉತ್ತಮ ಕಾವ್ಯ ರಚಿಸುತ್ತಾನೆನ್ನುವ ತಿಳುವಳಿಕೆ ಅಪಾಯಕಾರಿ. ಇದಲ್ಲದೆ ಸಮಾಜದಲ್ಲಿ ತಾನು ತಟಸ್ಥನಾಗಿದ್ದೇನೆಂದು ಹೇಳಿಕೊಳ್ಳುವವನೂ ಕೂಡ ತನಗರಿವಿಲ್ಲದೆಯೇ ಆಳುವ ವರ್ಗದ ಆಲೋಚನೆಗಳಿಗೆ ವಾಹಕನಾಗಿಬಿಡುತ್ತಾನೆ. ಏಕೆಂದರೆ ವರ್ಗಸಮಾಜದಲ್ಲಿ ಆಳುವ ವರ್ಗವು ತನ್ನದೇ ಆದ ಮೌಲ್ಯಗಳನ್ನು ಸಾಂಸ್ಕೃತಿಕ ರಂಗದ ಮೇಲೆ ಚಾಲನೆ ಮಾಡಿರುತ್ತದೆ. ಇಂತಹ ಸಂದರ್ಭದಲ್ಲಿ ಕವಿ ತನ್ನ ಕಾಲದ ಪ್ರಮುಖ ಸಾಮಾಜಿಕ ನಡೆಗಳನ್ನು ತನ್ನ ಕಾವ್ಯದಲ್ಲಿ ಗರ್ಭೀಕರಿಸಿಕೊಳ್ಳದೆ ಹೋದರೆ, ಅದು ಕಾಲದ ವಾಸ್ತವತೆಯಿಂದ ದೂರವಾಗುತ್ತದೆ. ಕೃತಿಗೆ ಕೇಂದ್ರವಾಗುವ ಇಂತಹ ವಾಸ್ತವವೇ ಅದರ ಆಶಯವೂ ಆಗಿರುತ್ತದೆ. ಯಾವುದೋ ಕಾಲದ ನಿಯಮಗಳನ್ನು ನಂಬಿಕೊಂಡು ವರ್ತಮಾನ ವನ್ನು ಕಳೆದುಕೊಳ್ಳುವ ಕವಿಯನ್ನು ಚರಿತ್ರೆ ಕ್ಷಮಿಸುವುದಿಲ್ಲ.

ಈಗಿರುವ ಚಾರಿತ್ರಿಕ ಪರಿಸ್ಥಿತಿಯಲ್ಲಿ ಕವಿ ತಾನು ಶೋಷಿತರ ಕಡೆಗೆ ಎಂಬು ದನ್ನು ಘೋಷಿಸಬೇಕು ಮಾತ್ರವಲ್ಲ, ಆ ಬಹುಸಂಖ್ಯಾತ ಹೋರಾಟಗಾರರ ಪರ ವಾದ ದನಿಯನ್ನು ಕಾವ್ಯವನ್ನಾಗಿಸುವುದರಲ್ಲಿ ಶ್ರಮಿಸಬೇಕು. ಘೋಷಣೆಯನ್ನು

ಕೂಗುವುದು ಕವಿಯ ಕೆಲಸವಲ್ಲ. ಆದರೆ ಆ ಬಗೆಯ ಆಪಾದನೆಯನ್ನು ಮಾಡಿ ಉತ್ತಮ ಕಾವ್ಯವನ್ನು ಹೀಗಳೆಯುವವರ ಬಗೆಗೆ ಎಚ್ಚರವಹಿಸಬೇಕು. ಏಕೆಂದರೆ ಇಂತಹ ಸಮಯ ವಂಚಕರೇ ಚಳುವಳಿಗೆ ಮಣ್ಣು ಹಾಕುವವರು. ಕಾವ್ಯವನ್ನು ಯಾರಿಗೋಸ್ಕರ ಬರೆಯುತ್ತಿದ್ದೇನೆಂದು ಕವಿ ಪ್ರಶ್ನಿಸಿಕೊಂಡರೆ, ಹೇಗೆ ಮತ್ತು ಏನನ್ನು ಬರೆಯಬೇಕೆಂಬುದಕ್ಕೂ ಉತ್ತರಗಳು ದೊರೆಯುತ್ತವೆ. ಆದರೆ ನೆನಪಿಟ್ಟು ಕೊಳ್ಳಬೇಕಾದ ಒಂದು ಅಂಶವೆಂದರೆ, ನವೋದಯದಿಂದ ಹಿಡಿದು ಬಂಡಾಯದವರೆಗೆ ರಚಿತವಾಗಿರುವ ಕಾವ್ಯ ವಿದ್ಯಾವಂತ ಓದುಗರನ್ನು ಸುತ್ತುವರೆದದ್ದು. ಅಕ್ಷರ ಬಾರದ, ಬಂದರೂ ಕಾವ್ಯದ ಬಗೆಗೆ ಆಸಕ್ತಿ ಬೆಳೆಸಿಕೊಳ್ಳದ ಮುಕ್ಕಾಲು ಪಾಲು ಜನಕ್ಕೆ ಕಾವ್ಯದ ಅಭಿರುಚಿಯನ್ನು ಬೆಳೆಸುವ, ತನ್ಮೂಲಕ ಕಾವ್ಯಶಕ್ತಿಯನ್ನು ಹೆಚ್ಚಿಸುವ ಕೆಲಸಮಾಡಬೇಕು. ಈ ಬಹುಪಾಲು ಶೋಷಿತ ಜನತೆ ಹೋರಾಟಕ್ಕೆ ತನ್ನನ್ನು ತೆತ್ತುಕೊಂಡಾಗ, ಅದರ ಮೂಲಕ ಬರುವ ಸ್ಫೂರ್ತಿಯೇ ಮಧ್ಯಮವರ್ಗ ಕೆಳಗಿಳಿದು ಬರಲು ಚಾಲನೆ. ಆದ್ದರಿಂದ ಎಷ್ಟೆಷ್ಟು ಶೋಷಿತ ಜನತೆಯ ಹೋರಾಟದ ಆಶೆ ಆಶೋತ್ತರಗಳ ಎತ್ತರ ಬಿತ್ತರಗಳನ್ನು ವಾಸ್ತವದ ದಿಕ್ಕಿನಲ್ಲಿ ಕವಿ ಕಂಡರಿಸುತಾನೋ ಅಷ್ಟು ಅವನ ಕಾವ್ಯ ಮಾನ್ಯವಾಗುತ್ತದೆ. ಜನತೆಯ ಕಾವ್ಯವನ್ನಾಗಿಸುವುದು ಕವಿಗೆ ಚರಿತ್ರೆಯ ಕರೆ ಎಂಬುದನ್ನು ತಿಳಿದುಕೊಂಡು, ಇದು ತನಗೆ ಸಂದ ಅತ್ಯಂತ ದೊಡ್ಡ ಗೌರವವೆಂದು ಭಾವಿಸಿ, ಹೋರಾಟದ ಭೂಮಿಕೆಯನ್ನು ಫಲವತ್ತಾಗಿಸಲು ಶ್ರಮಿಸಿದರೆ ಅದಕ್ಕಿಂತ ದೊಡ್ಡ ಕೃತಕೃತ್ಯತೆ ಕವಿಗೆ ಬೇರೊಂದಿಲ್ಲ.

—ಸಿ. ವೀರಣ್ಣ

# ಈ ಸಂಕಲನದೊಳಗೆ

# ಜನಪದ ಕಾವ್ಯ

ಹಾದೀಲಿ ಹೋಗ್ವೋರೆ ಹಾಡೆಂದು ಕಾಡ್ಬೇಡಿ
ಹಾಡಲ್ಲ ನನ್ನ ಒಡಲುರಿ ದೇವರೆ
ಬೆವರಲ್ಲ ನನ್ನ ಕಣ್ಣೀರು.

ಬಡವರು ಸತ್ತರೆ ಸುಡಲೀಕೆ ಸೌದಿಲ್ಲೋ
ಒಡಲ ಬೆಂಕೀಲಿ ಹೆಣ ಬೆಂದೊ ದೇವರೆ
ಬಡವರಿಗೆ ಸಾವ ಕೊಡಬೇಡೊ.

ಹೆಣ್ಣಿನ ಗೋಳಟ್ಟ ಬನ್ನಿಯ ಮರ ಬೆಂದೊ
ಅಲ್ಲಿ ಸನ್ಯಾಸಿ ಮಠ ಬೆಂದೊ ಹಾರುವರ
ಪಂಚಾಂಗಕತ್ತಿ ಉರಿದಾವ.

ದೊಡ್ಡೋರ ಮಕ್ಕ್ಳೋಗೆ ಬೆಲ್ಲ ಬಾಳಿಯ ಹಣ್ಣು
ಏನು ಇಲ್ಲದ ಬಡವೇಯ ಮಕ್ಕ್ಳೋಗೆ
ಹೆತ್ತಬ್ಬೆ ಬತ್ತ ಮೊಲೆಹಾಲು.

ಹೆಣ್ಣು ಆಗೂದಕ್ಕಿಂತ ಮಣ್ಣು ಆಗೂದು ಲೇಸು
ಮಣ್ಣಿನ ಮ್ಯಾಲೆ ಮರವಾಗಿ ಬೆಳೆದಾರ
ಬಂದವರಿಂಗೆಲ್ಲ ನೆರಳವ್ವ.

ಕಣಜ ಬೆಳೆದ ಮನೆಗೆ ಉಣಲಾಕ ಕೂಳಿಲ್ಲ
ಬೀಸಾಕ ಕವಣೆ ಬಲವಿಲ್ಲ ಕೂಲ್ಯವರ
ಸುಡಬೇಕ ಜನುಮ ಸುಖವಿಲ್ಲ.

ಅನ್ನೇಕಾರ ಅರಸು ನಿನ್ನ ಸಂಬಳ ಸಾಕು
ಹನ್ನೆರಡು ವರುಷಲ ಹಳೆಅಕ್ಕಿ ಅನ್ನ ಉಂಡು
ಚನ್ನಿಗ ನನ್ನ ತಮ್ಮ ಬಡವಾದ

## ಭೂಮಿ

ಕಂಚಿನಕಾಳಿ ಬಾವಿಕೂಗು ಧರ್ಮಾದ್ ಗುಟ್ಟು
ಹಂಚ್ಕೊಂಡು ಬಾಳಿ ಭೂಮಿಹಕ್ಕು ಎಲ್ಲಾರ್‌ಗುಂಟು
ಉತ್ತಿಬಿತ್ತಿ ಬೆಳೆಯೋ ರೈತ ತಾಗಾಲಷ್ಟು
ಕೂತ್ಕೊಂಡ್ ಉಣ್ಣೊ ಗೆಣೆಯಗ್ಯಾಕೆ ಭೂಮಿಪಟ್ಟು.

# ಮಕ್ಕಳ ಮಾರ್‍ಯಾರ ಮಳಿರಾಜಾ

ಬಣ್ಣದ ಗುಬ್ಯಾರು ಮಳಿರಾಜ ಅವರು
ಮಣ್ಣಾಗಿ ಹೋದರು ಮಳಿರಾಜಾ
ಬಣ್ಣದ ಗುಬ್ಯಾರು ಮಣ್ಣಾಗಿ ಹೋದರು
ಅನ್ಯದ ದಿನ ಬಂದು ಮಳಿರಾಜಾ

ಒಕ್ಕಲ ಗೇರ್‍ಯಾಗ ಮಳಿರಾಜಾ ಅವರು
ಮಕ್ಕಳ ಮಾರ್‍ಯಾರ ಮಳಿರಾಜಾ
ಮಕ್ಕಳ ಮಾರೀ ರೊಕ್ಕಾ ಹಿಡಕೊಂಡು
ಭತ್ತಂತ ತಿರಗ್ಯಾರು ಮಳಿರಾಜಾ

ಸೊಲಗಿ ಹಿಟ್ಟನಾಗ ಮಳಿರಾಜಾ ಅವರು
ಸುಣ್ಣನ್ನು ಕೂಡಿಸ್ಯಾರ ಮಳಿರಾಜಾ
ಹಸ್ತು ಬಂದಕ್ಯಾರಿ ಗಸಗಪ ತಿಂದು
ಒದ್ದಾಡಿ ಸತ್ತಾರ ಮಳಿರಾಜಾ

ಗಿದ್ದನ ಆಕ್ಕ್ಯಾಗ ಮಳಿರಾಜಾ ಅವರು
ಅಪುವನ್ನು ಕೂಡಿಸ್ಯಾರ ಮಳಿರಾಜಾ
ಸಣ್ಣ ಕೂಸಿಗಿ ಮನ್ನಿಸಿ ಉಣಿಸ್ಯಾರ
ಕಣ್ಣನ್ನೆ ಮುಚ್ಚ್ಯಾವ ಮಳಿರಾಜಾ

ಗಂಡುಳ್ಳ ಬಾಲ್ಯಾರು ಮಳಿರಾಜಾ ಅವರು
ಭಿಕ್ಷಾಕ ಹೊರಟಾರ ಮಳಿರಾಜಾ
ಗಂಡುಳ್ಳ ಬಾಲ್ಯಾರು ಭಿಕ್ಷಾಕ ಹೋದರು
ಅನ್ಯದ ದಿನ ಬಂದು ಮಳಿರಾಜಾ

ಸ್ವಾತೀಯ ಮಳಿ ಬಂದು ಮಳಿರಾಜಾ ಸುತ್ತ
ದೇಶಾಕ ಆಗ್ಯಾದ ಮಳಿರಾಜಾ
ಹಳ್ಳಕೊಳ್ಳ ಹೆಣ ಹರಿದಾಡಿ ಹೋದವು
ಯಾವಾಗ ಬಂದೆಪ್ಪಾ ಮಳಿರಾಜಾ

# ನಿಶ್ಶಸ್ತ್ರೀಕರಣ ಕಾಯಿದೆ

ಹೊತ್ತು ಬಂದಿತು ಮತ್ತ ನೋಡರಿ ಕತ್ತಿ ಹಿಡಿವ ಜನಕ
ಸಿಟ್ಟಿನ ಮಂದಿ ಭಂಟರ ಹಲಗಲಿ ಮುಟ್ಟಲಿಲ್ಲ ದಡಕ
ಮಾತಿನಿಂದ ಹುಕುಮು ಕಳವಿದರ ಕುಂಪಣಿ ಸರಕಾರಾ ;
ಎಲ್ಲ ಜನರನಾ ತರಿಸಿ ಜೋರಿಮಾಡಿ ತರಬೇಕ ಹತಾರಾ ;
ಕತ್ತಿ ಕಟಾರಿ ಕೈಚೂರಿ ಬಾಕು ಗರ್ಡಿ ಸುರಾಯಿ ಚಕ್ರಾ
ಬಾಲಿಯ ಬರ್ಜಿ ಬಿಚ್ಚುಗತ್ತಿಯು ನೋಡ ಬಾಣಬಿಲ್ಲಿನವರಾ
ಪಟಾಲ ಪಿಸ್ತುಲ ಕರಲಿ ತೇಗಾ ಚಪಗೊಡ್ಲಿ ಶಸ್ತ್ರಾ
ತೋಪು ತುಪಾಕಿ ಹೊಡವು ಮದ್ದುಗುಂಡ ಬಿಡಬ್ಯಾಡರಿ ಚೂರಾ
ಮುಚ್ಚಿಟ್ಟವರಿಗೆ ಮೂರು ವರ್ಷದ ಬೇಡಿ ಹಾಕರಿ ಪೂರಾ
ಕೊಡದೆ ದಿಟಾಯಿ ಮಾಡಿದವರನಾ ಕಡದ ಹಾಕರಿ ಠಾರಾ
ಬೇಡಿದಕ್ಷಣಕ ತಾವು ತಂದು ಕೊಡತಾರ ಹಿಡಿಹಿಡಿರೆ ಎಂದು
ವತ್ನ ಕೊಡತೇವ್ ಅನ್ನರಿ ಒಂದೇ ಒಂದು ತಂದು ಕೊಡಲಾರ ತಮ್ಮ ಕುಸಿಲಿಂದು.
ಬಂದೀತು ಹುಕುಮು ಹೀಂಗೆ ಎಂದು ಡಂಗರ ಸಾರಿದರ ಮುಂದು
ಶೂರ ಸಿಪಾಯಿ ಜನರ ತಾವು ತಿಳಿದು ಅಳತಾರು ಕಣ್ಣಿಗೆ ನೀರತಂದು
ಬಹಳ ಚಿಂತೆಯಾಗಿ ದುಃಖದಿಂದ ಅವರು ಬಿದ್ದರಣ್ಣನೇಕ

ಕೇಳುತ ಹುಕುಮಾ ಕೆಲವರ ತಂದ ತಂದ ಕೊಟ್ಟಾರ ಆವಾಗ.
ಬಹಳ ಬೆಲೀವು ಹೆಚ್ಚಿನ ಹತಾರಾ ಮುಚ್ಚಿಟ್ಟರವೊಳಗ :
ಸಾಲ ಸಮದಮಾಡಿ ದನಕರ ಮಾರಿ ತಂದಿವ್ನಿ ಹಬ್ಬದಾಗ,
ಶೂರ ಚಟೀಗಾರು ಜಾಯಿರ್ ಸಾಹೇಬ ಬಂದಾಗ ಆವಾಗ,
ಸಂದಿಯಗೊಂದಿವೊಂದು ಉಳಿಯದ ಹಂಗ ಹೊಕ್ಕ ಹುಡಿಕೆರ ಮನಿಯಾಗ,
ತೆಪ್ಪಿತ್ ಉಪಾಯಿ ಇನ್ನ ಯಾತರ ಮಾಡುನ ಅಂತರಹ್ಯಾಂಗ
ವೊಬ್ಬರ ಮೇಲೆ ಒಬ್ಬರ ಚ್ಯಾಡಿ ಹೇಳತಾರ ವರ್ಮಸಾಧಿಸಿದ ಹಾಂಗ
ಜ್ಯಾಡಿಸಿ ಹೋದವೊ ಎಲ್ಲಾ ನಾಡ್ ಒಳಗೆ ಏನು ಉಳಿಲಿಲ್ಲಾ
ಅಜ್ಜ ಮುತ್ತೆಕ ಹಿಡುವ ಪಿಸ್ತುಲ ಕಸದು ಹೋದರ ಕಟ್ಟೆಯು ಡಾಲಾ
ಕವಚ ಬೆಳ್ಳಿಯ ಮಕಮಾಲಾ ರತ್ನದ ಹಿಡಿಕಿವ ಹೋದವು ಎಲ್ಲಾ
ಹೋದೆ ಹತಾರಕ ಹೊಟಬ್ಯಾನಿ ಹಚ್ಚಿಕೊಂಡ ನಿರಿತರ ಸಾವುದಕ

ಹೆಲ್ಲಕೆತ್ತಿದಾ ಹಾಂವಿನ ಪರಿಯು ನಮಗೆ ಆದಿತ್ ಅಲ್ಲಾ,
ರಂಡಿ ಮುಸುಕ ಹಾಕಿ ತಿರಿಗಿದರ, ನಮ ಮಾನಾ ಉಳಿಯುವ್ರುದಿಲ್ಲ,
ಮಗ್ಗಲದಾಗಿನ ಹೆಣತಿ ಕೊಟ್ಟಂಗ ಅತಿ ಹೇಡಿ ಆದೇವ್ ಅಲ್ಲಾ,
ಸತ್ತ ಹೆಣಕ ಶೃಂಗಾರ ಮಾಡಿದ ಪರಿ ಆದಿತ್ ಅಲ್ಲಾ,
ಸಾವುಕಾರ್ರು ನಮಜೀವ ಹೋದಿತ್ ಅಂತ ಚಿಂತಿ ಮಾಡೇರ್ ಅಲ್ಲಾ,
ಹಗಲು ಮನೆಹೊಕ್ಕು ಹಣ ಪ್ರೋದರ ಕೇಳವರ್ ಯಾರ್ ಅಲ್ಲಾ,
ಪುಂಡ ಪಾಳೇಗಾರ ಪಾಚ್ಯ ವಜೀರರು ಪಂತ ಹಿಡಿಯಲಿಲ್ಲಾ,
ದಂಡನೆ ಆಳುವ ಧೊರೆ ದೌಲತರು ಅಂಜಿ ಕುಳಿತರ್ ಅಲ್ಲಾ ;
ದೇವರ ತಂದ ಪಡಿಪಾಟಾ ಚಿಂತಿಹತ್ತಿ ಆದರೊ ನಷ್ಟಾ
ಅಧಿಕಾರ ಉಳಿಯಲಿಲ್ಲಾ ಎಳ್ ಅಷ್ಟಾ ಕೇಡಗಾಲ ಬಂದಿತು ಕನಿ ಕಷ್ಟಾ
ಹೆಂಗಸ್ ಆಗೆ ಸೀರೆಯು ಉಟ್ಟಾ ಸೋಂಡ್ ವಣಗಿ ಆದಿತೊ ಬೊಬ್ಬಾಟಾ
ಆದ್ ಹಂಗ್ ಅತಿ ಸ್ತ್ರೀಯರ ಕ್ರೀಡಾರ್ ಆಟಾ ಭಂಟರಿಗೆ ಬಂದಿತೋ ಬಿಕಷ್ಟಾ
ಪಕ್ಕಾ ಕಿತ್ತ ಪಕ್ಷಿಗತಿ ಆಗಿ ಚಿಂತಿ ಅದರ ಮನಕ

ಹಲಗಲಿ ಎಂಬುವ ಹಳ್ಳಿ ಮುಧೋಳ ರಾಜ್ಯದಾಗ ಇತ್ತು.
ಪೂಜೇರಿ ಹನುಮಾ ಬಾಲ ಜಡಗ ರಾಮಾ ಮಾಡ್ಯಾರ ಮಸಲತ್ತು :
ಕೈನ ಹತಾರ ಕೊಡಬಾರದೊ ನಾವು ನಾಲ್ಕು ಮಂದಿ ಜತ್ತು ;
ಹತಾರಾ ಹೋದ ಇಂದ ಬಾರದ ನಮ್ಮ ಜೀವ ಸತ್ ಬದುಕು ಗೊತ್ತು.
ಸುತ್ತಿನ ಹಳ್ಳಿ ಮತ್ತ ಧೊರಿಗಳಿಗೆ ತಿಳಿಶಿರ ಹೀಂಗ್ ಅಂತು :
ಮಾಡರಿ ಜಗಳಾ ಕೂಡ್ ಇರತೇವು ಕಮಕಿ ಯಾವತ್ತು.
ಒಳಗಿಂದ ಒಳಗೆ ವಚನ ಕೊಟ್ಟರೊ ಬ್ಯಾಡರ್ ಎಲ್ಲ ಕಲತು.
ಕಾರಕೂನನ ಕಪಾಳಕ ಬಡದರ ಶಿಪಾಯಿ ನೆಲಕ ಬೆಟ್ಟು.
ದುಃಖದಿಂದ ಅವರು ಅಲ್ಲಿಗ್ ಹೋಗಿ ಸಾಹೇಬರ ಕೇಳಿದರ ಕೂಗಿ.
ಕೇಳಿ ಸಾಹೇಬ ಯುದ್ಧ ಸಿಟ್ಟಗಿ ತಿರುಗಿ ಹೋದ ಆವಾಗ ಕಲಾದಗಿ
ಕರಸಿ ಕೃಷ್ಣಪ್ಪನಾಯಕ ಗೌಡ ಕುಂದರಗಿ ಕರಸ್ಯಾನ ಸಂಧಾನಕ್ಕ ಆಗ
ಹಠಾ ಮಾಡಬಾರದು ನಿಮ್ಮ ಹತಾರಾ ಕೊಡಿರಿ ಸಾಹೇಬನ್ ಇಶಾಕ

ಹತಾರ ಕೊಡಲಿಕ ಹೆಂಗಸ್ ಆಗಿ ಬಳಿ ಇಟ್ಟಿಲ ಕೈಯಾಗ,
ಹೆಂಗ ಬಂದೀರಿ ಜೀವ ಹೋದರೂ ಕೊಡೂದಿಲ್ಲಾ ಸುಮ್ಮನ್ ಹೋಗರಿ ಈಗ,
ಅಂದಮಾತ ಎಲ್ಲ ಬಂದ ಹೇಳಿದಾನ ಆವಾಗ ಸಾಹೇಬನ.
ಶಿಟ್ಟಿಲಿ ಮುಂಗೈ ಕಟ್ಟನೆ ಕಡಕೊಂಡ ಹುಕುಮ ಕೊಟ್ಟರ್ ಆಗ.

ಕುದರಿಯ ಮಂದಿ ಕೂಡಿ ಮುಟ್ಟಿಕೊ ಹಲಗಲಿ ಸ್ಥಳದ ಮೇಗ
ಒಳಗಿನ ಮಂದಿ ಮೊತ್ತರಲಿ ಹೊಡೆದರ ಮುಂಗಾರಿ ಮಳಿ ಸುರದ್ ಹಂಗ
ಹೊರಗಿನ ಮಂದಿ ಗುಂಡ ಹತ್ತಿ ಕೆರ ತಿರಗೆರ ಆವಾಗ,
ಕಾಗದ ಬರದ ಕಳವ್ಯಾರ ಬೇಗನ ದಂಡ ಬರಲ್ ಎರತ್ ಹೀಂಗಾ.
ದಂಡ ಬರತ ನೋಡ ತಯಾರ್ ಆಗಿ ಜಲದ ಮಾಡಿಬಂತ ಹಲಗಲಿಗಿ,
ಆರ ತಾಸ ರಾತ್ರಿಯಾಗ ಹೋಗಿ ಊರಿಗಿ ಹಾಕಿದಾರ ಮುತ್ತಿಗಿ
ಗುಂಡ ಹೊಡೆದಾರ ವಿಪರೀತಿ ಸೂರಿ ಆಗಿ ಅಂಜಿ ಓಡಾಕ್ ಹತ್ತಿತ ಮುಂದ್ ಆಗಿ ;
ಬೆನ್ನ ಹತ್ತಿ ನೋಡಿದಾರ ಇವರ್ ಆಗಿ ಬಿದ್ದಾವ ಹೆಣಗೋಳು ಸೂರ್ವೆ ಆಗಿ,
ಮುತ್ತಿಗಿ ಹಾಕಿ ಅವರು ಕತ್ತಿಲಿ ಕಡದರ ಅಂಜಲಿಲ್ಲಾ ಯಾತ್‌ಯತಕ

ಬೆನ್ನ ಹತ್ತಿ ತಿರಿತಿರಿವಿ ಕಡದರೊ ಏನೂ ಉಳಿಯದಾಂಗ ;
ನಡವ ಹಾಕಿಕೊಂಡ ಹೊಡೆದರ ಗುಂಡದ ಜರ ಇಲ್ಲದ ಹಾಂಗ ;
ಕವಾತ ಫೈರಾ ಸುತ್ತಗಟ್ಟಿ ತಂಬು ನುಡಿಸಾರ ಆವಾಗ ;
ತೋಪು ತುಬಾಕಿ ಕುರುಳಿ ಪಿಸ್ತುಲ ಬಾಕ ನಡವಿನಾಗ.
ಶಿಡಿಲಿನ ಹಂತ ಗುಂಡ ಹೊಡೆವುತ ಕತ್ತಿಲಿ ಕಡದರ ಒಳತಾಂಗ.
ನಡಗಿತು ಬ್ಯಾಡಕಿ ಕೆನೆಧೂಳ ಹಾರಿಥಾಂಗ ಕಡದಾಡವು ಹ್ಯಾಂಗ
ಕೇಡಗಾಲ ಬಂದಿತ ನಡವಿ ಶಿಕ್ಕಾರೊ ಬಿಡಿಸವರ್ ಯಾರ್ ಈಗ ?
ಚಟೀಕಾರರು ಚೌಕಿ ಮಾಡುತ ನಡದರ ಗುಡದಾಗ.
ಆಗಸಿಗ ಬಂದು ನಿಂತೀತು ಹೆಬಲಕ್ ಸಾಹೇಬ ಬಂದು ತಾವು ನಿಂತು
ಹೇಳತಾರ ಬುದ್ಧಿಯ ಮಾತು ಕೊಡತೆವ ಕವಲ ಈ ಹೊತ್ತು
ಹೋಗಬೇಡಿರಿ ವೆರ್ರಾ ನೀವು ಸತ್ತು
ಯೆಂಬು ಮಾತಿಗೆ ನಂಬೆಗೆ ಸಾಲದ ಹನಮಾ ಬಂದ ಮುಂದಕ

ಜಡಗ ಹೇಳತಾನ ಹೊಡಿ ಇವರನಾ ಈಗ ಘಾತಕರೊ ಇವರಾ ;
ಇಸವಸ ಘಾತಾ ಮಾಡಿ ನೆಂಬಿಗೆಲೆ ಮಾಡತಾರು ಫಿತೂರಿ ;
ಮೋಸ ಮಾಡಿ ಬಲದೇಶ ತಗೊತರ ಮುಂದ ನಮುಗ ಗೋರಾ ;
ಅಂದ ಹೊಡೆದರೊ—ಒಂದು ಗುಂಡಿಗೆ ಆದ ಸಾಹೇಬ ಟಾರಾ.
ಕಾರ ಸಾಹೇಬ ಬೆಂಕಿ ಚೂರ ಆಗಿ ತಾನು ಲೂಟಿ ಮಾಡ್ ಅಂದ ಊರಾ.
ಹುರುಪಿಲಿ ಹೊಡೆದರ ಮಳಿ ಆದ ಹಾಂಗ ಗುಂಡ ಸುರದವು ಬರಪೂರಾ.
ಹನುಮಾ ಹೇಳತಾನ ಗುಂಡ ಹೊಡೆದ ಕೆರ ಕೆಡವುನ್ ಅಷ್ಟ ಬಾರಾ.
ಮುನ್ನೂರ ಮಂದಿ ತನ್ನ ಮೇಗೆ ಬಿಟ್ಯಾ ಆಗ ನೋಡರಿ ಜೋರಾ

ಭೀಮನು ಇದಿರಿಗೆ ನಿಂತಾ ಐನೂರ ಮಂದಿಗೆ ಮಲತಾ
ಬಲನು ಮಾಡಿದ ಕಸರತ್ತಾ ಕುದರಿಯ ಕಡದನೋ ಹತ್ತಾ
ರಾಮುನ ಕಡತ ವಿಪರೀತಾ ಕಾವಲಿ ಹರಿತೊ ರಕ್ತಾ
ಸಾವಿರ ಆಳಿಗೆ ಒಬ್ಬ ಮಲತಾ ಕೂಗತಾನೊ ಕಡಿಕಡೀರ್ ಎಂತಾ
ನಾಲ್ಕು ಮಂದಿ ಹೀಂಗ್ ಕಡದ ಸತ್ತರೊ ಭಂಟರ್ ಅನಸೆರಾ ಜನಕ

ಯಾರು ಕೇಳಲಿಲ್ಲಾ ಆರು ಗುಂಡ ತಾಕಿ ಹನುಮ ಬಿದ್ದ ನೆಲಕ.
ಚೀರ್‍ಯಾಡುತ ಜನ ಸುತ್ತುಗಟ್ಟಿತೊ ಅಂಜಿಕೊಂಡ ಜೀವಕ.
ಶೂರ ಒಬ್ಬ ಬಹಳ ಜೋರ ಮಾಡಿದನ ಹತಾರ ತೊಗುಳೂದಕ
ಏರಿ ಬರು ಕುದುರಿ ಕಾಲಾ ಕಡದನೊ ಸ್ವಾರ ಬಿದ್ದ ನೆಲಕ.
ರಾಮಿ ಗುಂಡಲಿ ಜೋಗ ಮಾಡಿ ಹೊಡೆದಳೊ ಮೂರ ಮಂದಿ ಶಿರಕ;
ಆರು ಕುದುರಿಯ ಕಡದ ಸಿಡಿದಳೊ ಬಾಲನ ಸೂರಾಯಕ.
ಯಾರ್‍ಯಾರು ಇಲ್ಲದಾದೀತು ಊರೆಲ್ಲಾ ಲೂಟಿ ಆಗಿಹೋತು,
ಮಂದಿ ಮನಿ ಹೊಕ್ಕ ಹುಡುಕಿತು ದನ ಕರಾ ಲಯ ಆದೀತು,
ಸಣ್ಣ ಕೂಸುಗಳು ಹೋದವು ಸತ್ತು ಬೆಂಕಿ ಹಚ್ಯಾರ ಊರ ಸುಟ್ಟೀತು,
ನಷ್ಟ ಅತಿ ನೋಡಿರಿ ಈವತ್ತು ನಾ ಹೇಳತೇನ ಈ ಮಾತು,
ಇಷ್ಟೆಲ್ಲ ಆಳವಾಗಿ ಹೋದಿತೊ ಮುಟ್ಟಲಿಲ್ಲ ಯಾತೆತಕ

ಕತ್ತಿ ಕುದುರಿ ಮುತ್ತು ಮಾಣಿಕ ಯಾವುದು ಬಿಡಲಿಲ್ಲಾ :
ಬೆಳ್ಳಿ ಭಂಗಾರಾ, ಹರಳಿನುಂಗರಾ ಹೊನ್ನುಂಗರ ಗೋಲಾ,
ಸರಗಿ ಸರದಾಳಿ ಬುಗುಡಿ ಬಾವಲಿ ಬಿಡಲಿಲ್ಲಾ ;
ಕಡಗ ಕಂಕಣಾ ನಡವಿನ ಡಾಬಾ ನಡುಕಟ್ಟು ರುಮಾಲಾ,
ಕುಬಸ ಸೀರಿ ಹಪ್ಪಳ ಸಂಡಗಿ ಕುರ್ಚಿಗಿ ಕುಡುಗೋಲಾ,
ಕೊಡಲಿ ಕೋರೆ ಕುಡ ಕಬ್ಬಿಣಾ ಮೊಸರು ಬೆಣ್ಣಿ ಹಾಲಾ,
ಉಪ್ಪ ಎಣ್ಣಿ ಅರಿಶಿಣ ಜೀರಗಿ ಅಕ್ಕಿ ಸಕ್ಕರಿ ಬೆಲ್ಲಾ ;
ಗಂಗಳ ಚರಗಿ ಮಂಗಳ ಸೂತ್ರಾ ; ತಕೊಂಡ ಹೋದರ ಬೀಸುಕಲ್ಲಾ.
ಹಾಳಾಗಿ ಹೋದಿತೊ ಇಷ್ಟು ವರ್ಣಿಸಿ ಹೇಳಲು ಎಷ್ಟು,
ತಗೊಂಡರೊ ಸಿಕ್ಕಷ್ಟು ಸರದ ನಿಂತರೊ ಊರಿಗೆ ಕೊಳ್ಳಿ ಕೊಟ್ಟು,
ಬೂದಿ ಮಾಡ್ಯಾರ ಹಲಗಲಿ ಸುಟ್ಟು ಹಲಗಲಿ ಗುರ್ತು ಎಳ್ಳಷ್ಟು
ಕಾಣಸ್ತ ಹೋದಿತೊ ಕೆಟ್ಟು ವರ್ಣಿಸಿ ಹೇಳಿದನೊ ಇಷ್ಟು,
ಕುರ್ತಕೋಟಿ ಕಲ್ಮೇಶನ ದಯದಿಂದ ಹೇಳುದ ಕೇಳುದಕ

## ಕರನಿರಾಕರಣೆ ಲಾವಣಿ

ಏನ ಹೇಳಲಿ ಜನ್ಮದ ಗೋಳಾ
ಇಂಗರಜಿ ಉಪದರ ಆದೀತು ಬಹಳಾ
ಬಡವರು ಅಳತಾರೋ ಗಳಾಗಳಾ
ಮಾಡತಾರೊ ಚಿಂತಿ

ಕಠಿಣ ಬಡವರದ ತುಂಬೋದು ಹೊಟ್ಟಿ
ಮಾರಿಕೊಟ್ವಾರೋ ನೂಲುವ ರಾಟಿ
ದುಡ್ಡಿನ ಆಶೆ ಹತ್ತಿತೆ ಸರಕಾರಕ

ಹಲಗೀಕುಂಟಿ ರೇಸಮಿ ಪಟ್ಟಿ
ಭಾಂಡೇ ಸಾಮಾನ ಜಮಾನು ಪಾಟಿ
ಲಿಲಾವು ಮಾಡಸ್ಯಾರು ಕಿಮ್ಮತಕಟ್ಟಿ
ಭಾಳ ಕೆಟ್ವಾರಂಣಾ ಸರಕಾರಾ
ಬಡವರು ತಂದರು ಕಣ್ಣೀರಾ
ಹೆಂತಾ ವ್ಯಾಳೆ ತಂದಿ ಈಶ್ವರಾ
ನಮಗ ಯಾರದು ಇಲ್ಲಾ ಆದsರಾ.

## ತೋಗೀ ಬರ

ದನದ ಗೋಳ ಇನ್ನೇನ ಹೇಳಲಿ
ವ್ಯಾಳೆ ಪರಮೇಶ್ವರ ತಂದಿಟ್ಟ
ಮಾವಿನ ತಪ್ಪಲ ಬೇವಿನ ತಪ್ಪಲ
ಮುಳ್ಳು ಬಳ್ಳಿ ಕಡಿದ ತಿಂದು
ಕಾಲ ಹೋಗಿ ಬಿದ್ದಾವ ನೆಲಕ.

ಹುಲ್ಲು ಕಾಣದೆ ಉಪ್ವಾಸ ಸಾಯ್ತಾವೆ
ರುಪಾಯ್ಗೆ ಸಿಗವಲ್ದು ಹಿಡಿದೊಂಟ
ಮಾರೇನಂದ್ರ ಯಾರೂ ತಗೋವಲ್ರು
ಮಿರಿ ಬಂದಾಗ ಜೀವದ ಸುತ್ತ.

ದುಡ್ಡಿಗೊಂದು ದುಗ್ಗಾಣಿಗೊಂದು
ಕಟುಗರ ಬೀದಿ
ರೂಪಾಯಿಗೆ ಆಕಳ ಹದಿನೆಂಟ
ಕಂಟ್ಲಿತ್ತ ಜನ್ನಿಗೆಮ್ಮಿ ಚೀಟಿಕಟ್ಟಿ ಬಿಟ್ಟಾರಪ್ಪ
ನಾವು ನೀವು ನೋಡಿದೆವು ಕಣ್ಮುಟ್ಟ.

ಬಿದ್ದು ಒದ್ದಾಡುತಾವ ಭೂಮಿಮ್ಯಾಲ
ಹದ್ದ ಕಾಗಿ ಹರಕೊಂಡ ತಿಂದಾವರಿ ತೊಗ್ಲ
ಸತ್ತದ್ದು ಬದುಕಿದ್ದು ಗೊತ್ತಿಗೆ ಹತ್ತಲಿಲ್ಲ
ಹತ್ತಕ್ಕೊಂದು ಉಳಿದಾವರಿ ಬೀಜುಕರ.

ಬಿಕ್ಕಟ ಬಂತ್ರಿ ಸಂಕಟ ಜನರಿಗಿ
ಮುಂಕಟ ಮಾರ್ಯಾರ ಗಂಗಾಳ ಚರಿಗಿ
ಹೊರ್ಸ, ತೊಟ್ಟಿಲ ತಟ್ಟಿ ಬಾಗಿಲ
ಗಿರಾಕಿ ಹಚ್ಚ್ಯಾರ ಕೌದಿಗಿ.

ಬೆಳ್ಳಿ ಬಂಗಾರ ಸೂರಲಾಕ ಹ್ವಾದಾರ
ಚಿನವಾಲರು ಕುಂತಾರ ತಲೆದೂಗಿ
ಬಂದುರಿ ಹರಳೆಳೆ ಉಚ್ಚುವಾಗ
ಕೂಸು ಅಳತಾದ ತಾಯಿ ಮೂರಿ ನೋಡಿ
ಆಸಿದ್ದರೆ ಮತ್ತ ಮಾಡಿಸುವೆನು
ಸುಮ್ಮನೆ ಮಲಗಿ ಮಲಿಕುಡಿ.

ಉಣ ಹೊತ್ತಿಗೆ ತಂಗಿ ಮನಿಗೆ ಹ್ವಾದಳು
ಒಳಗ ಕೂತಿದ್ದ ಅಣ್ಣ ಸಾಕಳಿ ಹಾಕಿ
ಅಣ್ಣ ಹೇಳತಾನ ತನ್ನ ಹೆಂಡತಿಗಿ
ಕಳವಿ ಕೊಡಲೆ ಒಂದು ತುಣಕ್ಯಾಕಿ.

ಸಾಹೇಬರು ಸರ್ದಾರರು ಅಂಗ್ರೇಜು ಜಾಗಿರಿ
ಕಾಗದ ಬರಿತಾರ ರಾಣಿಗಿ
ಕಾಳ ಕರೀದಿ ಮಾಡಿ ಕಳಿಸಿರಿ
ಬರ ಬಿದ್ದಾದ ಈ ನಾಡಿಗಿ.

ಅನ್ನ ಕ್ಷೇತ್ರದಲ್ಲಿ ಅಂಬ್ಲಿ ಕುಡ್ದು
ಕೈಕಾಲು ಕೆಟ್ಟ್ಯಾವು ವೋತಿ
ಕೊಳ್ಳಿಲ್ಲದೆ ಬಿದ್ದಾವು ಅನೇಕ
ಕಾಲು ಕೈ ಹೋಗಿ ಬಿದ್ದಾರ ಕೈಲಾಕ.

# ಬರಗಾಲಂದ್ರ ಎದಿ ಅಂತಾದೊ ಧಕ್ಕ

ಇಸ್ವಿಯಿತ್ರಿ ಆ ವರ್ಷ ಎಪ್ಪತ್ತೆರಡಿನ್ನಾ
ಕಲಬುರ್ಗಿ ಜಿಲ್ಲಾಕ ಬಂತೊ ಬರಗಾಲನಾ
ಮಿರಗವ ಮಿಂಚಿತ ಮಳೆಗಾಲ ಸುರುವಾಯ್ತು
ಮಿರ್ಗಾರಿದ್ರ ಮಳಿ ಬರಲಿಲ್ಲ ಪೂರ್ಣಾ
ಎದಿ ಹೊಡದ ಕುಂತಾರ ರೈತರಿನ್ನಾ
ಜನ ಹೋಗ್ಯಾರ ಸರಕಾರ ತನಾ
ದಂದೆ ಹಚ್ಚರಿ ನಮಗೊಂದು ಬದುಕದಕಿನ್ನಾ
ಹೆಣ್ಣು ಗಂಡು ಮುದುಕರು ಸಾವಿರತನಾ
ಲೆಕ್ಕದಾಗ ಮೂರ್ದಾರ ಮೂರಿಂಚಿನ್ನಾ
ಮನೆದಾಗೆ ಉಸರೆಂದು ತುರ್ಯಾರ ಮಣ್ಣಾ.

ದೇಶ ಬಿಟ್ಟು ದೇಶಕ ಹೋಗಿ
ನೀರು ತಂದಾರ ಕಣ್ಣೀಗೀ
ಯಾಕೆ ಬಂದೆವು ನಾವು ಇಲ್ಲಿಗಿ
ಕೊಟ್ಟ ಮಾಪಿಲಿ ಪಾಡಿಹೊಡ್ದು ಕೊಡ್ತಾರ ಧಾನ್ಯ
ಮುಂಜಾಳಿ ಹಿಡ್ದು ದುಡಿದ್ರ ಸಂಜಿತನಾ
ಸಾಟಿ ರೂಪಾಯಿ ಸಿಗ್ತಾವಂದ್ರ ಸತ್ತರ ಸತ್ತಿವಂತ
ಆಪರೇಷನ್‌ಮಾಡಿಕೊಂಡು—
ಆನಪತ್ಯ ಮಾಡಿ ನಡಬರಕ ಹೋಗ್ಯಾರ ದಾಟಿ
ಊರಿಗೆ ಬಂದು ಹತ್ತಲಿಲ್ಲ ಉಪರಾಟೀ
ಮನಿಗೆ ಮರಳಿ ಇಲ್ಲದಂಗಾಯ್ತು ಭೆಟ್ಟ
ಅಕ್ಕಿ ಗೋಧಿ ಕೂಪನ್‌ದವ್ರು ಲೆಕ್ಕಿಲ್ದೆ ಕತ್ತರಿಸ್ಯಾರ
ಅಲ್ಲಿಂವಲ್ಲಿ ಮಾರುತಿದ್ರು ಸಕ್ರಿ ಸರಿಯಾಗಿ ಹಂಚಲಿಲ್ಲ ಜರಾ
ಬರಗಾಲಂದ್ರ ಎದಿ ಅಂತಾದೊ ಧಕ್ಕ
ಎಂದಿಗಿ ಬರಬಾರದಪ್ಪ ಬರಗಾಲ ಸುಂಕ

# ಶಾಸನ

## ರಾಜ

ಪಸಿವುದೆ ತಕ್ಕು ಕೊಟ್ಟಳಿಪಿ ಕೊಳ್ವುದೆ ಮಂತಣಮನ್ಯನಾರಿಗಾ
ಟಿಸುವುದೆ ಚಿತ್ತ ಮೀಯದುದೆ ಬಿನ್ನಣಮೂರುಮನೆಯ್ದೆ ಕೂರ್ತು ಬಂ
ಚಿಸುವುದೆ ಕಲ್ತ ಕಲ್ಪಿಯೆನೆ ಮತ್ತವರಂ ಪೆಸರ್ಗೊಂಡದೆಂತು ಪೋ
ಲಿಸುವುದೊ ಪೇಳಿಮೀಗಡಿನ ರಾಜತನೂಜರೊಳಿಂದ್ರರಾಜನಂ

## ಗೊರವ

ಹಡೆದ ಹಣಹಾಗವೆಲ್ಲಮಂ ಜಡೆಯಿಡುಕುರಿಮಡಗಿ
ಮಿಂಡುದೊಳ್ತಿರ್ಗೀವೀ ತುಡುಗುಣಿ ಗೊರವರ ಮೆಚ್ಚಂ
ಪೊಡವಿಗೆ ಶಿವ ಶಕ್ತಿ ತಾನೆ ನೈಷ್ಠಿಕ ಮುನಿಪಂ

# ಪಂಪ

## ಆದಿಪುರಾಣ

ಕವಿತೆಯೊಳಾಸೆಗೆಯ್ವ ಫಲಮಾವುದೊ ?   ಪೂಜೆ ನೆಗಳ್ತೆಲಾಭಮೆಂ
ಬಿವೆ ವಲಮಿಂದ್ರ ಪೂಜೆ, ಭುವನಸ್ತುತಮಪ್ಪ ನೆಗಳ್ತೆ ಮುಕ್ತಿಸಂ
ಭವಿಸುವ ಲಾಭಮೆಂಬಿವು ಜಿನೇಂದ್ರ ಗುಣಸ್ತುತಿಯಿಂದೆತಾಮೆ ಸಾ
ರವೆ ಪೆರರೀವುದೇಂ ಪೆರರ ಮಾಡುವುದೇಂ ಪೆರರಿಂದಮಪ್ಪುದೇಂ ?

ಒಡಲೊಳೆ ಜೀವಮಿರ್ದು ಗಡ ಸಂಚಿಸುತಿರ್ಪುದು ಪುಣ್ಯ ಪಾಪ ಮಂ
ಗಡ ಬಳಿಕತ್ತ ಬೇರೆ ಪೆರತೊಂದೊಡಲೊಳ್ ಗಡ ತಾನೆನಿಂ
ದೊಡಂಬಡಿಪುದು ಧರ್ಮಕರ್ಮ ಫಲಮಂ ಗಡ ಸತ್ತನೆಮತ್ತೆ ಪುಟ್ಟುವಂ
ಗಡ ಪುಸಿ ಕಾಣ ಡಂಬಮಿದು ಖೇಚರ ನೀನದನೆಂತು ನಂಬಿದೊ ?

ತಲೆವರಿದುಟ್ಟುದಿಕ್ಕಿ ಸುರಲೋಕ ಸುಖಂಗಳನುಣ್ಬೆವೆಂಬ ಬ
ತ್ತಲೆಗರ ಮಾತುಗೊಳ್ಳದಿರು ಬಾಳ್ವನಮಿಂದ್ರಿಯವರ್ಗದಿಚ್ಛೆಯಂ
ಸಲಿಸಿ ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ
ನಲಿವುದು  ಕಂಡರಾರ್ ಮರುಭವಂಗಳನಿಲ್ಲಿ ವಿಯಚ್ಚರೇಶ್ವರ ?

# ವಿಕ್ರಮಾರ್ಜುನ ವಿಜಯ

ಕುಲಮೆಂಬುದುಂಟೆ ಬೀರಮೆ
ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ ನೀ
ಮೊದಲೆಲ್ಲಿ ಪುಟ್ಟಿ ಬೆಳೆದಿರೊ
ಕುಲಮಿರ್ದುದೆ ಕೊಡದೊಳಂ ಶರಸ್ತಂಭದೊಳಂ

ಕುಲಮನೆ ಮುನ್ನ ಮುಗ್ಗಡಿಪರೇಂಗಳ ನಿಮ್ಮ ಕುಲಂಗಳಾಂತುಮಾ
ರ್ಮಲಿವನನಟ್ಟಿ ತಿಂಬುವೆ ಕುಲಂ ಕುಲಮಲ್ತು ಚಲಂ ಕುಲಂ ಗುಣಂ
ಕುಲಮಭಿಮಾನಮೊಂದೆ ಕುಲಮಣ್ಮುಕುಲಂ ಬಗೆವಾಗಳೀ
ಕಲಹದೊಳಣ್ಣ ನಿಮ್ಮ ಕುಲ ಮಾಕುಲಮಂ ನಿಮಗುಂಟು ಮಾಡುಗುಂ

ಕಲಿಯನೆ ಪಂದೆಮಾಳ್ಪ ಕಡುಪಂದೆಯನೊಳ್ಗಲಿಮಾಳ್ಪ ತಕ್ಕನಂ
ಪೊಲೆಯನೆ ಮಾಳ್ಪ ಮುಂಪೊಲೆಯನಂ ನೆರೆತಕ್ಕನೆ ಮಾಳ್ಪ ತಮ್ಮೊಳ
ಗ್ಗಲಿಸಿ ಪೊದಳ್ದ ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿಸಂ
ಚಲಮದರಿಂದಮೋಲಗಿಸಿ ಬಾಳ್ವುದೆ ಕಷ್ಟಮಿಳಾಧಿನಾಥರಂ

# ರನ್ನ

## ಸಾಹಸಭೀಮ ವಿಜಯ

ಚಳಮತಿಯಾದೆ ನೀಂ ಜಡಧಿ ಸಂಭವೆಯಪ್ಪುದರಿಂ ಸರೋಜಸಂ
ಕುಳಜರಜದಿಂದೆ ನೀಂ ಪೊರೆದು ರಾಜಸದೊಳ್ ನೆಲಸಿರ್ದೆ ಗೋವುಗಾ
ದಳವರಿದಿರ್ದ ಕೃಷ್ಣನೊಡನಿರ್ದುದರಿಂದಮೆ ಗೋವಿಯಾದೆಯು
ಗ್ಗಳದ ವಿವೇಕಮಿಲ್ಲ ನಿನಗೆತ್ತ್ರಿವಾಪುರುಷಾಂತರಂಗಳಾ

ಕಲಿ ಪಂದೆಯೆಂದು ಬಗೆಯದೆ
ಕುಲಜಂ ಕುಲಹೀನನೆಂದು ಬಗೆಯದೆ ತರುಣಂ
ಸಲೆ ವೃದ್ಧನೆಂದು ಬಗೆಯದೆ
ನೆಲಸುವೆ ನಿನ್ನಿಂ ನಿಕೃಷ್ಟರೆಂಬರುಮೊಳರೇ

ಇರಿಯಿಸುವೆ ತಂದೆ ಮಕ್ಕಳ
ನಿರಿಯಿಸುವಯ್ ಸೋದರರ್ಕಳಂ ತಮ್ಮೊಳ್ ತ
ಳ್ತಿರಿಯಿಸುವಯ್ ಗುರು ಶಿಷ್ಯರ
ನರಗುಲಿ ನಿನ್ನಿಂ ನಿಕೃಷ್ಟರಾದರುಮೊಳರೇ

ಪೊಡೆವೆಡೆ ಪರಸದೆ ಬಿನ್ನವಿ
ಪೊಡೆ ಕೇಳದೆ ಮುಂದೆ ನಿಂದರಂ ಕಾಣದೆ ತ
ಕ್ಕೆಡೆಯೊಳ್ ಕಡೆಗಣಿಸುವ ನೃಪ
ವಿಡಂಬಮಿವು ಲಕ್ಷ್ಮಿ ನಿನ್ನ ದೂಸರಿನಲ್ತೆ

ಗುಣಿಗಳ ನೆರೆಪೊರ್ದದೆ ನಿ
ರ್ಗುಣರಂ ಪೊರ್ದುವೆ ವಿಶಿಷ್ಟರಂ ದುಷ್ಟರೊಳಂ
ಗಣಿಯಿಸಿ ಸಮನೆಂಬವಗುಣ
ಗಣಂಗಳಿವು ಲಕ್ಷ್ಮಿ ನಿನ್ನ ದೂಸರಿನಲ್ತೆ

ಮಲಿನರನೆ ಪೊರ್ದುವಯ್ ನಿ
ರ್ಮಲರತ್ತಲ್ ಪೊರ್ದಲೊಲ್ಲೆ ನೀಂ ಕನ್ನಡಿಯೊಳ್
ಜಲಮಿರ್ಪ ದೆಸೆಯೊಳಿರ್ದಾ
ಕಿಲುಂಬುಗೊಂಡಿರ್ದ ದೆಸೆಯೊಳಿರ್ದುದೆ ಪೇಳ್ಗುಂ

# ನಾಗವರ್ಮ

## ಕರ್ಣಾಟಕ ಕಾದಂಬರಿ

ಸಿರಿಯೆಂಬ ಸೊರ್ಕು ತಿಳಿಯದು
ಪರಿಣಾಮದಿನಂಜನಂಗಳಿಂದಮದೆಂತುಂ
ಪರಿಹರಿಸಲರಿದೆನಿಪ್ಪುದು
ಪರಮೈಶ್ವರ್ಯ ಪ್ರಭೂತ ತಿಮಿರಾಂಧತ್ವಂ

ಶಿಶಿರೋಪಚಾರದಿಂದಂ
ವಶಮಲ್ಲದು ತೀವ್ರಮಪ್ಪದಾಹಜ್ವರಮಂ
ಕುಶಸಾಧ್ಯಮದಿಂದ್ರಿಯ
ದಿಶಾಗಜಪ್ರಕರವೆಂದುಮವಿನಯಘನಿಯತಂ

ವಿಷಮವಿಷಂಗಳ್ಗಂ ಪ್ರತಿ
ವಿಷಮೆನಿಸುವ ಮಂತ್ರನಿಚಯದೊಳಮಾರ್ಗೆಂದುಂ
ವಿಷಯಮೆ ಮಾಣಿಸಲಿಂತೀ
ವಿಷಯ ವಿಷಾಸ್ವಾದ ಮೋಹಮಂ ನಿರ್ವಿಷಯಂ

ಅರಸಾಗಲೊಡಂ ಮೆಯ್ಮರೆ
ದು ರಾಜ್ಯಸುಖ ಸನ್ನಿಪಾತ ನಿದ್ರೆಯ ಕಯ್ಕೊಂ
ಡಿರಳುಂ ಪಗಲುಂ ಜಾಡ್ಯದೆ
ಮರವೆಟ್ಟೆಚ್ಚರುವರಲ್ಲವೆಂತುಂ ಭೂಪರ್

ವಾರಿಧಿಯೊಳ್ಮಂದರಗಿರಿ
ಘೋರನೆ ತಿರುಗುತ್ತಿರಲ್ಕೆ ಪುಟ್ಟಿದ ಬಹು ಸಂ
ಸ್ಕಾರಮದಿನ್ನುಂ ಬಿಡದವೊ
ಲೊಱಂತಿರೆ ಕೂಡೆ ಲಕ್ಷ್ಮಿ ತಿರ್ರನೆ ತಿರುಪಳ್

ಶ್ರುತಮಂ ಕಯ್ಕೊಳ್ಳಳಾಚಾರಮನವಧರಿಸಳ್ಸತ್ಯಂ ಬಾರ್ತೆಗೆಯ್ಯಳ್
ಮತಿಯಂ ಬೆಪ್ಪಂಡಿಪಳ್ ಲಕ್ಕಣಮನೆಣಿಸಳೌದಾರ್ಯಮಂ ಚಿಂತಿಸಳ್ಸಂ
ಗತಿಯುಂ ವಿಶ್ವಾಸಿಸಳ್ಸುಂದರತರವಪುವಂ ನೋಡಳೆಂದುಂ ವಿಶೇಷ
ಜ್ಞತೆಯಂ ತಾನೇತಕೆಂಬಳ್ಸಿರಿಯನರಿವುತುಂ ಬಣ್ಣಿಪಂ ಗಾಂಪನಲ್ತೇ

ಧೀರನಪ್ಪನುಮಂ ಹಾಸ್ಯ ಮಾಳ್ಪಳ್ಮರುಳೆಂಬಿನಂ ಪಾವೆಂದು ದಾಂಟುವಳಭಿಜಾತನಂ
ವೀರನರಿಗುಮೆಂದೊಲ್ಲಳುದಾರನಪ್ಪನಂ ಗಳಪನೆಂದಿಳಿಪಳ್ ಪುರುಡಿಂ
ಭಾರತೀಶನಂ ಸೋಂಕಳ್ ದಾನಿಯುಂ ಮುಟ್ಟಳಸ್ಪೃಶ್ಯನೆಂದುಂ ವಿನೀತನಂ
ದೂರದಿಂ ನೋಡಿ ಪಾತಕನಿವನೆಂದು ತಿಳಿದು ಪೋಗಳಿಂದಿರೆ ನಂಬದಿರ್

ಪೊಡೆದುದು ಗರವತಿಕೋಪದೆ
ಪಿಡಿದುದು ಪುಲಿ ಗಾಳಿ ಸೋಂಕಿದತ್ತು ಪಿಶಾಚಂ
ತೊಡರ್ದುದು ಭೂತಂ ಬನ್ನಂ
ಬಡಿಸಿದುದನೆ ಸಿರಿಯೊಳರಸುಗಳ್ಮೆಯ್ಯರಿಯರ್

ಜನಪತಿಗಳ್ ನೋಡಲ್ಕತಿ
ಮನೋಹರಾಕೃತಿಗಳಾಗಿಯುಂ ನಾಡೆ ಜಗ
ಜ್ಜನ ಸಂಕುಲಕ್ಕೆ ಪಿರಿದುಂ
ವಿನಾಶ ಹೇತುಗಳಕಾಲ ಫಲ ಕುಸುಮದವೊಲ್

ಗುರುವನಿದಿರಿಪುದೆ ನಿಜಪ್ರಭುತೆ ಜೂದು ವಿನೋದಂ ಕಳ್ಗುಡಿವುದೆ ವಿಲಾಸಂ
ಪಿರಿದು ಬೇಂಟೆಯಾಡುವುದೆ ಶಕ್ತಿಗೆ ಹೇತು ಕುಲವಧೂತ್ಯಾಗಮೆ ನಿರ್ವ್ಯಸನಂ
ನೆರೆದು ಪರದಾರರಂ ಕಳ್ವುದೆ ಚತುರತ್ವಂ ಸೊಕ್ಕುವುದೆ ಬಂಟತನವನ್ಯ
ರ್ಪರಿಭವಿಸಿದೊಡಂಜುವುದೆ ಸೈರಣೆ ತರಳತೆಯೆ ನೋಡುತ್ಸಾಹಮೆಂಬಧೂರ್ತರ್

# ದುರ್ಗಸಿಂಹ

## ಪಂಚತಂತ್ರ

ಪಡೆವೆನೆಂಬ ಪೊನ್ನನೆ ಪಡೆವುದು ಸರ್ವ ಪ್ರಕಾರದಿಂ ಪಡೆಯೆ ಪೊನ್ನಂ
ಪಡೆಯಲಾದುವಂತೊಂದುಪಾಯಂ ಪೆರವು ಮಾತೇಂ ಚದುರುಮಾರ್ತೀವ ಪೆಂಪು
ನುಡಿಯ ಬಲ್ಮೆಯುಂ ಕಡುಗಲಿತನಮುಂ ಸೌಭಾಗ್ಯಮುಮೊಂದಿದೊಳ್ಪು
ಮಾದುನ್ನತಿಯುಂ
ಪೊಡವೆಯಾದಂದು ತಮ್ಮಿಂದ ತಾವಕ್ಕು ಕಿಡುವುವು ಧನಮಿಲ್ಲದಂದಿವೆಲ್ಲ

ಕುಲಜನಪ್ಪನಂ ಕುಲಹೀನನೆಂದಪರ್ ಕುಲಹೀನನಂ ಕುಲಜಾತನೆಂಬರ್
ಕಲಿಯಂ ಕಡುಪಂದೆಯೆಂದು ಮಾತಾಡುವರ್ ಕಡುಪಂದೆಯ ಕಲಿಯೆಂದು ನುಡಿವರ್
ಪಲಬರ್ ಜೀಯೆನೆ ನನ್ನಿಯಂ ನುಡಿವನಂ ಪುಸಿಗನೆಂಬರ್ ಪುಸಿವಾತುಗನಂ
ನೆಲದೊಳೀತನೆ ಪುಸಿಯಿಲ್ಲದವನೆಂಬರರಸುಗಳಿದು ನೈಜ ಗುಣಮಾಗಿರ್ಕುಂ

ಒರ್ವನ ನಳ್ಗಿಪರೊರ್ವನ ಮುನ್ನಂ ಬಳಿಕ್ಕವನೊಳ್ಗುಣಂಗಳಂ
ಕೊರ್ವಿಪರೊರ್ವನಂ ನೋಡಿ ಸೈರಿಸದೆ ಪುರುಡಿಪಂತಿರೆ ಪೊರೆವರ್ ಮ
ತ್ತೊರ್ವನಂ ಮುನಿಸಿನೊಳ್ ಕಳೆವರಳ್ಕರಿಂದೊರ್ವನಂ ಕೂ
ರ್ತೊರ್ವನಂ ಕೂರದಂತಿರ್ಪರರಸುಗಳವಿಚಾರರಪ್ಪುದರಿಂ

ಹಿತವನತಿಭಕ್ತನನ್ವಿತನಿವಂ ಸುಭೃತ್ಯಂ
ಕೃತಕೃತ್ಯನೆನ್ನರ್ ಪಿಸುಣಿಂದೆ ಕಿಡಿಪರೀ
ಕ್ಷಿತಿಪತಿಗಳಿಂತವಿಚಾರದಿಂ

ಸಾಲದೆ ಸೋಲದೆ ಪೊಡೆದು
ಟ್ಟೋಲೈಸದೆ ನಿಚ್ಚವಯಣಮಿಲ್ಲದೆ ತನ್ನಿ
ರ್ದಾಲಯದೊಳಿರ್ದು ಬಾಳ್ವುದೆ
ಭೂಲೋಕಮನಾಳ್ವ ಸೊಗದಿನಗ್ಗಳಮಲ್ತೇ

# ನಯಸೇನ

## ಧರ್ಮಾಮೃತ

ನೆರೆದೆಲ್ಲರ್ ಕಳ್ಗುಡಿಯು
ತ್ತಿರೆ ಬಡವರ್ಗಲ್ಲಿ ಧರ್ಮಗಳ್ಳಂದೆರೆವರ್
ಧರೆಯೊಳಗದುವಂ ಧರ್ಮಮೆ
ನಿರುತಂ ಪೇಳಣ್ಣ ನೀನೆ ಭಾವಿಸಿ ಮನದೊಳ್

ಪೊಲೆಯರ್ ಭಾವಿಸುವೊಡೆದು
ಷ್ಕುಲರನುಪಮ ಶುದ್ಧ ವೃತ್ತಿಯೊಳ್ನಡೆವೊಡೆ ಭೂ
ತಲಮೆಲ್ಲಂ ಬಣ್ಣಿಸುವುದು
ಕುಲದಿಂದಂ ಧರ್ಮಮಧಿಕಮೆಂದರಿಪುವವೊಲ್

ಪೆಸರುಂ ರೂಪುಂ ನುಡಿಯುಂ
ವಸುಮತಿಯೊಳ್ ಕೇಳ ಮಾನಿಸರ್ಗೆಲ್ಲಂ ಭಾ
ವಿಸುವೊಡೆ ಸಮಾನಮನಿತರೊ
ಳ್ ಸಮಾನರೆ ಮನುಜರಣ್ಣ ಕೀಳ್ಮೇಲಿಲ್ಲಾ

ಸುರಲೋಕ ಸುಖದಿಂ ತಪದಿಂ
ದೊರೆಕೊಳ್ಗೆಂದೋದು ಪೇಳ್ವುದಲ್ಲದೆ ಸತ್ತರ್
ಸುರಗತಿಯಾದಂ ಬಂದೊ
ಪ್ಪಿರೆ ಪೇಳ್ದರೆ ನೀಮದೇಕೆ ಪರಮುಂಟೆಂಬಿರ್

ಉರಗನ ವಿಷಮೇರಿದರುಂ
ಸಿರಿಯುಳ್ಳರುಮದ್ದು ಗುಣಿಕೆಯಂ ತಿಂದವರುಂ
ಪಿರಿದುಂ ಪಿತ್ತಾಧಿಕರುಂ
ಧರೆಯೊಳ್ ವೈಯ್ಯರಿಯರೆಂಬ ನುಡಿ ತಪ್ಪುಗುಮೇ

# ವಚನಗಳು

## ಕೊಂಡಗುಳಿ ಕೇಶಿರಾಜ

ಪೊಡವಿಯೊಳನ್ಯರ ಪೊಗಳ್ವ
ನುಡಿಗಳ ಕಲಿತೊಡಲ ಹೊರೆವ ಕರ್ಮಾತುರದೊಳ್
ಕಿಡಿಪ ವಿಧಿವಶವ ಕಳೆವೊಡೆ
ಮೃಡ ಜಪಮೆಮಗೋಂ ನಮಃ ಶಿವಾಯೆಂಬ ಪದಂ

ವಾರ ತಿಥಿ ಲಗ್ನ ಶುಭದಿನ
ತಾರಾಬಲ ಚಂದ್ರಬಲ ನವಗ್ರಹಬಲಗಳ
ಸೇರಿ ಶುಭವಶುಭ ಶಕುನವ
ಹಾರದ ಮೂವತ್ನಾಲ್ಕನೆಯ ಶೀಲವದುಂ

ಶಿವರಾತ್ರಿ ಶಂಕುರಾಂತಿಯು
ಶಿವದಾರಂ ಏಕಭುಕ್ತವುಪವಾಸಗಳು
ಶಿವಪಥಗಳಲ್ಲವೆಂದವ
ತವೆ ಬಿಟ್ಟರೆ ಮೂವತ್ತಾರನೆಯ ಶೀಲವದುಂ

ಹರಿದು ಶಿವತೀರ್ಥವೆಂದುಂ
ಇರುವಲ್ಲಿಗೆ ಹೋಗಿ ಪಾಪವೆಲ್ಲಕೆನಿಂದುಂ
ನರಕವ ತಾನೇಮುಂದುಂ
ನೆರೆಯುದಿರಲ್ಮೂವತ್ತೆಂಟನೆಯುದಿದೆಂದುಂ

# ಜೇಡರ ದಾಸಿಮಯ್ಯ

ಮೊಲೆ ಮುಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮನು
ಗಂಡೂ ಅಲ್ಲ ಹೆಣ್ಣೂ ಅಲ್ಲ ಕಾಣಾ ರಾಮನಾಥ

ಮಂಡೆಯ ಬೋಳಿಸಿಕೊಂಡು ನುಡಿದು
ಗೋಷ್ಠಿಯ ಕಟ್ಟಿದಡೇನು ?
ಕಂಡ ಕಂಡವರಿಗೆ ಕೈಯೊಡ್ಡಿ
ಬೇಡುವ ಭಂಡರನೊಲ್ಲ ನಮ್ಮ ರಾಮನಾಥ

ಒಡಲುಗೊಂಡವ ಹಸಿವ ಒಡಲುಗೊಂಡವ ಹುಸಿವ
ಒಡಲುಗೊಂಡವನೆಂದು ನೀನೆನ್ನ ಜಡಿದೊಮ್ಮೆ ನುಡಿಯದಿರಾ
ನೀನೆನ್ನಂತೊಮ್ಮೆ ಒಡಲುಗೊಂಡು ನೋಡಾ ರಾಮನಾಥ

ನಿಡಿದೊಂದು ಕೋಲನು ಕಡಿದು ಎರಡು ಮಾಡಿ, ಅಡಿಯ
ಹೆಣ್ಣು ಮಾಡಿ, ಒಡೆತನವ ಗಂಡು ಮಾಡಿ ನಡುವೆ
ಹೊಸೆದಡೆ ಹುಟ್ಟಿದ ಕಿಚ್ಚು ಹೆಣ್ಣೋ ಗಂಡೋ ರಾಮನಾಥ

ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಇದ್ದಿತ್ತೇ ?
ಒಡೆಯರ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ ?
ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೇ ಪ್ರಾಣದಲ್ಲಿ
ಹಿಡಿಗೋಲ ? ನೀ ತೊಡಕಿಕ್ಕಿದ ತೊಡಕನೀ ಲೋಕದ
ಜಡರೆತ್ತಬಲ್ಲರೈ ರಾಮನಾಥ ?

ಹಸಿವೆಂಬ ಹೆಬ್ಬಾವು ಬಸಿರ ಬಂದು ಹಿಡಿದಡೆ ವಿಷವೇರಿತ್ತಯ್ಯಾ
ಆಪಾದಮಸ್ತಕಕ್ಕೆ. ಹಸಿವಿಗನ್ನವಿಕ್ಕಿ ವಿಷವನಿಳುಹ ಬಲ್ಲಡೆ
ವಸುಧೆಯೊಳಗಾತನೇ ಗಾರುಡಿಗ ಕಾಣಾ ರಾಮನಾಥ

ಹೊಲೆಯರ ಬಾವಿಯಲೊಂದು ಎಲು ನಟ್ಟಿದ್ದರೆ
ಹೊಲೆ ಹೊಲೆ ಎಂಬುದೀ ಲೋಕವೆಲ್ಲ.
ಹಲವೆಲುವಿದ್ದ ಬಾಯಲ್ಲಿ ಒಲವರವ ನುಡಿದಡೆ
ಅದು ಹೊಲೆಯರ ಬಾವಿಯಿಂದ ಕರಕಷ್ಟ ಕಾಣಾ ರಾಮನಾಥ

## ಮಾದಾರ ಚೆನ್ನಯ್ಯ

ನಡೆ ನುಡಿ ಸಿದ್ಧಾಂತವಾದಲ್ಲಿ ಕುಲಹೊಲೆಸೂತಕವಿಲ್ಲ
ನುಡಿಲೇಸು ನಡೆಯಧಮವಾದಲ್ಲಿ
ಅದೆ ಬಿಡುಗಡೆ ಇಲ್ಲದ ಹೊಲೆ
ಕಳವು ಪರದ್ವಾರಂಗಳಲ್ಲಿ ಹೊಲಬನರಿಯದೆ
ಕೆಟ್ಟು ನಡೆವುತ್ತ ಮತ್ತೆ ಕುಲಜರೆಂಬ ಒಡಲವರುಂಟೆ ?
ಆಚಾರವೇ ಕುಲ, ಅನಾಚಾರವೇ ಹೊಲೆ
ಇಂತೀ ಉಭಯ ತಿಳಿದರಿಯಬೇಕು
ಕೈಯುಳಿಕತ್ತಿ ಅಡೆಗುಂಟಕ್ಕಡಿಯಾಗಬೇಡ
ಅರಿ ನಿಜಾತ್ಮ ರಾಮರಾಮನಾ

ಸಾಂಖ್ಯ ಶ್ವಪಚ, ಅಗಸ್ತ್ಯ ಕಬ್ಬಿಲ, ದೂರ್ವಾಸ ಮುಚ್ಚಿಗ
ದಧೀಚಿ ಕೀಲಿಗ, ಕಸ್ಯಪ ಕಮ್ಮರ, ರೋಮಜ ಕಂಚುಗಾರ
ಕೌಂಡಲ್ಯ ನಾವಿದನೆಂಬುದನರಿದು
ಮತ್ತೆ ಕುಲವುಂಟೆಂದು ಛಲಕ್ಕೆ ಹೋರಲೇತಕ್ಕೆ ?
ಇಂತೀ ಸಪ್ತ ಋಷಿಯರುಗಳೆಲ್ಲರೂ
ಸತ್ಯದಿಂದ ಮುಕ್ತರಾದುದನರಿಯದೆ
ಅಸತ್ಯದಲ್ಲಿ ನಡೆದು ವಿಪ್ರರು ನಾವು ಘನರೆಂದು
ಹೋರುವ ಹೊತ್ತುಹೋಕರ ಮಾತೇತಕ್ಕೆ ?
ಕೈಯುಳಿಕತ್ತಿ ಅಡೆಗುಂಟಕ್ಕಡಿಯಾಗಬೇಡ
ಅರಿ ನಿಜಾತ್ಮ ರಾಮರಾಮನಾ

# ಅಲ್ಲಮಪ್ರಭು

ಮಣಿಯನೆಣಿಸಿ ದಿನವ ಕಳೆಯಬೇಡ, ಕಣಿಯ
ಪೂಜಿಸಿ ದಿನವು ಕಳೆಯಲು ಬೇಡ, ಕ್ಷಣವಾದರೂ
ನಿಜದ ನೆನಹೇ ಸಾಕು. ಕ್ಷಣದೊಳಗಣ ಅರ್ಧವಾದರೂ
ನಿಜದ ನೆನಹೇ ಸಾಕು. ಬೆಂಕಿಯೊಳಗುಳ್ಳ ಗುಣ ಬಿಸಿ
ನೀರೊಳಗುಂಟೆ ಗುಹೇಶ್ವರಾ

ಇಷ್ಟ ಲಿಂಗಕ್ಕೆ ತೋರಿ ಮೃಷ್ಟಾನ್ನವ ಹೊಡೆದವರಿಗೆ
ನಿಮಗೆಲ್ಲಿಯದೋ ಇಷ್ಟಾರ್ಥ ಸಿದ್ಧಿ ? ಅದೆಲ್ಲಿಹುದೋ
ಲಿಂಗ? ಅದೆಲ್ಲಿಹುದೋ ಜಂಗಮ ? ಅದೆಲ್ಲಿಹುದೋ
ಪ್ರಸಾದ ಪಾದೋದಕ ? ಅಲ್ಲದ ಆಟವ ಮಾಡಿ
ಎಲ್ಲರೂ ಮುಂದುಗೆಟ್ಟರು ಗುಹೇಶ್ವರಾ ನಿಮ್ಮಾಣೆ

ಹಾಲ ನೇಮದ ಹಿಡಿದಾತ ಬೆಕ್ಕಾಗಿ ಹುಟ್ಟುವ,
ಕಡಲೆಯ ನೇಮವ ಹಿಡಿದಾತ ಕುದುರೆಯಾಗಿ ಹುಟ್ಟುವ,
ಅಗ್ಘವಣಿಯ ನೇಮವ ಹಿಡಿದಾತ ಕಪ್ಪೆಯಾಗಿ ಹುಟ್ಟುವ,
ಪುಷ್ಪದ ನೇಮವ ಹಿಡಿದಾತ ತುಂಬಿಯಾಗಿ ಹುಟ್ಟುವ,
ಇವು ಷಟ್ಸ್ಥಲಕ್ಕೆ ಹೊರಗು. ಭಕ್ತಿ ನಿಷ್ಠೆಯಿಲ್ಲದವರ ಕಂಡಡೆ
ಮೆಚ್ಚ ಗೋಹೇಶ್ವರ

ದೇಹದೊಳಗೆ ದೇವಾಲಯವಿದ್ದು, ಮತ್ತೆ ಬೇರೆ
ದೇವಾಲಯವೇಕೆ? ಎರಡಕ್ಕೆ ಹೇಳಲಿಲ್ಲಯ್ಯ
ಗೊಹೇಶ್ವರ ನೀನು ಕಲ್ಲಾದರೆ ನಾನೇನಪ್ಪೆನು ?

ಪೃಥ್ವಿಗೆ ಹುಟ್ಟಿದ ಶಿಲೆ, ಕಲ್ಲು ಕುಟಿಕಂಗೆ ಹುಟ್ಟಿದ ಮೂರುತಿ
ಮಂತ್ರಕ್ಕೆ ಲಿಂಗವಾಯಿತ್ತಲ್ಲಾ. ಈ ಮೂವರಿಗೆ
ಹುಟ್ಟಿದ ಮಗನ ಲಿಂಗವೆಂದು ಕೈವಿಡಿವ
ಅಚ್ಚ ವ್ರತಗೇಡಿಗಳನೇನೆಂಬೆ ಗುಹೇಶ್ವರಾ

# ಬಸವಣ್ಣ

ವ್ಯಾಸ ಬೋಯಿತಿಯ ಮಗ ಮಾರ್ಕಂಡೇಯ ಮಾತಂಗಿಯ ಮಗ
ಮಂಡೋದರಿ ಕಪ್ಪೆಯ ಮಗಳು !
ಕುಲವನರಸದಿರಿಂ ಭೋ, ಕುಲದಿಂದ ಮುನ್ನೇನಾದಿರಿಂ ಭೋ
ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ,
ಕಶ್ಯಪ ಕಮ್ಮಾರ, ಕೌಂಡನ್ಯನೆಂಬ ಋಷಿ
ಮೂರು ಭುವನವರಿಯೆ ನಾವಿದ ಕಾಣಿಂ ಭೋ !
ನಮ್ಮ ಕೂಡಲ ಸಂಗನ ವಚನವಿಂತೆಂದುದು
ಶ್ವಪಚೋಪಿಯಾದರೇನು, ಶಿವಭಕ್ತನೇ ಕುಲಜನು

ಕಿಚ್ಚು ದೈವವೆಂದು ಹವಿಯನಿಕ್ಕುವ
ಹಾರುವನ ಮನೆಯಲ್ಲಿ ಕಿಚ್ಚೆದ್ದು ಸುಡುವಾಗ
ಬಚ್ಚಲನೀರ ಬೀದಿಯ ದೂಳ ಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯಾ
ಕೂಡಲಸಂಗಮದೇವಾ,
ವಂದನೆಯ ಮರೆದು ನಿಂದಿಸುತಿರ್ದರಯ್ಯಾ

ವೇದಕ್ಕೊರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ
ತರ್ಕದ ಬೆನ್ನ ಬಾರನೆತ್ತುವೆ. ಆಗಮದ ಮೂಗ
ಕೊಯ್ಯುವೆ ನೋಡಯ್ಯ, ಮಹಾದಾನಿ ಕೂಡಲ
ಸಂಗಮದೇವ ಮಾದಾರ ಚನ್ನಯ್ಯನ ಮನೆಯ
ಮಗ ನಾನಯ್ಯಾ

ಉತ್ತಮ ಕುಲದಲ್ಲಿ ಹುಟ್ಟಿದನೆಂಬ ಕಷ್ಟತನದ ಹೊರೆಯ
ಹೊರಿಸದಿರಯ್ಯ, ಕಕ್ಕಯ್ಯಗೊಕ್ಕುದನಿಕ್ಕ ನೋಡಯ್ಯ
ದಾಸಯ್ಯ ಶಿವದಾನವ ಎರೆಯ ನೋಡಯ್ಯ. ಮನ್ನಣೆಯ
ಚನ್ನಯ್ಯನೆನ್ನುವ ಮನ್ನಿಸ. ಉನ್ನತ ಮಹಿಮ ಕೂಡಲ
ಸಂಗಮದೇವಾ ಶಿವಧೋ....ಶಿವಧೋ....
ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನು
ಒಂದೇ ಎಂದು ನಂಬುವುದೆನ್ನ ಮನವು

ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು
ಎಲೆ ಹೋತೆ ಅಳು ಕಂಡಾ !
ವೇದವನೋದಿದವರ ಮುಂದೆ ಅಳು ಕಂಡಾ
ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡಾ !
ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವಾ

ಹಾವು ತಿಂದವರ ನುಡಿಸಬಹುದು ; ಗರ ಹೊಡದವರ
ನುಡಿಸಬಹುದು. ಸಿರಿಗರ ಹೊಡೆದವರ
ನುಡಿಸಲು ಬಾರದು ನೋಡಯ್ಯಾ ! ಬಡತನವೆಂಬ
ಮಂತ್ರವಾದಿ ಹೊಗಲು ಒಡನೆ ನುಡಿವರು
ಕೂಡಲ ಸಂಗಮದೇವಾ.

ನ್ಯಾಯ ನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ
ಲೋಕ ವಿರೋಧಿ, ಶರಣನಾರಿಗಂಜುವನಲ್ಲ,
ಕೂಡಲ ಸಂಗಮದೇವರ ರಾಜತೇಜದಲ್ಲಿಪ್ಪನಾಗಿ

ಸೆಟ್ಟಿಯೆಂಬೆನೆ ಸಿರಿಯಾಳನ? ಮಡಿವಾಳನೆಂದೆಂಬೆನೆ
ಮಾಚಯ್ಯನ ? ಡೋಹಾರನೆಂದೆಂಬೆನೆ
ಕಕ್ಕಯ್ಯನ ? ಮಾದಾರನೆಂದೆಂಬೆನೆ ಚನ್ನಯ್ಯನ ?
ಆನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯಾ

ನೆಲವೊಂದೆ ಹೊಲಗೇರಿ ಶಿವಾಲಯಕ್ಕೆ
ಜಲವೊಂದೆ ಶೌಚಾಚಮನಕ್ಕೆ
ಕುಲವೊಂದೆ ತನ್ನ ತಾನರಿದವಂಗೆ
ಫಲವೊಂದೆ ಷಡುದರುಶನ ಮುಕ್ತಿಗೆ
ನಿಲವೊಂದೆ ಕೂಡಲ ಸಂಗಮದೇವಾ ನಿಮ್ಮನರಿದವಂಗೆ

ಹಾವಾಡಿಗನು ಮೂಕೊರತಿಯು ತನ್ನ ಕೈಯಲ್ಲಿ ಹಾವು
ಮಗನ ಮದುವೆಗೆ ಶಕುನವ ನೋಡ ಹೋಹಾಗ,

ಇದಿರಲ್ಲೊಬ್ಬ ಮೂಕೊರತಿಯ ಹಾವಾಡಿಗನ ಕಂಡು
ಶಕುನ ಹೊಲ್ಲೆಂಬ ಚದುರನ ನೋಡಾ. ತನ್ನ
ಸತಿ ಮೂಕೊರತಿ, ತನ್ನ ಕಯ್ಯಲ್ಲಿ ಹಾವು, ತನ್ನ
ಖಿನ್ನತೆಯನರಿಯದೆ ಅನ್ಯರನೆಂಬ ಕುನ್ನಿಯನೇನೆಂಬ
ಕೂಡಲ ಸಂಗಮದೇವ

ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ
ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರ ಲೇಸಯ್ಯಾ
ತಾರೌ ಅಗ್ಗವಣಿಯ ನೀಡೌ ಪತ್ರಿಯ, ಲಿಂಗಕ್ಕೆ
ಬೋನವ ಹಿಡಿಯೌ ಎಂಬರು ಕೂಡಲ ಸಂಗನ
ಮಹಾ ಮನೆಯಲ್ಲಿ ಒಕ್ಕುದನುಣ್ಣೌ ತೊತ್ತೆ ಎಂಬರು

ಆದಿಪುರಾಣ ಅಸುರರಿಗೆ ಮಾರಿ
ವೇದ ಪುರಾಣ ಹೋತಿಂಗೆ ಮಾರಿ
ರಾಮ ಪುರಾಣ ರಕ್ಕಸರಿಗೆ ಮಾರಿ
ಭಾರತ ಪುರಾಣ ಗೋತ್ರಕ್ಕೆ ಮಾರಿ
ಎಲ್ಲಾ ಪುರಾಣ ಕರ್ಮಕ್ಕೆ ಮೊದಲು
ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲಾ ಕೂಡಲ ಸಂಗಮದೇವಾ

# ಮಡಿವಾಳ ಮಾಚಯ್ಯ

ಅಯ್ಯಾ ನಾವು ಪರಮವಿರಕ್ತರು ಪಟ್ಟದೊಡೆಯರು
ಅತೀತ ಚರಮೂರ್ತಿಗಳೆಂದು, ಗಿಳಿಲು ದಂಡಾಗ್ರವ
ಪಿಡಿದು ಕಾವಿ ಕಾಷಾಯಾಂಬರವ ಹೊದ್ದು, ಮಹಾಘನಲಿಂಗ
ಚರಮೂರ್ತಿಗಳೆಂದು ಚೆನ್ನಾಗಿ ನುಡಿದುಕೊಂಡು, ತೊನ್ನ
ಹೊಲೆಮಾದಿಗ ಪ್ರಸಂಗಕ್ಕೆ ಮನವೆಳಸದೆ, ಮುಖವೆತ್ತಿ ನೋಡದೆ
ಶಬ್ದಮುಗ್ಧನಾಗಿ ಸುಮ್ಮನೆ ಕುಳಿತಿರ್ದನು ಕಾಣಾ ನಿಮ್ಮ ಶರಣ
ಅದೇನು ಕಾರಣವೆಂದಡೆ
ತನ್ನ ತಾನಾರೆಂದರಿಯದೆ ತನ್ನ ಇಷ್ಟಮಹಾಘನಲಿಂಗದ
ಗೊತ್ತಮುಟ್ಟದೆ, ತನುಮನಧನವೆಂಬ ತ್ರಿವಿಧ ಪದಾರ್ಥವನರ್ಪಿಸಿ
ತ್ರಿವಿಧ ಪ್ರಸಾದವ ಗರ್ಭೀಕರಿಸಿಕೊಂಡ ಪ್ರಸನ್ನ
ಪ್ರಸಾದವ ಸ್ವೀಕರಿಸಿ, ಪರತತ್ವ ಪ್ರಾಸಾದಮೂರ್ತಿ ತಾನಾಗಲರಿಯದೆ
ಉಚ್ಚಂಗಿ ದುರ್ಗಿಗೆ ಬಿಟ್ಟ ಪೋತರಾಜನಂತೆ,
ಮಾರುಮಾರು ಜಡೆಮುಡಿ ಗಡ್ಡಗಳ ಬಿಟ್ಟುಕೊಂಡು,
ಡೊಂಬಜಾತಿಕಾರರಂತೆ ವೇಷವ ತೊಟ್ಟು, ಸಂಸ್ಕೃತಾದಿ ನಾನಾ
ಶಾಸ್ತ್ರವ ಹೇಳಿ ಸುಡುಗಾಡ ಸಿದ್ಧಯ್ಯಗಳಂತೆ ಕುಟಿಲ
ಕುಹಕ ಯಂತ್ರ ತಂತ್ರಗಳ ಕಟ್ಟುತ, ಪುರಜನರ ಮೆಚ್ಚಿಸಬೇಕೆಂದು
ಅಯ್ಯ, ನಾವು ಕೆರೆಬಾವಿ ಮಠಮಾನ್ಯ
ಮದುವೆ ಮಾಂಗಲ್ಯ ದೀಕ್ಷೆ ಪಟ್ಟ ಪ್ರಯೋಜನ ಔತಣ
ಅನ್ನಕ್ಷೇತ್ರ ಅರವಟ್ಟಿಗೆ ದಾಸೋಹ ಪುರಾಣ ಪುಸ್ತಕ
ಮಾಡಿಸಬೇಕೆಂದು, ಗುರು ಲಿಂಗ ಜಂಗಮಕ್ಕಲ್ಲದ
ನಿರಾಭಾರಿ ವೀರಶೈವಕ್ಕೆ ಹೊರಗಾಗಿ, ದುರಾಸೆ ಮುಂದುಗೊಂಡು
ನಾನಾ ದೇಶವ ತಿರುಗಿ, ಹುಸಿಯ ಬೊಗಳಿ, ವ್ಯಾಪಾರದ
ಮರೆಯಿಂದ ನಡು ಊರ ಬೀದಿ ನಡುವೆ ಕುಳಿತು
ಪರರೊಡವೆಯ ಅಪಹರಿಸುತ, ಸೆಟ್ಟಿ ಮುಂತಾದ ಸಮಸ್ತ
ಕಳ್ಳರ ಮಕ್ಕಳ ಕಾಡಿಬೇಡಿ, ಅವರು ಕೊಟ್ಟರೆ ಹೊಗಳಿ
ಕೊಡದಿರ್ದಡೆ ಬೊಗಳಿ, ಆ ಭ್ರಷ್ಟ ಹೊಲೆಮಾದಿಗರು
ಕೊಟ್ಟ ದ್ರವ್ಯಗಳ ಕೊಂಡು ಬಂದು ಚೋರರೊಯ್ದರೆಂದು
ಮಠದೊಳಗೆ ಮಡಗಿಕೊಂಡು, ಇಂತಹ ದುರ್ಗುಣ
ದುರಾಚಾರಿಗಳ ಶ್ರೀಗುರುಲಿಂಗ ಜಂಗಮವೆಂದು

ಕರೆತಂದು ತೀರ್ಥಪ್ರಸಾದವ ತೆಗೆದುಕೊಂಬವರಿಗೆ
ಇಪ್ಪತ್ತೆಂಟು ಕೋಟಿ ಯುಗ ಪರಿಯಂತರದಲ್ಲಿ
ನರಕಕೊಂಡದಲ್ಲಿಕ್ಕುವ ಕಾಣಾ ನಮ್ಮ ಶರಣ ಕಲಿದೇವರ ದೇವ.

ವೇದ ವಿಪ್ರರ ಬೋಧೆ. ಶಾಸ್ತ್ರ ಸಂತೆಯ ಮಾತು.
ಪುರಾಣ ಪುಂಡರ ಗೋಷ್ಠಿ. ಆಗಮ ಅನೃತದ ನುಡಿ.
ತರ್ಕವ್ಯಾಕರಣ ಕವಿತ್ವ ಪ್ರೌಢಿಮೆ.
ಇದು ಕಾರಣ ತನ್ನೊಳಗನರಿದ ಅನುಭವದಿಂದ
ಘನವಿಲ್ಲೆಂದ ಕಲಿದೇವರ ದೇವ.

# ಅಂಬಿಗರ ಚೌಡಯ್ಯ

ದೊಡ್ಡ ದೊಡ್ಡ ಶೆಟ್ಟಿಗಳ ಕಂಡು
ಅಡ್ಡಗಟ್ಟಿ ಹೋಗಿ ಶರಣಾರ್ಥಿ ಎಂಬ
ಎಡ್ಡುಗಳ್ಳತನಕ್ಕೆ ತಮ್ಮ ಮಠಕ್ಕೆ ಬನ್ನಿ ಹಿರಿಯರೇ ಎಂಬರು
ಹೋಗಿ ಶರಣಾರ್ಥಿ ಭಕ್ತನೆಂದೊಡೆ ಕೇಳದ ಹಾಗೆ
ಅಡ್ಡ ಮೋರೆಯನಿಕ್ಕಿಕೊಂಡು ಸುಮ್ಮನೆ ಹೋಗುವ
ಹೆಡ್ಡ ಮೂಳರಿಗೆ ದುಡ್ಡೇ ಪ್ರಾಣವಾಯಿತ್ತು
ದುಡ್ಡಿಸ್ತರ ಕುರುಹರಿಯದೆ ಮೊಳ ಪಾದದ ಮೇಲೆ
ಹೊಡ ಹೊಡಕೊಂಡು ನಗುತಿರ್ದಾತ ನಮ್ಮ ಅಂಬಿಗರ ಚೌಡಯ್ಯ

ಕಂಥೆ ತೊಟ್ಟವ ಗುರುವಲ್ಲ
ಕಾವಿಹೊತ್ತವ ಜಂಗಮನಲ್ಲ
ಶೀಲ ಕಟ್ಟಿದವ ಶಿವಭಕ್ತನಲ್ಲ
ನೀರು ತೀರ್ಥವಲ್ಲ
ಕೂಳು ಪ್ರಸಾದವಲ್ಲ
ಹೌದೆಂಬವನ ಬಾಯ ಮೇಲೆ
ಅರ್ಥಮಣದ ಪಾದರಕ್ಷೆಯ ತೆಗೆದುಕೊಂಡು
ಮೂಸಿ ಕಡಿಮೆಯಿಲ್ಲದೆ ತೂಗಿ ತೂಗಿ ಟೊಕಟೊಕನೆ
ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯ

ಶರಣಸತಿ ಲಿಂಗಪತಿ ಎಂಬರು
ಶರಣ ಹೆಣ್ಣಾದ ಪರಿ ಇನ್ನೆಂತು ? ಲಿಂಗ ಗಂಡಾದ ಪರಿ ಇನ್ನೆಂತು ?
ನೀರು ನೀರ ಕೂಡಿ ಬೆರೆದಲ್ಲಿ ಭೇದಿಸಿ ಬೇರೆ ಮಾಡಬಹುದೆ ?
ಗಂಡು ಹೆಣ್ಣು ಯೋಗವಾದಲ್ಲಿ
ಆತುರ ಹಿಂಗೆ ಘಟ ಬೇರಾಯಿತ್ತು
ಶರಣಸತಿ ಲಿಂಗಪತಿ ಎಂಬ ಮಾತು
ಮೊದಲಿಗೆ ಮೋಸ, ಲಾಭಕ್ಕಧೀನವುಂಟೆ ?
ಎಂದನಂಬಿಗ ಚೌಡಯ್ಯ

ಕುಲ ಹಲವಾದಡೇನು, ಉತ್ಪತ್ತಿ ಸ್ಥಿತಿಲಯ ಒಂದೇ ಭೇದ
ಮಾತಿನ ರಚನೆಯ ಬೇಕಾದಂತೆ ನುಡಿದಡೇನು? ಬಿಡುಮುಡಿಯಲ್ಲ
ಎರಡನರಿಯಬೇಕೆಂದನಂಬಿಗ ಚೌಡಯ್ಯ

## ಅಕ್ಕಮಹಾದೇವಿ

ವೇದ ಶಾಸ್ತ್ರ ಪುರಾಣಾಗಮಂಗಳೆಲ್ಲ ಕೊಟ್ಟಣವ ಕುಟ್ಟುತ್ತ
ನುಚ್ಚು ತೌಡು ಕಾಣಿಭೋ. ಇವಕುಟ್ಟಲೇಕೆ ?
ಅತ್ತಲಿತ್ತ ಹರಿವ ಮನದ ಶಿರವನರಿದಡೆ
ಬಚ್ಚ ಬರಿಯ ಬಯಲು ಚೆನ್ನಮಲ್ಲಿಕಾರ್ಜುನ

ಹಾವಿನ ಬಾಯ ಹಲ್ಲ ಕಳೆದು ಹಾವನಾಡಿಸಬಲ್ಲರೆ
ಹಾವಿನ ಸಂಗವೇ ಲೇಸು ಕಂಡಯ್ಯಾ
ಕಾಯ ವಿಕಾರವ ಕಳೆದು ಕಾಯದಲಿರ್ದರೆ
ಕಾಯದ ಸಂಗವೇ ಲೇಸು ಕಂಡಯ್ಯಾ
ತಾಯಿ ರಕ್ಕಸಿಯಾದಂತೆ ಕಾಯ ವಿಕಾರವು
ಚೆನ್ನಮಲ್ಲಿಕಾರ್ಜುನಯ್ಯ
ನೀನೊಲಿದವರು ಕಾಯಗೊಂಡಿರ್ದರೆನಬೇಡ

## ಸಿದ್ಧರಾಮ

ಕೃಷಿಯ ಮಾಡಿ ಉಣ್ಣದೆ, ಹಸಿವು ಹರಿವ ಪರಿ ಇನ್ನೆಂತೋ ?
ಕರ್ಮಯೋಗವ ಮಾಡದೆ ನಿರ್ಮಲ
ಸುಚಿತ್ತವನರಿವ ಪರಿ ಇನ್ನೆಂತೋ ?
ಬೇಯದ ಅಶನವನುಂಬ ಠಾವಾವುದು ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ

# ಚನ್ನಬಸವಣ್ಣ

ಉಂಬುವುದು ಉಡುವುದು ಶಿವಾಚಾರ, ಕೊಂಬುವುದು
ಕೊಡುವುದು ಕುಲಾಚಾರ ಎಂಬ ಅನಾಚಾರಿಯ ಮತ
ಕೇಳಲಾಗದು. ವಿಪ್ರ ಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರ ಒಂದೇ ಎಂದು ಕೊಟ್ಟು ಕೊಂಬುದೆ
ಸದಾಚಾರ, ಉಳಿದುವೆಲ್ಲ ಅನಾಚಾರ
ಕೂಡಲ ಚನ್ನ ಸಂಗಮದೇವಯ್ಯ

ಉದಯ ಮಧ್ಯಾಹ್ನ, ಸಂಧ್ಯಾಕಾಲವ ನೋಡಿ ಮಾಡುವ
ಕರ್ಮಿ ನೀಕೇಳಾ. ಉದಯವೆಂದೇನೋ ಶರಣಂಗೆ? ಮಧ್ಯಾಹ್ನ
ವೆಂದೇನೋ ಶರಣಂಗೆ? ಅಸ್ತಮಾನವೆಂದೇನೋ ಶರಣಂಗೆ?
ಮಹಾಮೇರುವಿನ ಮರೆಯಲಿದ್ದು ನೆಳಲನರಸುವ ಭಾವಭ್ರಮಿತರ
ಮೆಚ್ಚ ಕೂಡಲ ಚನ್ನಸಂಗಮದೇವ

## ಕಾಳವ್ವೆ

ಕುರಿ ಕೋಳಿ ಕಿರು ಮೀನು ತಿಂಬರಿಗೆಲ್ಲ ಕುಲಜ ಕುಲಜರೆಂಬರು
ಶಿವಗೆ ಪಂಚಾಮೃತ ಕರೆವ ಪಶುವ ತಿಂಬ ಮಾದಿಗ ಕೀಳುಜಾತಿಯೆಂಬರು
ಅವರೆಂತು ಕೀಳುಜಾತಿಯಾದರು ಜಾತಿಗಳು
ನೀವೇಕೆ ಕೀಳಾಗಿರೋ ?

## ರೇವಮ್ಮ

ಲಿಂಗ ಬಾಹ್ಯನ, ಆಚಾರ ಭ್ರಷ್ಟನ ವ್ರತ ತಪ್ಪುಕನ
ಗುರುಲಿಂಗ ಜಂಗಮನ ಕೊಂದವನ, ಪಾದೋದಕ ಪ್ರಸಾದ ದೂಷಕನ,
ವಿಭೂತಿ ರುದ್ರಾಕ್ಷಿ ನಿಂದಕನ ಕಂಡಡೆ
ಶಕ್ತಿಯುಳ್ಳಡೆ ಸಂಹಾರವ ಮಾಡುವುದು
ಶಕ್ತಿಯಿಲ್ಲದಿದ್ದಡೆ ಕಣ್ಣು ಕರ್ಣವ ಮುಚ್ಚಿಕೊಂಡು ಶಿವಮಂತ್ರವ ಜಪಿಸುವುದು
ಅಷ್ಟೂ ಆಗದಿದ್ದಡೆ, ಆ ಸ್ಥಳವ ಬಿಡುವುದು
ಅದಲ್ಲದಿದ್ದಡೆ, ಕುಂಭೀಪಾತಕನಾಯಕ ನರಕದಲ್ಲಿಕ್ಕುವ
ಶ್ರೀ ಗುರುಸಿದ್ಧೇಶ್ವರನು.

## ಆಯ್ದಕ್ಕಿ ಮಾರಯ್ಯ

ಕಾಯಕದಲ್ಲಿ ನಿರತನಾದೊಡೆ ಗುರುದರುಶನವಾದಡೂ
ಮರೆಯಬೇಕು ; ಲಿಂಗ ಪೂಜೆಯಾದರೂ ಮರೆಯಬೇಕು
ಜಂಗಮ ಮುಂದಿದ್ದಡೂ ಹಂಗ ಹರಿಯಬೇಕು
ಕಾಯಕವೇ ಕೈಲಾಸವಾದ ಕಾರಣ,
ಅಮರೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು

# ಜನ್ನ

## ಯಶೋಧರ ಚರಿತೆ

ಪೋಂತಾದೆನಿಲ್ಲಿ ಸಗ್ಗದೊ
ಳೆಂತುಂಡಪೆನುಂಡ ಪಾರ್ವರೊಲಿದುದುಗೆಡೆವರ್
ಪೋಂತಂ ಕೊಂದು ದಿವಕ್ಕದು
ಮುಂತಾಗಿರೆ ಸಲ್ವೆಮೆಂಬರಿದನೇನೆಂದರ್

ಕಡಿದು ಕಿರಿಕಿರಿದನೆಲುವಂ
ಪುಡಿಗುಟ್ಟಿಸಿ ತೊವಲನುಗಿದು ಕರುಳ ತೊಡಕಂ
ಬಿಡಿಸಿನಡೆನೊಳ್ಪೊನೊಳಗೆ
ಲ್ಲಡಗಿರ್ಪುದು ಜೀವನಿರ್ಪೊಡೆಲ್ಲಿಗೆ ಪೋದಂ

ಕುದಿರೊಳ್ ಕಳ್ಳನನಿಕ್ಕಿಸಿ
ಸೊದೆಯಿಟ್ಟರೆ ಬಳಿದು ಬಳಿಕ ತೆರೆದೊಳಗಂನೋ
ಡಿದೆನಾತ್ಮನಿಲ್ಲ ತನು ವಿ
ರ್ಪುದು ಬೇರೆಂಬಾತ್ಮನಂ ನೆಲಂ ನುಂಗಿದುದೋ

ತೂಗಿಸಿ ತೊಲೆಯೊಳ್ ಬಾಯಂ
ಮೂಗುವುನಡೆಯೊತ್ತಿ ಕೊಂದಕಳ್ಳನ ದೇಹಂ
ತೂಗಿದೊಡೆ ಕುಂದದಾತ್ಮವಿ
ಭಾಗಂ ಬೇರಿಲ್ಲ ಜೀವನೆಂತುಂ ದೇಹಂ

## ಅನಂತನಾಥ ಪುರಾಣ

ನಗೆಗಂ ನಾಚದೆ ನಮ್ಮನೊಲ್ಲದೆ ಪರಸ್ತ್ರೀಗೊಲ್ದವಳ್ ಸತ್ತೊಡಾ
ಕೆಗೆ ತಾಂ ಪ್ರಾಣಮನಿತ್ತಪಂ ಗಡರಸಂ ನೋಡಕ್ಕ ಮಾವಿಂಗೆ ಮ
ಲ್ಲಿಗೆಗಳ್ ಕೂರ್ತೊಡೆ ಮಾವು ಕೂರ್ತುದು ವಸಂತಶ್ರೀಗೆನಿಪುಂತೆ ಲ
ಜ್ಜೆಗೊಡಲ್ ಮುಂಮಳಿವೋಪುದಿನ್ನುಳಿವಿದರ್ಕೇಗೆಯ್ವಮಬ್ಜೇಕ್ಷಣೇ

# ಬ್ರಹ್ಮಶಿವ

## ಸಮಯ ಪರೀಕ್ಷೆ

ಮತಿಗೆಟ್ಟೋರ್ವ್ವರನೋರ್ವ್ವರೆಚ್ಚರಿರಿದಕ್ಕೊಂದಕ್ಕೆಲರ್ಬಂಧು ಸಂ
ತತಿಯಂ ದೈತ್ಯರನೆಂಬ ಪಾತಕ ಕಥಾಳಾಪಂಗಳಂ ಪೇಳ್ವುದು
ಗ್ಗ್ರತಿಯೊಳ್ಬೀಳದೆ ಸರ್ವಜೀವಹಿತಮಂ ಸದ್ಭಾವದಿಂ ದೇವ ಸಂ
ಸ್ತುತಮಂ ಪೇಳ್ವುದು ಜೈನಧರ್ಮ ಕಥೆಯಂ ಲೋಕೈಕ ಮಾಂಗಲ್ಯಮಂ

ನರಪತಿ ಶಾಂತರಾಹನನ ಮಾಡಿದ ಕೋಟಿಗಳೆಲ್ಲ ನಾಡೊಳಂ
ಪಿರಿದೊಳವಂತೆ ರಾಮವೆಸರೋರ್ವ್ವ ನೃಪಂ ಧರೆಯಲ್ಲಿ ಮಾಡಿದೀ
ಶ್ವರನಿಳಯಂಗಳಂ ಬಿಡದೆ ಮಾಡಿಸಲಾಯುಗದಲ್ಲಿ ರಾಮ ನೀ
ಶ್ವರ ಭವನಂಗಳಂ ಧರೆಯೊಳೊಪ್ಪಿರೆ ಮಾಡಿದನೆಂಬರೇಳಿದರ್

ಯುಗದ ಕಡೆವರಗಮಿಪ್ಪವೆ
ಜಗದೊಳಗಿಟ್ಟಿಗೆಯ ಕಿರಿಯದೇಗುಲವೆಂತಿ
ಮ್ಮಗೆ ಪುಸಿವ ರೊಳರೆ ಮುನ್ನಿನ
ಯುಗದಾ ದೇಗುಲಮಿನಿತ್ತು ಕಿರಿಯವೆ ಪೇಳಿಂ

ತೊತ್ತಿರ ಬಂಟರ ಪಶುಗಳ
ಕತ್ತೆಯ ಕಿವಿ ಮೂಗನರಿವ ಪೀಡಿಪ ಬಿಡದಾ
ವೊತ್ತುಂ ಕೆಲಸಂಗೊಳ್ವನೆ
ಗಳ್ತಿಗಳಂ ನೆಗಳಲಂತುಮರಿಯಜ್ಜೆರ್ಯನರ್

ಕುಡುಗೋಲಂ ಕೂರಿಗೆಯುಂ
ಕೊಡಲಿ ಕುರಿಂಡಿಗೆಯನುಳುವ ಹರಗುವ ಕರಿಪಿಂ
ಬಿಡುವವಗಳ್ವಾ ಮುಟ್ಟಂ
ಕುಡರೆರವಂ ಪೆರರ್ಗೆ ಪಾಪಭೀತಜ್ಜೈರ್ನರ್

ತುಪ್ಪದೊಳಗೆಣ್ಣೆಯುಂ ಲೇ
ಸಪ್ಪಾ ಹೊನ್ನೊಳಗೆ ಬೆಳ್ಳಿಯುಂ ಧನದಳುಪಿಂ
ದುಪ್ಪಿನೊಳು ಮಣ್ಣನೆಂತುಂ
ತಪ್ಪಿಲ್ಲದೆ ನಡೆವನೆಂಬನಾಗಲ್ಲಿ ಬೆರಸಲ್

ಪಿರಿದಪ್ಪಕೋಲ್ಗಳಿಂದಂ
ಪಿರಿದೆನಿಸಿದ ಕೊಳಗದಿಂದ ಮುಂ ತಾಂ ಕೊಂಡಂ
ತಿರೆ ಪೆರರ್ಗೆ ಕುಡುಗೆ ಕುಂದಿಸಿ
ಪರದುಗೆಯುಲ್ಸಲ್ಲದೆಂದು ನೆಗಳ್ವಂ ಜೈನಂ

ಕುಲಹೀನಂಗೊಂದಂದಂ
ಕುಲಜಂಗೊಂದಂದಮುಕ್ಕುಮಾಚಾರಮುದೆಂ
ದೊಲರವಂ ಪೇಳ್ವುದು ನಿ
ಮ್ಮಳ ಧರ್ಮಮುದಲ್ಲ ಠಕ್ಕಮತಮೆಂಗರಿವಂ

ಹಿಮಕರನ ಹಿಮಾಂಶುಗಳು
ತ್ತಮ ಜಾತಿಗಮುಂತ್ಯ ಜಾತಿಗಂ ತಣ್ಪೆಂದಂ
ಸಮನಪ್ಪತೆರದಿ ನರನುಂ
ಸಮನಾಗಲ್‌ವೇಳ್ಕುಮಾವಜಾತಿಗಮೆಂತುಂ

ಪಾಲುತ್ತಮಂಗಮಾ ಚಾಂ
ಡಾಲಂಗಂ ಸೀಯನಪ್ಪ ತೆರನಿಂದರನುಂ
ಮೇಲಪ್ಪ ಜಾತಿಗಂ ಚಾಂ
ಡಾಲಂಗಮದೊಂದೆಯುಂದಮಾಗಲೆ ವೇಳ್ಕುಂ

# ಹರಿಹರ

## ಶತಕ

ಪೊಗೆಳೆಂ ಮಿಕ್ಕಿನ ಚಕ್ರಪಾಣಿ ಸರಸೀಜೋದ್ಭೂತ ಸಂಕ್ರಂದನಾ
ದಿಗಳಂ ತಾನೆನೆ ಮರ್ತ್ಯಕೀಟಕರ ಮಾತಂದಿರ್ಕೆ ಮತ್ತಾವನಂ
ಬಗೆದಾರೆಂ ಬಿಡದಾ ಹರಂಗೆ ಶಶಿಭೂಷಂಗೀಶ್ವರಂಗೆಯ್ದೆ ನಾ
ಲಗೆಯಂ ಮಾರಿದೆನೊಲ್ದು ಹಂಪೆಯ ವಿರೂಪಾಕ್ಷಂಗದೇನೆಂದಪೆಂ

ಮನುಜರ ಮೇಲೆ ಸಾವನರ ಮೇಲೆ ಕನಿಷ್ಠರ ಮೇಲೆಯಕ್ಕಟಾ
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ

ನರರಂ ಸೇವಿಸುತಯ್ಯ ಜೀಯೆನುತುಮಿರ್ಪೇನೆಂದೊಡಂ ದೈನ್ಯಮು
ಬ್ಬರಿಸುತ್ತುಂ ತನುಗುಂದಿಯುಂ ತನಗೆ ತಾನೆಂತಕ್ಕೆಯುಂ ಬೇಡುತಿ
ರ್ಪಿರವಂ ಸುಟ್ಟು ಬಿಸುಟ್ಟು ಭಕ್ತಿಯೊಳಗೋಲಾಡಲ್ ಮನಂದಂದು ಶಂ
ಕರನಂ ಶಾಶ್ವತನಂ ಕೃಪಾಜಲಧಿಯಂ ಕಂಡೆಂ ವಿರೂಪಾಕ್ಷನಂ

ಪೋಗೆನೆ ಪೋಪ ಬಾರೆಲವೊ ಬಾರೆನೆ ಜೀಯ ಹಸಾದವೆಂದು ಬೆ
ಳ್ಳಾಗುತೆ ಬರ್ಪ ಮಾಣೆಲವೊ ಸುಮ್ಮನಿರೆಂದೊಡೆ ಸುಮ್ಮನಿರ್ಪ ಮು
ತ್ತಾಗಳೆ ಝುಂಕಿಸಲ್ ನಡುಗಿ ಬೀಳುವ ಸೇವೆಯ ಕಷ್ಟವೃತ್ತಿಯಂ
ನೀಗಿದೆನಿಂದು ನಿಮ್ಮ ದೆಸೆಯಿಂ ಕರುಣಾಕರ ಹಂಪೆಯಾಳ್ದನೇ

# ರಾಘವಾಂಕ

## ಹರಿಶ್ಚಂದ್ರ ಕಾವ್ಯ

ಪಾವನಕ್ಷೀರವುಂ ಕೊಡುವ ಕೆಚ್ಚಲ ಮಾಂಸ
ವಾವಲೇಸಿನಿದುಳ್ಳ ಮಧುವನೊಸೆದೀವನೊಳ
ವಾವಲೇಸಧಿಕ ಕಸ್ತೂರಿಯುಂ ಕೊಡುವ ಮೃಗನಾಭಿ ತಾನಾವಲೇಸು
ದೇವರಿಗೆ ಸಲ್ಲವೇ ಉತ್ತಮ ಗುಣಂಗಳಿ
ರ್ದಾವ ಕುಂದಂ ಕಳೆಯಲಾರವವನೀಶ ಕೇಳ್
ಭಾವಿಸುವೊಡಿಂದೆಮ್ಮ ರೂಪುಜವ್ವನವಿರಲು ಕುಲದ ಮಾತೇಕೆಂದರು

ಹಾಡನೊಲಿದಾಲಿಸಿದ ಕಿವಿಗೆ ಹೊಲೆಯಿಲ್ಲಮಾ
ತಾಡಿ ಹೊಗಳಿದ ಬಾಯ್ಗೆ ಹೊಲೆಯಿಲ್ಲ ರೂಪನೆರೆ
ನೋಡಿದ ವಿಲೋಚನಕೆ ಹೊಲೆಯಿಲ್ಲ ಮೆಯ್ ಮುಡಿಗಳಿಂ ಸುಳಿವ ತಂಗಾಳಿಯಿಂ
ತೀಡುವ ಸುಗಂಧಮಂ ವಾಸಿಸಿದ ನಾಸಿಕಕೆ
ನಾಡೆ ಹೊಲೆಯಿಲ್ಲ ಸೋಂಕಿಂಗೆ ಹೊಲೆಯುಂಟಾಯ್ತೆ
ಕೂಡಿರ್ದ ಪಂಚೇಂದ್ರಿಯಂಗಳೊಳು ನಾಲ್ಕಧಮವೊಂದಧಿಕವೇ ಎಂದರು

# ಕೆರೆಯ ಪದ್ಮರಸ

## ದೀಕ್ಷಾಬೋಧೆ

ಕುಲ ವಿದ್ಯೆಯಿಂ ಕಳೆಯಿತೆ ಜ್ಯೋತಿ ಘನತಮುವ
ಕುಲದಿ ತನ್ನಂತೆ ಮಾಡಿತೆ ಚಂದನಂ ತರುವ
ಅವಲೋಹಮಂ ಕಳೆವ ಪರುಷಕಾವುದು ಕುಲಂ
ಭವಪಂಕವಂ ತೊಳೆವ ಗುರುವಿಗೇವುದು ಕುಲಂ

ಬೀಳುಕೊಡು ಕುಲವೆಂಬ ಕಾಳ್ಮರುಳ್ತನಗಳಂ
ಕುಲವಮಂ ವಿಚಾರಿಪಡೆ ಸೆಲವಿಲ್ಲಫಲವಿಲ್ಲ
ನೆಲೆಯನರಿವೊಡೆ ಶುದ್ಧ ಹೊಲೆಯೈಸೆ ಕುಲವಿಲ್ಲ
ಕಾಯಕ್ಕೆ ಕುಲವೊ ಜೀವಕ್ಕೆ ಕುಲವೋ ಪೇಳು
ಕಾಯವಾದಡೆ ಶುದ್ಧ ಹೊಲೆಯಾಗಿ ಕುಲವಿಲ್ಲ
ವಾಯವಹ ಜೀವ ನಿರವಯುವಾಗಿ ಕುಲವಿಲ್ಲ

ಸೂತಕಗಳಿಲ್ಲವೀ ಪರಿ ಶಿವನ ಭಕ್ತರ್ಗೆ
ಜಾತಿವಾರ್ತೆಗಳಿಲ್ಲ ಲಿಂಗ ನಿಜಯುಕ್ತರ್ಗೆ
ಇದು ಕಾರಣವವರ ಸೂತಕಮಂ ವಿಚಾರಿಸದೆ
ಮದನಾರಿ ಭಕ್ತರಲಿ ಬೆದಕದಿರು ಸಂಕಿಸದೆ.

# ಕುಮಾರವ್ಯಾಸ

## ಕರ್ಣಾಟಭಾರತ ಕಥಾಮಂಜರಿ

ಅರಸು ರಾಕ್ಷಸ ಮಂತ್ರಿಯೆಂಬುವ
ಮೊರೆವ ಹುಲಿ ಪರಿವಾರ ಹದ್ದಿನ
ನೆರವಿ ಬಡವರ ಬಿನ್ನಪವನಿನ್ನಾರು ಕೇಳುವರು
ಉರಿವುರಿವುತಿದೆ ದೇಶ ನಾವಿ
ನ್ನಿರಲು ಬಾರದೆನುತ್ತ ಜನ ಬೇ
ಸರಿನ ಬೇಗೆಯಲಿರದಲೇ ಭೂಪಾಲ ಕೇಳೆಂದ

ಸಿರಿಯನುಳ್ಳವನವನೆ ಕುಲಜನು
ಸಿರಿಯನುಳ್ಳವನೇ ವಿದಗ್ಧನು
ಸಿರಿಯನುಳ್ಳವನೇ ಮಹಾತ್ಮನು ಸಕಲಗುಣಯುತನು
ಸಿರಿಯುಳ್ಳವನೇ ಸುಶೀಲನು
ಸಿರಿರಹಿತ ಶಿವನಾದೊಡಾಗಲಿ
ಸರಕುಮಾಡದು ಲೋಕವವನೀಪಾಲ ಕೇಳೆಂದ

ಸಿರಿ ನೆಲೆಯೆ ಜವ್ವನ ನೆಲೆಯೆ ಮೈ
ಸಿರಿ ನೆಲೆಯೆ ತನು ನೆಲೆಯೆ ಖಂಡೆಯ
ಸಿರಿನೆಲೆಯೆ ನಿನಗರಸುತನವುಳ್ಳನ್ನ ನೀತಿಯಲಿ
ಧರೆಯ ರಕ್ಷಿಸು ಬಂಧುಗಳನು
ದ್ಧರಿಸು ಧರ್ಮವ ಸಾಧಿಸಿಂತಿದು
ನರಪತಿಗಳಿಗೆ ನೀತಿ ಚಿತ್ತೈಸೆಂದನಾ ವಿದುರ

ಬಡತನಗಳಡಸಿದೊಡೆ ಬಂಧುಗ
ಳೆಡಹಿ ಕಾಣರು ಭಂಟ ತಾನಾ
ದೊಡೆಯು ಬಂದಾಪತ್ತಿನೊಳಗೆ ಪರಾಙ್ಮುಖನೆಯಾಗಿ
ನುಡಿಸಿದವನೇ ಹಗೆ ಶರೀರದೊ
ಳಡಸಿದಾ ರುಜೆ ಬಾಧೆಗಡವಿಯ
ಗಿಡಮರಂಗಳು ರಕ್ಷಿಸವೆ ಹೇಳೆಂದನಾ ವಿದುರ

ಆಕಟಧರ್ಮಜ ಭೀಮ ಫಲುಗುಣ
ನಕುಲ ಸಹದೇವಾದ್ಯರಿರ ಬಾ
ಲಕಿಯನೊಪ್ಪಿಸಿ ಕೊಟ್ಟರೇ ಮೃತ್ಯುವಿನ ತಾಳಿಗೆಗೆ
ವಿಕಳರಾದಿರೆ ನಿಲ್ಲಿ ನೀವೀ
ಗ ಕುಟಿಲರಲಾ ಭೀಷ್ಮಗುರು ಬಾ
ಹ್ಲಿಕ ಕೃಪಾದಿಗಳುತ್ತರವ ಕೊಡಿಯೆಂದಳಬುಜಾಕ್ಷಿ

ಹೆಂಡತಿಯ ಹರಿಬದಲಿಯೊಬ್ಬನೆ
ಗಂಡುಗೂಸೇ ವೈರಿಯನು ಕಡಿ
ಖಂಡರನು ಮಾಡುವನು ಮೇಣ್ ತನ್ನೊಡಲನಿಕ್ಕುವನು
ಗಂಡರೈವರು ಮೂರುಲೋಕದ
ಗಂಡರೊಬ್ಬಳನಾಳಲಾರಿರಿ
ಗಂಡರೋ ನೀವ್ ಭಂಡರೋ ಹೇಳೆಂದಳಿಂದುಮುಖಿ

ಹಗೆಗಳಿಗೆ ತಂಪಾಗಿ ಬದುಕುವ
ಮುಗುದರಿನ್ನಾರುಂಟು ಭಂಗಕೆ
ಹೆಗಲಕೊಟ್ಟಾನುವರ ವಿರೋಧಿಗಳುಂಟೆ ಲೋಕದಲಿ
ವಿಗಡ ಬಿರುದನು ಬಿಸುಟು ಬಡಿಹೋ
ರಿಗಳು ಪಾಂಡವರಂತೆ ಮೂಗು
ರ್ಚಿಗಳದಿನ್ನಾರುಂಟೆನುತ ಮರುಗಿದಳು ನಳಿನಾಕ್ಷಿ

ಕಾಲನನು ಕೆರಳಿದೊಡೆ ವುರಿವೆ
ಚ್ಚಾಳುತನದವರೆನ್ನ ನೊಬ್ಬಳ
ನಾಳಲಾರಿರಿ ಪಾಪಿಗಳಿರಪಕೀರ್ತಿಗಳುಕಿರಲ
ತೋಳ ಹೊರೆ ನಿಮಗೇಕೆ ಭೂಮಿಾ
ಪಾಲವಂಶದೊಳುದಿಸಲೇತಕೆ
ಕೂಳುಗೇಡಿಂಗೊಡಲಹೊರುವಿರಿಯೆಂದಳಿಂದುಮುಖಿ

# ಚಾಮರಸ

## ಪ್ರಭುಲಿಂಗಲೀಲೆ

ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ವುದ
ಕತ್ತಲೆಗೆ ಸಿಲುಕುವರ ಸೀಮೆಯು ಹೊಲಬು ತಾನಲ್ಲ
ಹೊತ್ತು ಹೋಗದೆ ಪುಂಡರಾಲಿಪ
ಮತ್ತಮತಿಗಳ ಗೋಷ್ಠಿಯಲ್ಲಿದು
ಸತ್ಯಶರಣರು ತಿಳಿವುದೀ ಪ್ರಭುಲಿಂಗಲೀಲೆಯನು

ಗಿಡವಳುಕಿ ಹೂಪತ್ರೆಗೋಸುಗ
ಮಡುನಡುಗಿ ಅಗ್ಗವಣಿಗೋಸುಗ
ಕಡಿದುಪಹಾರಕ್ಕೆ ಸಕಳೌಷಧಿ ವನಸ್ಪತಿಯ
ಕೆಡಿಸುತೀಪರಿ ಹೆರರುಗಳ ತ
ನ್ನೊಡಲ ವಂಚಿಸಿ ಬಾಹ್ಯಭಕ್ತಿಯ
ನಡೆವವರ ನಾ ಮೆಚ್ಚೆನೈ ಬಸವಣ್ಣ ಕೇಳೆಂದ

# ಪುರಂದರದಾಸ

## ಕುಲವಿಲ್ಲ ಜ್ಞಾನಿಗಳಿಗೆ

ಆವ ಕುಲವಾದರೇನು
ಆವನಾದರೇನು
ಆತ್ಮ ಭಾವವರಿತ ಮೇಲೆ

ಹಸಿಕಬ್ಬು ಡೊಂಕಿರಲು ಆದರ ರಸಡೊಂಕೇನೊ
ವಿಷಯಾಸೆಗಳ ಬಿಟ್ಟು ಹಸನಾದ ಗುರು ಭಕ್ತಿ ಮಾಡೋ
ನಾನಾ ವರ್ಣದ ಆಕಳು ಅದು ನಾನಾ ವರ್ಣದ ಕ್ಷೀರವೇನೋ
ಹೀನ ಕರ್ಮಗಳನು ಬಿಟ್ಟು ಹಿಗ್ಗಿ ಜ್ಞಾನ ಒಲಿಸಿರೊ
ಕುಲದ ಮೇಲೆ ಹೋಗಬೇಡ ಮನುಜ
ಕುಲವಿಲ್ಲ ಜ್ಞಾನಿಗಳಿಗೆ
ವರದ ಪುರಂದರ ವಿಠಲನಪದವ ಸೇರಿ ಮುಕ್ತನಾಗೊ

# ರೊಕ್ಕ ಎರಡಕ್ಕು ದುಃಖ

ರೊಕ್ಕ ಎರಡಕ್ಕು ದುಃಖ—ಕಾಣಕ್ಕ

ಮಕ್ಕಳ ಮರಿಗಳ ಮಾಡೋದು ರೊಕ್ಕ
ಸಕ್ಕರ ತುಪ್ಪವ ತಿನಿಸೋದು ರೊಕ್ಕ
ಕಕ್ಕುಲಾತಿಯನು ಬಿಡಿಸೋದು ರೊಕ್ಕ
ಘಕ್ಕನೆ ಹೋದರೆ ಘಾತ ಕಾಣಕ್ಕ

ನಂಟರ ಇಷ್ಟರ ಮರೆಸೋದು ರೊಕ್ಕ
ಕಂಟಕಗಳ ಪರಿಹರಿಸೋದು ರೊಕ್ಕ
ಗಂಟು ಕಟ್ಟಲಿಕ್ಕೆ ಕಲಿಸೋದು ರೊಕ್ಕ
ತುಂಟತನಗಳನು ಬಲಿಸೋದು ರೊಕ್ಕ

ಇಲ್ಲದ ಗುಣಗಳ ತರಿಸೋದು ರೊಕ್ಕ
ಸಲ್ಲದ ನಾಣ್ಯವ ನಡಿಸೋದು ರೊಕ್ಕ
ಬೆಲ್ಲಕ್ಕಿಂತಲೂ ಬಹು ಸವಿಯಾದ ರೊಕ್ಕ
ಇಲ್ಲದಿರಲು ಬಹು ದುಃಖ ಕಾಣಕ್ಕ

ಉಂಟಾದ ಗುಣಗಳ ಬರಿಸೋದು ರೊಕ್ಕ
ಬಂಟರನೆಲ್ಲರ ಬರಿಸೋದು ರೊಕ್ಕ
ಕಂಠಿ ಸರಿಗೆಯನು ಗಳಿಸೋದು ರೊಕ್ಕ
ಒಂಟೆ ಕುದುರೆ ಆನೆ ತರಿಸೋದು ರೊಕ್ಕ

ವಿದ್ಯದ ಮನುಜರ ಕರೆಸೋದು ರೊಕ್ಕ
ಹೊದ್ದಿದ ಜನರನು ಬಿಡಿಸೋದು ರೊಕ್ಕ
ಮುದ್ದು ಪುರಂದರವಿಠಲನ ಮರೆಸುವ
ಬಿದ್ದೋಗೋ ರೊಕ್ಕವ ಸುಡು ನೀನಕ್ಕ

# ಕನಕದಾಸ

## ಜಪವ ಮಾಡಿದರೇನು

ಜಪವ ಮಾಡಿದರೇನು ತಪವ ಮಾಡಿದರೇನು ?
ಕಪಟಗುಣ ವಿಪರೀತ ಕಲುಷವಿದ್ದವರು

ಆದಿಗುರುವರಿಯದೆ ಅತ್ತಲಿತ್ತಲು ತೊಳಲಿ
ವೇದ ಶಾಸ್ತ್ರಗಳೋದಿ ಬಾಯಾರಲು
ಆದಿಯನು ಕಾಣದಿಂದಿರುತಿದ್ದು ಹಲವೆಂಟು
ವಾದ ತರ್ಕದೊಳಿದ್ದ ಭೇದವಾದಿಗಳು

ನುಡಿ ನಡೆವ ಕಾಲದಲ್ಲಿ ದಾನಧರ್ಮ ಮಾಡದೆ
ಅಡವಿಯೊಳು ಕೆರೆ ತುಂಬಿ ಬತ್ತಿದಂತೆ
ಮಡದಿ ಮಕ್ಕಳಿಗೆಂದು ಒಡವೆ ವಸ್ತ್ರವ ಗಳಿಸೆ
ಹಿಡಿಯಲಾ ಯಮನವರ ಕಟ್ಟಿಗೊಳಗಾಗಿ

ಛಳಿ ಮಳೆ ಅತಿಕಾರುಗತ್ತಲೆಯೊಳಗಿದ್ದು
ಇಳಿ ಮುಳುಗಿ ನದಿಯೊಳಗೆ ಜಪವ ಮಾಡಿ
ಕಳವಳಿಸಿ ನೂರೆಂಟು ತೊಳಲಿ ಬಳಲಬೇಡ
ನಳಿನಾಕ್ಷ ಆದಿಕೇಶವನ ನೆನೆ ಮನವೆ

# ಆತ್ಮ ಯಾವ ಕುಲ

ಕುಲ ಕುಲ ಕುಲವೆನ್ನುತಿಹರು
ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ

ಮೃಗಗಳ ಮೈಯಲ್ಲಿ ಪುಟ್ಟದ ಕಸ್ತೂರಿ
ತೆಗೆದು ಪೂಸುವರು ಭೂಸುರರೆಲ್ಲರು
ಬಗೆಯಿಂದ ನಾರಾಯಣನ್ಯಾವ ಕುಲದವ
ಆಗಜವಲ್ಲಭನ್ಯಾತರ ಕುಲದವನು

ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮಾಂತರಾತ್ಮ ನೆಲೆಯಾದಿಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯ

# ಕುಲ ಕುಲವೆಂದು

ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲಿರ

ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ
ಅಟ್ಟು ಉಣ್ಣದ ವಸ್ತುಗಳಿಲ್ಲ
ಗುಟ್ಟು ಕಾಣಿಸಬಂತು ಹಿರಿದೇನು ಕಿರಿದೇನು
ನೆಟ್ಟನೆ ಸರ್ವಜ್ಞನ ನೆನೆಕಂಡ್ಯ ಮನುಜ

ಜಲವೆ ಸಕಲ ಕುಲಕ್ಕೆ ತಾಯಲ್ಲವೆ
ಜಲದ ಕುಲವನೇನಾದರು ಬಲ್ಲಿರಾ
ಜಲದ ಬೊಬ್ಬುಳಿಯಂತೆ ಸ್ಥಿರವಲ್ಲವೀ ದೇಹ
ನೆಲೆಯನರಿತು ನೀ ನೆನೆಕಂಡ್ಯಾ ಮನುಜ

ಹರಿಯೆ ಸರ್ವೋತ್ತಮ ಹರಿಯೆ ಸರ್ವೇಶ್ವರ
ಹರಿಮಯವೆಲ್ಲವೆನುತ ತಿಳಿದು
ಸಿರಿಕಾಗಿನೆಲೆಯಾದಿ ಕೇಶವರಾಯನ
ಚರಣ ಕಮಲವ ಕೀರ್ತಿಸುವನೆ ಕುಲಜ

# ಎಲ್ಲಾರೂ ಮಾಡುವುದು

ಎಲ್ಲಾರೂ ಮಾಡುವುದು ಹೊಟ್ಟೆಗಾಗಿ
ಗೇಣು ಬಟ್ಟೆಗಾಗಿ

ನೆಲ್ಲುಗಳ ಕುಟ್ಟಿಕೊಂಡು ಬಿದುರುಗಳ ಹೊತ್ತುಕೊಂಡು
ಕೂಲಿಗಳ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ನಾಲಕುವೇದ ಪುರಾಣ ಶಾಸ್ತ್ರ ಪಂಚಾಂಗ ಹೇಳಿಕೊಂಡು
ಕಾಲ ಕಳೆಯುವುದೆಲ್ಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ಬಡಿದು ಬಡಿದು ಕಬ್ಬಿಣವ ಕಾಸಿ ತುಬಾಕಿ ಮಾಡಿ
ಹೊಡೆವ ಗುಂಡು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ಚಂಡಭಟರೆಲ್ಲ ಮುಂದೆ ಕತ್ತಿ ಹರಿಗೆಯ ಪಿಡಿದು
ಖಂಡ ತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ದೊಡ್ಡ ದೊಡ್ಡ ಕುದುರೆಯನೇರಿ ನೇಜಿ ಹೊತ್ತು ರಾಹುತನಾಗಿ
ಹೊಡೆದಾಡಿ ಸಾಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ಕುಂಟೆ ಕೂರಿಗೆಯಿಂದ ಹೆಂಟೆ ಮಣ್ಣು ಹದ ಮಾಡಿ
ರಂಟೆ ಹೊಡೆದು ಬೆಳೆಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ಕೆಟ್ಟತನದಿಂದ ಕಳ್ಳತನವನ್ನೆ ಮಾಡಿ
ಕಟ್ಟ ಹೊಡೆಸಿಕೊಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ಸನ್ನಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ
ನಾನಾ ವೇಷ ಕೊಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ಉನ್ನತ ಕಾಗಿನೆಲೆಯಾದಿಕೇಶವನ
ಅನುದಿನ ನೆನೆವುದು ಭಕ್ತಿಗಾಗಿ ಪರಮ ಮುಕ್ತಿಗಾಗಿ

# ರಾಮಧಾನ್ಯ ಚರಿತೆ

ಲೋಕಕಧಿಕ ಭೋಜನವಿದೆಂ
ದಾಕೆವಾಳರು ಬುಧರಾ ಜರೆದು ನಿ
ರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲಾ
ನಾಕನಿಳಿಯರು ಸಾಕ್ಷಿ ನಿನ್ನವಿ
ವೇಕಗಳು ಮೆಚ್ಚುವರೆ ಬಾಹಿರ
ಸಾಕು ಬಿಡು ನೀನಾವ ಮಾನ್ಯನು ಕಡೆಗೆ ತೊಲಗೆಂದಾ

ಕ್ಷಿತಿಯಮರರುಪನಯನದಲಿ ಸು
ವ್ರತ ಸುಭೋಜನಗಳಲಿ ಮಂತ್ರಾ
ಕ್ಷತೆಗಳ ಶುಭ ಶೋಭನದಲಾರತಿಯು ಬೆಳಗುವಲಿ
ಕ್ರತುಗಳೆಡೆಯೊಳಗರಮನೆಯಲಿ
ಪ್ರತಿದಿನವು ರಂಜಿಸುತ ದೇವರಿ
ಗತಿಶಯದ ನೈವೇದ್ಯ ತಾನಹೆನೆಂದನಾ ವ್ರಿಹಗ

ಜನಪರಿಗೆ ಶಿಶುಗಳಿಗೆ ಬಾಂಧವ
ಜನರೆಡೆಗೆ ಬ್ರಹ್ಮರ ಸಮಾರಾ
ಧನೆಗೆ ವಿದ್ಯಾರಂಬ ಕಲಿಸುವ ಸಕಲ ಭೂಸುರರಾ
ಮನೆಗಳಲಿ ಹರಿದಿವಸದೌಪಾ
ಸನೆಗಳಲಿ ತಾ ಯೋಗ್ಯನಹುದೆಂ
ದೆನಿಸಿಕೊಂಬೆನು ನೀನಯೋಗ್ಯನು ಭ್ರಷ್ಟ ತೊಲಗೆಂದ

ಹೊಸ ಮನೆಯ ಪುಣ್ಯಾರ್ಚನೆಗೆ
ಹಸು ಮಕ್ಕಳ ಸೇಸೆಗೆ
ವಸುಮತೀಶರ ಗರುಡಿಯಲಿ ಶಸ್ತ್ರಾಸ್ತ್ರದರ್ಚನೆಗೆ
ಎಸೆವ ವಿಪ್ರರ ಫಾಲದಲಿ ರಂ
ಜಿಸುವ ಗಂಧಾಕ್ಷತೆಯಹೆನು ಭಾ
ವಿಸಲು ಲೋಕದೊಳೆನಗಾರು ಸರಿಯಿಂತೆಂದನಾ ವ್ರಿಹಗ

ಧರಣಿಯಮರರು ಮಂತ್ರ ತಂತ್ರೋಚ್ಚ
ರಣೆಯಲಿ ಹಸ್ತಾಂಬುಜದಿ ಮಿಗೆ
ಹರಸಿಕೊಡಲಕ್ಷತೆಯ ಮಂಡೆಯೊಳಾಂತ ಮಹಿಮರಿಗೇ
ದುರಿತ ದುಃಖ ವಿನಾಶ ಮಂಗಳ
ಕರವಹುದು ನಾನೀವೆ ಸಂತತ
ಸಿರಿಯು ಸಂಪತ್ತಾಯುವನು ಕೇಳೆಂದನಾ ವ್ರಿಹಗ

ಪರಿಮಳದ ಚಂದನದ ತರುವಿಗೆ
ಸರಿಯೆ ಒಣಗಿದ ಕಾಷ್ಠ ಗೋವುಗಳು
ಕರೆದ ಹಾಲಿಗೆ ಕುರಿಯ ಹಾಲಂತರವೇ ಭಾವಿಸಲೂ
ಪರಮ ಸಹಸೀವೀರ ಹನುಮಗೆ
ಮರದ ಮೇಲಣ ಕಪಿಯು ತಾನಂ
ತರವೇ ಪಡ ನೀನೆನಗೆ ಸರಿಯೆ ತೊಲಗು ಭ್ರಷ್ಟ ನೀನೆಂದಾ

ಸತ್ಯ ಹೀನರು ಬಡವರನು ಕ
ಣ್ಣೆತ್ತಿ ನೋಡೆ ಧನಾಢ್ಯರನು ಬೆಂ
ಬತ್ತಿ ನಡೆವ ವುಪೇಕ್ಷೆ ನಿನ್ನದು ಹೇಳಲೇನದನು
ಹೆತ್ತ ಬಾಣಂತಿಯರಿಗೆ ರೋಗಿಗೆ
ಪತ್ಯಪಾನದಿ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ

ಸತ್ತದಿನದಾರಾಭ್ಯ ಮನುಜರು
ಮತ್ತೆ ಕರ್ಮವ ಹೊತ್ತು ಪಿಂಡವ
ನಿತ್ತು ವಾಯುಸಕುಲವ ಕರಕರದೂ
ತುತ್ತನಿಡುವರು ಎಳ್ಳು ದರ್ಭೆಗೆ
ತೆತ್ತಿಗನು ನೀನಾದೆ ಕೀರ್ತಿಯ
ಹೊತ್ತುಕೊಂಡೆ ದುರಾತ್ಮ ನಿನ್ನೊಳು ಮಾತದೇಕೆಂದಾ

ಮಳೆದಗೆದು ಬೆಳೆಯಡಗಿ ಕ್ಷಾಮದ
ವಿಲಯಕಾಲದೊಳನ್ನವಿಲ್ಲದೆ
ಅಳಿವ ಪ್ರಾಣಿಗಳಾದಂಪಿ ಸಲಹುವೆನು ಜಗವರಿಯೇ
ಎಲವೋ ನೀನೆಲ್ಲಿಹೆಯೋ ನಿನ್ನಯ
ಬಳಗವದು ತಾನೆಲ್ಲಿಹುದು ಈ
ಹಲವು ಹುಲು ಧಾನ್ಯ ಸರಿಯೆನಗೆ ಕೇಳೆಂದಾ

ಬಲ್ಲಿದರು ನೆರೆ ಬಡವರಲಿ ನಿ
ನ್ನಲ್ಲಿಯುಂಟುಪೇಕ್ಷೆ ನಮ್ಮಲಿ
ಸಲ್ಲದೀ ಪರಪಕ್ಷಪಾತಕವಿಲ್ಲ ಭಾವಿಸಲೂ
ಬಲ್ಲಿದರು ಬಡವರುಗಳೆನ್ನದೆ
ಎಲ್ಲರನು ರಕ್ಷಿಸುವೆ ನಿರ್ದಯ
ನಲ್ಲ ತಾ ನಿನ್ನಂತೆ ಎಲ ಕುಟಿಲಾತ್ಮ ಹೊರಗೆಂದಾ

ನಾನಲ್ಲೈ ಲೋಕದಲಿ ನಿರ್ದಯನು ಬಳಿ
ಕೇನಲ್ಲೈ ಸದ್ಧರ್ಮದಲಿ ಮಧು
ಪಾನವಾದೆಯಲಾ ದುರಾತ್ಮಕ ನಿನ್ನ ಸೇವಿಸಿದಾ
ದಾನವರು ಮಾನವ ಕಿರಾತರು
ಜ್ಞಾನವಳಿದು ವಿಕಾರದಲ್ಲಿ ಮತಿ
ಹೀನರಾದರು ನಿನ್ನ ಗುಣವೇನೆಂದನಾ ವ್ರಿಹಗ

ಅಹುದು ಸುರಪನ ಮಾತು ನಿಶ್ಚಯ
ವಹುದು ನರೆದಲೆಗನೆ ಸಮರ್ಥನು
ಬಹಳ ಬಲಯುತ ಸೆರೆಗೆ ತಳ್ಳಿದರೆ ಕಾಂತಿಗೆಡಲಿಲ್ಲಾ
ಸಹಜವಿದು ಪರಪಕ್ಷವಾದಡೆ
ವ್ರಿಹಿ ಕರಗಿ ಕಂದಿದನು ಸೆರೆಯಲಿ
ವಿಹಿತವಿದು ಕೇಳೆಂದು ನಾರದ ನುಡಿದನು ನಸುನಗುತಾ

ಎಲ್ಲ ನವಧಾನ್ಯದಲ್ಲಿ ಈತನೆ
ಬಲ್ಲಿದನು ಹುಸಿಯಲ್ಲ ಬಡವರ
ಬಲ್ಲಿದರನಾರೈದು ಸಲಹುವ ನಿಮಗೆ ಸರಿಯುಂಟೆ
ನೆಲ್ಲಿನಲಿ ಗುಣವೇನು ಭಾಗ್ಯದಿ
ಬಲ್ಲಿದರ ಪತಿಕರಿಸುವನು ಅವ
ನಲ್ಲಿ ಸಾರವ ಕಾಣೆಯೆಂದನು ಕಪಿಲ ಮುನಿ ನಗುತಾ

ಮರುಳೆ ಬಾರೈ ವ್ರಿಹಿಯೆ ಮನದಲಿ
ಕರಗಿ ಚಿಂತಿಸಲೇಕೆ ನಾವೀ
ನರೆದಲೆಗನತಿಶಯವ ಮಾಡಿದೆವೆಂದು ಕನಲಿದೆಯಾ
ಧರೆಗೆ ಹೊದ್ದಿದಾಕ್ಷಾಮಗಾಲದಿ
ಕರುಣದಿಂ ನಡೆದು ಲೋಕವ
ಹೊರುವನದು ಕಾರಣವೇ ಪತಿಕರಿಸಿದೆವು ಕೇಳೆಂದಾ

ದೀನರಲಿ ದಾರಿದ್ರ ಜನದಲಿ
ನೀನು ನಿರ್ದಯನೆಂದೆವಲ್ಲದೆ
ಹೀನಗಳೆದವರಲ್ಲ ನಿನ್ನನು ನಾವು ಸಭೆಯೊಳಗೇ
ಮಾನುಷನು ನಮ್ಮೆಡೆಗೆ ನೀ ಸುರ
ಧೇನುವಿಗೆ ಸಮ ನಿನ್ನ ಚಿತ್ತದಿ
ಹಾನಿದೋರಲದೇಕೆ ಬಿಡು ಬಿಡು ಚಿಂತೆಯಾಕೆಂದಾ

ದೇವರಿಗೆ ಪರಮಾನ್ನ ನೀ ಮನು
ಜಾವಳಿಗೆ ಪಕ್ವಾನ್ನ ಮೀತನು
ನೀವು ಧರೆಯೊಳಗಿಬ್ಬರತಿ ಹಿತದಲಿ ನೀವಿಹುದೂ
ನಾವು ಕೊಟ್ಟೆವು ವರವ ಸ
ದಾವ ಕಾಲದಿ ಇನ್ನು ನೀವೇ
ಪಾವನರು ಸುಖಿಯೆಂದುಪಚರಿಸಿದನು ನೃಪತೀ

# ವಾದಿರಾಜ

## ಹಣವೆ ನಿನ್ನಯ ಗುಣವ

ಹಣವೆ ನಿನ್ನಯ ಗುಣವೇನು ಬಣ್ಣಿಪೆನೊ
ಹಣವಿಲ್ಲದವನೊಬ್ಬ ಹೆಣವೆ ಸರಿ ಕಂಡ್ಯಾ

ಬೆಲೆಯಾಗದವನೆಲ್ಲ ಬೆಲೆಯ ಮಾಡಿಸುವಿ
ಎಲ್ಲ ವಸ್ತುಗಳನಿದ್ದಲ್ಲೆ ತರಿಸುವಿ
ಕುಲಗೆಟ್ಟವರ ಸತ್ಕುಲಕೆ ಸೇರಿಸುವಿ
ಹೊಲೆಯನಾದರೂ ತಂದೊಳಗಿರಿಸುವಿ

ಅಂಗನೆಯರ ಸಂಗ ಅತಿಶಯದಿ ಮಾಡಿಸುವಿ
ಶೃಂಗಾರಾಭರಣಂಗಳ ಬೇಗ ತರಿಸುವಿ
ಮಂಗನಾದರೂ ಅನಂಗನೆಂದೆನಿಸುವಿ
ಕಂಗಳಿಲ್ಲದವಗೆ ಮುಗಳ ಕೊಡಿಸುವಿ

ಚರಣಕ್ಕೆ ಬಂದಂಥ ದುರಿತವನು ಬಿಡಿಸುವಿ
ಸರುವರಿಗೆ ಶ್ರೇಷ್ಠನರನ ಮಾಡಿಸುವಿ
ಅರಿಯದ ಶುಂಠನ ಅರಿತವನೆನಿಸುವಿ
ಸಿರಿಹಯವದನನ ಸ್ಮರಣೆ ಮರೆಸುವಿ

# ರತ್ನಾಕರ

## ಶತಕ

ಪೆರರಂ ಪೇಳ್ದೊಡೆ ನೋವರಾನೆನಗೆ ಪೇಳ್ದಿಂ ಕಾಮಿನೀ ಮೂತ್ರದೊ
ಜ್ವರ ವೈಯಂ ಲತೆಯೆಂದು ಮಾಂಸಕುಚಮಂ ಹೇಮಾಬ್ಜಮೆಂದೆಂದುನೆ
ತ್ತರನುಂಡಾತುಟಿಯಂ ಸುಧಾರುಚಿಯೆನುತ್ತಾಂ ಬಿಳ್ದುದು ಸಾಲದ
ನ್ಯರನೊಯ್ದಿಂ ಕವಿಯೋ ವಲಂ ಕಪಿಯೋ ನಾಂ ರತ್ನಾಕರಾಧೀಶ್ವರಾ

ಸುರಪಂ ತನ್ನಿ ಭವಿತ್ತು ಮಾವತಿಗನಪ್ಪಂ ಕಾಂತೆಯಿಂ ಪಾಡಿಪಂ
ಸುರಸೈನ್ಯಂ ಸಹವಾಗಿ ನಿಮ್ಮಭಿಷವಕ್ಕೊಲ್ದೋಳಿಗಂ ಮಾಳ್ಪನಾ
ದರದಿಂ ಛತ್ರಮನೆತ್ತಿಸುವಂ ನಟಿಸುವಂ ಪಲ್ಲಕ್ಕಿಯಂತಾಳ್ವ ನೀ
ನರಕೀಟಾದಿಗಳೇಕೆ ಗರ್ವಿಸುವರೋ ರತ್ನಾಕರಾಧೀಶ್ವರಾ

ಪಡೆಯೊಳ್ಬಲ್ಲಿದನಾದೊಡಾ ಪಡೆಯಿನೇಂ ಪಾಪಾರಿಯಂ ಗೆಲ್ವನೇ
ಕಡುಪಿಂದಂ ಜವನಂ ತೆರಳ್ಚುವನೆ ಬಲ್ಪಿಂ ಮೋಕ್ಷಮಂ ಕೊಂಬನೇ
ಕಡೆಗಾಭೂಪನ ಶಕ್ತಿ ನಾಲ್ಗಳಿಗೆ ಸಲ್ಗುಂ ಮರ್ತ್ಯಕೀಟಂಗಳೊಳ್
ಬಿಡು ಯೋಗೀಂದ್ರನ ಶಕ್ತಿಗಾವುದು ಸಮಂ ರತ್ನಾಕರಾಧೀಶ್ವರಾ

ತಮ್ಮಂ ಕೀರ್ತಿಸೆ ನಲ್ಮೆಯೊಲ್ಮೆ ಕಡುಜಾಗಂ ಕೂಡೆ ಸಂಭಾಷಣಂ
ನಿಮ್ಮಂ ಕೀರ್ತಿಸೆ ಮೋರೆ ಬಡಜಾಗಂ ಮೌನಮಾ ಭೂಮಿಪರ್
ತಮ್ಮಂ ಕೊಲ್ವ ನರೇಂದ್ರನಂ ಪೊಗಳಲಳ್ಕಿಂ ಮನ್ನಿಪರ್ ನಿಮ್ಮೊಳೇಂ
ಹಮ್ಮಂ ಕೋರ್ಪರೊ ಕಾವನೊಳ್ಕಲಹವೇ ರತ್ನಾಕರಾಧೀಶ್ವರಾ

ದೊರೆಯೇನಂ ಪಿಡಿದಿರ್ಪನಂತದನೆ ಲೋಕಂಮೆಚ್ಚುಗುಂ ತದ್ಧರಾ
ವರನಾ ದುರ್ಮತದತ್ತ ತಾನೆಳೆಸಿದಂದಾ ಸಾರ್ದರಂ ತನ್ನವಂ
ನರಕಕ್ಕಿಕ್ಕಿದನೊಲ್ದು ನಿಮ್ಮ ಮತದತ್ತಿಚ್ಛೈಸಿದಂದಾತನು
ದ್ಧರಿಸಲ್ತಾನೆ ಸಮರ್ಥನಾದ ನರರೇ ರತ್ನಾಕರಾಧೀಶ್ವರಾ.

# ಸರ್ವಜ್ಞ

## ವಚನಗಳು

ಯಾತರ ಹೂವಾದರು ನಾತರೆ ಸಾಲದೆ
ಜಾತಿ ವಿಜಾತಿಯೆನಬೇಡ ಶಿವನೊಲಿ
ದಾತನೇ ಜಾತ ಸರ್ವಜ್ಞ

ನಟ್ಟಿರ್ದಕಲ್ಲಿಂಗೆ ಒಟ್ಟಿರ್ದ ಮಣ್ಣಿಂಗೆ
ಕಟ್ಟಿರ್ದಲಿಂಗವಡಿಯಾಗಿ ಬೀಳುವನಿ
ಗಿಷ್ಟವೆಲ್ಲಿಯದು ಸರ್ವಜ್ಞ

ಸತ್ತು ಹುಟ್ಟುವರೆಂಬ ಮಿಥ್ಯದ ನುಡಿಯೇಕೆ
ಬಿತ್ತಿದರೆ ಬೀಜ ಬೆಳೆವಂತೆ ವೃಕ್ಷ ತಾ
ಸತ್ತು ಹುಟ್ಟುವುದೆ ಸರ್ವಜ್ಞ

ವೇದ ಶಾಸ್ತ್ರಾಗಮವನೋದಿದಡೆ ಫಲವೇನು
ವೇದಿಸುವ ಚಿತ್ತ ಸಮರಂಗವಿಲ್ಲದೊಡೆ
ಬೂದಿಯ ಹೋಮ ಸರ್ವಜ್ಞ

ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು
ಸುಡುವೊಡೆ ಕಿಚ್ಚು ಎರಡಿಲ್ಲ ಜಗವೆಲ್ಲ
ಜಡಗೊಂಬುತಿದೆಕೊ ಸರ್ವಜ್ಞ

ಜನ್ನ ವಿದ್ಯವ್ರಯೆಂದು ಕನ್ನೆಯಾಡನು ತಿಂದು
ಉನ್ನತ ಸ್ವರ್ಗವಡೆವರೆ ಹಿಂಡಾಡ
ತಿನ್ನುವನೇಂಕೆಟ್ಟ ಸರ್ವಜ್ಞ

ಆಟ್ಟೊಲೆಯ ಬೂದಿಯ ದಟ್ಟು ತಾಗಿಯೆ ಹೂಸಿ
ನೆಟ್ಟನೆ ಸ್ವರ್ಗವಡೆವರೆ ಕತ್ತೆಯದು
ಕೆಟ್ಟ ಕೇಡೇನು ಸರ್ವಜ್ಞ

ಅಕ್ಕರವ ಕಲಿತಾತ ಒಕ್ಕಲನುತಿನ ಕಲಿತ
ಲೆಕ್ಕವ ಕಲಿತ ಕರಣಿಕನು ನರಕದಲ್ಲಿ
ಹೊಕ್ಕಿರಲಿ ಕಲಿತ ಸರ್ವಜ್ಞ

ಬಡವನೊಳ್ಳೆಯ ಮಾತ ನುಡಿದರಲ್ಲೆಂಬರು
ಪೊಡವೀಶ ಬಳ್ಳಗೆಡದಡೆ ಹೊಗಳುತ
ಕಡು ಜಾಣನೆಂಬರು ಸರ್ವಜ್ಞ

ಬಟ್ಟೆ ತಾಗಿಯೆ ಬಟ್ಟನಿಟ್ಟೊಪ್ಪುವಾ ಜೈನ
ನೆಟ್ಟನೆ ಸ್ವರ್ಗವಡೆವೊಡೆ ಸಾಣಿಕಲ್
ಕೆಟ್ಟ ಕೇಡೇನು ಸರ್ವಜ್ಞ

ಯೋನಿಜರು ಯೋನಿಯನು ಹೀನ ಮಾಡುವರೇಕೆ
ಆನಂದ ಜನನಕದು ಮುಖ್ಯ ಶುಚಿ ಮಾಡಿ
ತಾನೊಲಿಯಬೇಕು ಸರ್ವಜ್ಞ

ಚೆಲುವನಾದೊಡೆಯೇನು ಹಲವನೋದಿದಡೇನು
ಕುಲ ವೀರವಿದ್ದು ಫಲವೇನು ಮಹಲಕುಮಿ
ತೊಲಗಿದ ಬಳಿಕ ಸರ್ವಜ್ಞ

ಸತ್ತೆತ್ತ ಹೊರುವವ ಎತ್ತಣ ಮಾದಿಗನು
ಉತ್ತಮನೆಂದು ಹೆರರೊಡವೆ ಹೊತ್ತವ
ನಿತ್ಯವೂ ಹೊಲೆಯ ಸರ್ವಜ್ಞ

ನಿತ್ಯ ನೀರೊಳು ಮುಳುಗಿ ಹತ್ಯಾನೆ ಸ್ವರ್ಗಕ್ಕೆ
ಹತ್ತೆಂಟು ಕಾಲ ಜಲದೊಳಗಿಹ ಕಪ್ಪೆ
ಹತ್ತವ್ಯಾಕಯ್ಯ ಸರ್ವಜ್ಞ

ಅರಸ ರಕ್ಕಸನಂತೆ ವರಮಂತ್ರಿ ಹುಲಿಯಂತೆ
ಬರೆವಾತ ನಾಡ ನರಿಯಂತೆ ಪರಿವಾರ
ಗರಗಸದಂತೆ ಸರ್ವಜ್ಞ

ಅರಸನೋಲೈಸುವರೆ ಕರಭೀತಿ ಬೇಕಯ್ಯ
ಅರಸು, ಕರಿ, ಉರಗನೊಳೆಚ್ಚರಲಿಲ್ಲದಿರೆ
ತ್ವರಿತದಿಂಕೊಲುಗು ಸರ್ವಜ್ಞ

# ಸಂಚಿಯ ಹೊನ್ನಮ್ಮ

## ಹದಿಬದೆಯ ಧರ್ಮ

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು

ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡೆ ಕುಂದೇನು
ಇವರಿರ್ವರೊಳೇಳ್ಗೆವಡೆದವರಿಂದ
ಸವನಿಪುದಿಹಪರ ಸೌಖ್ಯ

ಬಸುರೊಳೊಗೆದು ಬಳೆದೇಕ ರೀತಿಯೊಳೆಲ್ಲ
ಸಿಸುಗಳಿರ್ದೊಡವೇನು ಬಳಿಕ
ಒಸೆದಿತ್ತುದನೊಡಬಡುವಳು ಪೆಣ್ ಗಂಡು
ಪಸುಗೆಗೊಂಬನು ಬಲ್ಮೆಯೊಳು

# ಕಡಕೋಳ ಮಡಿವಾಳಪ್ಪ

## ಯಾವುದು ಮುಡಿಚಟ್ಟು

ಯಾವುದು ಮುಡಿಚಟ್ಟು ?
ಮುಡಿಚಟ್ಟಿನೊಳು ಬಂದು ಮುಟ್ಟಿ ತಟ್ಟಿ ಅಂತೀರಿ
ಮುಡಿಚಟ್ಟ ಯಾವುದು ಎಲ್ಲ್ಯಾದ್ಹೇಳಣ್ಣ
ಮುಟ್ಟಾದ ಮೂರು ದಿನಕ ಹುಟ್ಟಿ ಬಂದಿರಿ ನೀವು
ಮುಡಿಚಟ್ಟ ಎಲ್ಲ್ಯಾದ್ಹೇಳಣ್ಣ ‖ ಪಲ್ಲ ‖

ತೊಗಲೊಳು ತೊಗಲ್ಹೊಕ್ಕು ತಗಲಿ ಬಂದವ ನೀನು
ತಗಲ ಮಾತಾಡುವರೇನಣ್ಣ ?
ಇದರ ಬಗೆಯ ತಿಳಿಯದೆ ಒಗದು ಮಾತಾಡಿದರೇ
ನಗೆಗೇಡು ಕಾಣುತಾದಣ್ಣ

ಎಲವಿನಾಲಯದೊಳು ಒಳಗ್ಹೊಕ್ಕು ನೀ ಕುಂತು ಓಡ್ಯಾಡಬೇಡ ನೀ ಕೇಳಣ್ಣ
ಎಲವು ತೊಗಲ ಮಲಮೂತ್ರ ಮಾಂಸವು ನಿನ್ನಲ್ಲಿ ಕಾಣತಾದಣ್ಣ

ಊರ ನರಕವು ತಿಂದು ಬೋರ್ಯಾಡ್ಹಿಂಡುವ ಎಮ್ಮಿ ಹಾಲಿನ ಸವಿ ನೋಡಣ್ಣ
ಅದರ ಸ್ವಾದ್ಹತೀನಿ ಉಂಡುಗುಂಡಾಗಿ ಕುಂತೀರಿ ಶೀಲ ಎಲ್ಲಿ ಉಳಿತ್ಹೇಳಣ್ಣ

ಊರ ಭಾವಿಯ ನೀರದಾರಾದರು ತರುವರು ನಿಮ ನೀರ ಬ್ಯಾರಾದೇನಣ್ಣ
ಲಂಡೇನಳ್ಳ ಹೋಗಿ ನದಿಯ ಕೂಡಿದ ಮೇಲೆ ನೈವೇದ್ಯ ಹೇಗಾದಾವು ಹೇಳಣ್ಣ

ಸೂಸಲಾಡುವ ದೇಹ ಸೋಸಿ ನೀರವ ಮಾಡಿ ಮಡಿಮಾಡಿಕೊಳ್ಳಬೇಕಣ್ಣ
ನಮ್ಮ ಧೀರ ಮಹಾಂತೇಶನ ಬಿಡದೆ ಕೊಂಡಾಡಿದರ ಕಡಿತಾನ ಮಡಿಯಾಗುವದಣ್ಣ

# ಬಾಲಲೀಲಾ ಮಹಂತ ಶಿವಯೋಗಿ

## ಕೈವಲ್ಯ ದರ್ಪಣ

ನೀನೆಲ್ಲಿ ನಿನ್ನ ದೇಶೆಲ್ಲಿ ಕೇಳಲೆ ರಾಜ
ನಾನೆಲ್ಲಿ ನಾನಿರುವ ಸುಡಗಾಡ ಮಠವೆಲ್ಲಿ
ಏನಾಶಪಾಶದಲಿ ಬಿಗಿದೆನ್ನ ಕಟ್ಟಿದೆಯೊ ಕಳ್ಳರನು ಕಟ್ಟುವ ರೂಢಿ

ಬಾಲಬ್ರಹ್ಮಿಯು ನಾನು ಬಳಸಿಬ್ರಹ್ಮಿಯು ನೀನು
ಬಹಳ ಹೇಳುವುದೇನು ತಿಳಿವಳಿಕೆ ರಾಜನಿಗೆ
ಮೇಲೆ ಚಂದದ ಸುಖವು ಒಳಗೇನು ಸುಖವಿಲ್ಲ ಮೈಸೂರ ಮೈಚೂರವೋ
ನಮ್ಮ ಸುಖದುಃಖಗಳ ಕೇಳುವರು ಯಾರಿಲ್ಲ
ನಮ್ಮ ಸುಖ ಮೂಕ ಸಕ್ಕರೆ ಮೆದ್ದ ಪರಿಯಂತೆ
ನಮ್ಮ ದುಃಖವು ಕಳ್ಳಿ ಚೇಳೂರಿದಂತಿಹುದು ಹುರುಳಿಲ್ಲವೆಲೆ ರಾಜನೆ

ಹಂದರದಿ ಬಳ್ಳಿ ಸುವರ್ಣದಿಂದಲಿ ರತ್ನ
ಗಂಥ ಪರಿಮಳ ಪುಷ್ಪ ಸುಗಂಧದಲಿ ಲಿಂಗ
ಚೆಂದವಾಗಿಹ ಭಾವ ಹ್ಯಾಗೋ ಹಾಗೆ ನೋಡು ನಿಮ್ಮಿಂದ ನಮ ಚೆಂದವು
ಚೆಂದದಿಂ ಕೇಳ್ ರಾಜ ಕರದ ಕುಂಬಳ ಬುರಡೆ
ಗುದದ ಲಂಗುಟವೆರಡು ಪೂರ್ವದಲ್ಲಿರುತಿಹವು
ಇದನಷ್ಟು ನಮ್ಮ ಮುದಕವ್ವ ಮಾಡಿದಳು ಸರಿಸರ್ವಾಲಂಕಾರಗಳನು

ಊರಿಗೊಂದೂಡಕಗೆ ಒಂದು ನ್ಯಾಯೆಂಬ ಪರಿ
ದೂರ ಚಂದವುನಮುದು ಸರಿಬಾರದಾರಿಗೆಯು

ಮಾರಾರಿ ಶಿವ ಮಾಡಿದಾಟವಿದು ತಿಳಿಯದು ಏನಂತ ಕರಸಿಕೊಂಡೆ
ಯಾರು ಹೇಳಿದರು ನಿನಗೇಕೆ ಕರೆಸಿದಿನಮ್ಮ
ಬೇರು ಬೂನಾದಿ ಹೇಂಗೈತಿ ನೋಡಲಿ ರಾಜ
ಸೋರು ಸುಂಬಳ ಮಗುವು ತಂದೆ ತಾಯಿಗೆ ಹಿತವು ಜಗಕೆ ವ್ಯತ್ಯಾಸಲೀಲಾ

ವಸುಧಿಪನೆ ನಿನ್ನ ಮೈಸೂರೆಂಬ ಬೆಲ್ಲದ
ಮುಸುರಿಗಡಿಗೆಗೆ ಲಕ್ಷಗಟ್ಟಲೆ ಭಿಕ್ಷುಕರೆಂಬ
ಸಸಿನೆಮಕ್ಷಿಕ ದಂಡು ಮುಸುಕಿಹುದದೇನೆಂಬೆ ಮುತ್ತಿಗೆಯು ಹಾಕಿದಂತೆ
ಶಶಿಧರನ ವಾಹನಂಶಿಕವಾದ ಕಾರಣಂ
ಬಿಸಜಭವ ಮುಖ್ಯರಿಗೆ ದೊರಕದಿಹ ಭಕ್ತಿಯು ವಾಸನೆಯು
ಪಸರಿಸಿತು ಜಗದಗಲ ನಿನ್ನಯ ಭಕ್ತರ ಬಂಧು ನೀನೆ

ಇರದೆ ನಂಜಾಖ್ಯ ವೆಂಕಟರಾಯ ಕೇಳಿರೈ
ಮೂರೂವರೆ ಮೊಳಗೀಬು ನಾವಿರುವ ಸ್ಥಳ ನೋಡಿ
ದೊರೆ ಕೊಟ್ಟ ರಥ, ಮೇಣ್ ಛತ್ರ ಚಾಮರಗಳನೆಲ್ಲಿ ಮಡಗಿಕೊಳಲಿ ?
ತರಬೇಡೆಂದರೆ ತಂದಿರೂರೂರ್ಗೆ ಮೆರೆಸಿದಿರಿ
ತೀರೋಯ್ತು ಗುರುಕರುಣ ದೊರೆ ಭಕ್ತಿ ವೈಭವವು
ತಿರಿಗೊಯಿರಿ ಚೆಂದಲ್ಲ ದೊಡ್ಡ ಸ್ಥಳ ಸುಸರಿಗಳು ಸಣ್ಣ ಸ್ಥಲಕೇನು ಚಂದ

# ಕಂಬಿ ಬಸವಾರ್ಯ

## ಸಮಾಜಾದರ್ಶ

ಮೊದಲೊಳ್ ಭೂವರರಿತ್ತರೊಲ್ದು ಧನ ಭೂವಸ್ತ್ರಾಶನಾದ್ಯಂಗಳಂ
ಬುಧ ಮಾಹೇಶ್ವರ ವೃಂದಕ್ಕೈದೆ ನಿಜಶಿಷ್ಯವ್ರಾತಮಂ ಶಾಸ್ತ್ರ ಕೋ
ವಿದರಂಗೆಯ್ಯಲಶೇಷಲಿಂಗ ಮತಮಂ ಸದ್ಧರ್ಮದಿಂ ಪಾಲಿಸ
ಲ್ಕದನೇ ದುರ್ವ್ಯಯ ಮಾಳ್ಪರೋ ಶಿವಶಿವಾ ದುಷ್ಟಾತ್ಮರೀ ಕಾಲದೊಳ್

ಅಲ್ಲಲ್ಲಿ ತಿರಿದು ಧನಮಂ
ನೆಲ್ಲನೆ ಕೂಡಿಟ್ಟು ಪೆಣ್ಗಳಿದಿರೊಳ್ ಮೆರೆಯಲ್
ಪಲ್ಲಕ್ಕಿಯ ದಂಡಿಗೆಯಂ
ನಿಲ್ಲದೆ ಮಾಡಿಸುವರವರದೇಂ ಗಾವಿಲರೋ

## ಸೆಟ್ಟಿ

ಪಟ್ಟಿ ವಿಭೂತಿ ಕಂಗೆಸೆಯೆ ಪಾವಡ ಕಟ್ಟುವಲುಂಗೆ ಪೊಂಗೆ ಪೇ
ರ್ಬೊಟ್ಟಿ ವಿರಾಜಿಸಲ್ಕೆಯಡ ಮುಟ್ಟತಂ ಪಿರಿದಾಗೆ ಜಾತಿಯೊಳ್
ಪುಟ್ಟಿಸಿ ವ್ಯಾಜ್ಯಮಂ ಪಲವು ಪಂಗಡಮಾಗಿಸಿ ಪೇರ್ವೆವೆತ್ತುತಾ
ಪುಟ್ಟಿದನೇಕೆ ಸೆಟ್ಟಿ ಜಗಜಟ್ಟಿಯಶುದ್ಧದ ವೊಟ್ಟಿ ಭೂಮಿಯೊಳ್

೭೩/ಕಂಚಿ ಬಸವಾರ್ಯ

# ಆಧುನಿಕ ಜಂಗಮ ಲಕ್ಷಣಂ

ಹುಗ್ಗಿಯ ಹೊಡೆವುದೆ ಶೌರ್ಯಂ
ಎಗ್ಗಿಲ್ಲದೆ ಜಂಗು ಕಟ್ಟಿ ತಿರಿಪುದೆ ಕಾರ್ಯಂ
ಕಗ್ಗತನವೆ ಸೌಂದರ್ಯಂ
ಮಗ್ಗಲಮುರಿ ಬಡಿಸಿಕೊಂಡು ಮೆರೆವುದೆ ಧೈರ್ಯಂ

ಸಾಲೆಯ ಸುದ್ದಿಯಿಲ್ಲದೆಲೆ ಮೇಲ್ತರದುಜ್ಜುಗ ಗೆಯ್ಯಲಾರದೆ
ಕೂಲಿಯ ಮಾಡಲೊಲ್ಲದೆ ಮಹತ್ತಮ ವೈದಿಕ ಮೂರ್ತಿಯಾಗದೆ
ಕೂಳಿನಪೇಕ್ಷೆಯಿಂದ ನೆರೆಯೂರ ಬಿಕ್ಕೆಗೆ ನಾಚಿಕಿಲ್ಲದೆ
ಜೋಳಿಗೆಗಾಶೆಯಾದೊಡೆ ಸಾಕೆಮಗೆಂಬರು ಮೂರ್ಖ ಜಂಗಮರ್

ಗುರು ಕೊಟ್ಟ ಜೋಳಿಗೆಯಿರುತಿರೆ
ಪೆರತೊಂದುದ್ಯೋಗಮೇಕೆಯೆಮಗೇಂ ಕೊರತೆ
ಬರಿದೇ ದುಡಿಯುವದೇತಕೆ
ತಿರಿದುಂಬುದೆಮ್ಮಯ ಕಜ್ಜಮೆಂಬರ್ ಪಿಶುಣರ್

ದುಡಿಯದೆ ದುಃಖ ಪಡೆಯದೆ
ಕಡಬುಂಡಿಯ ಜಡಿಯಲೆಮ್ಮ ಭಕ್ತರ ಮನೆಯೊಳ್
ನ್ಮೃಡನಲ್ಲಿ ಬೇಡಿ ಬಂದೆವು
ದುಡಿಯಲು ಬಂದಿಲ್ಲವೆಂದು ಜಂಗಮರೆಂಬರ್

# ವೀರಪ್ಪ ವೀರಭದ್ರಪ್ಪ ನಾಗಿಶೆಟ್ಟಿ

## ಬಡವರ ಕೆಳೆತನ ಮಾಳ್ಪರಾರ್ಕೆ

ವಶವಾಗದಿರ್ಪನಾವಂ
ವಸುಮತಿಯೊಳ್ ಬಾಯ್ಗ ದೇನನಾದೊಡಮೊರಸಲ್
ಎಸಗುವವಮಲ್ತೆ ಮೃದಂಗಂ
ನಿನದಂ ಮುಖಲೇಪನದಿಂದೆ ಮಧುರಧ್ವನಿಯಂ

ಆಡವಿಯುಮಂ ಬಣವೆಯುಮಂ
ಸುಡುಂವನಲಂಗನಿಲನೊಲ್ದು ನೆರವಂ ಮಾಳ್ಪಂ
ಸೊಡರಂ ನಾಶಿಪನವನೇ
ಬಡವರ ಕೆಳೆತನ ಮಾಳ್ಪರಾರ್ಕೆ ಜಗದೊಳ್

ಧನಧನವೆನುತಿರೆ ನಿಶ್ಚೇ
ತನಮಾದ ನಗಾರಿಯುಂ ಸಚೇತನಾದಾ
ಮನುಜಂ ನಿರುತಂ ಧನಧನ
ವೆನುತಿಹುದೇನರಿದೆ ಧನಕ್ಕೆ ಬಾಯ್ದೆರೆಯದರಾರ್

ಜರೆವಳ್ ತಾಯ್ ತೆಗಳ್ವಂ ಪಿತಂ ನುಡಿಯನಾಡರ್ ಪ್ರೇಮದಿ ಸೋದರರ್
ಪರಿಚಾರಂ ಮುಳಿವಂ ಸುತಂ ನುಡಿಯ ಕೇಳಂ ಸೇರಳಾ ಪೆಂಡತಿಯುಂ
ಎರೆವಂ ದ್ರವ್ಯನೆಂಬ ಸಂದೆಯುದೆ ಮಾತಾಡರ್ ಸಖರ್ ದೀನನಂ
ಸಿರಿಯುಂ ನೀಂ ಗಳಿಸಾತ್ಮಜಾ ಸಿರಿಯಿನೆಲ್ಲರ್ ವಶ್ಯರೀಧರಿತ್ರಿಯೊಳ್

# ದೇವಶಿಖಾಮಣಿ ಅಳಸಿಂಗರಾಚಾರ್ಯ

## ಶ್ರೀ ಚೆಲ್ವನಾರಾಯಣ ಶತಕಮ್

ವರವಿದ್ಯಾ ಬಲಮಂ ಕುಲೋನ್ನತಿಯುಮಂ ಸೌಶೀಲ್ಯಮಂ ನೋಡದ್ಯೆ
ಸಿರಿಯೊಂದಿರ್ದೊಡೆ ಸರ್ವರುಂ ತಮಗೆ ತಾವೊಲ್ದೈದುವರ್ ಗಂಗೆಯುಂ
ಶಿರದೊಳ್ ತಾಳ್ದೊಡಮೀಶನಂ ತೊರೆದವಳ್ ರತ್ನಾಕರಕ್ಕೆಯ್ದುವಳ್
ಸಿರಿಯೊಳ್ ಸರ್ವಜನಾನುರಾಗಮೊಗೆಗುಂ ಶ್ರೀ ಚೆಲ್ವ

ನರರೂಪಂದೊರದಿರ್ಕೆ ವಂಚಿಸುಗೆ ಮೇಣ್ ಧರ್ಮಕ್ರಿಯಾಭಿಜ್ಞರಂ
ತರಿದುಂ ತಾಯ್ದಲೆಯಂ, ಪರಿತ್ಯಜಸಿಯುಂ ಗರ್ಭಾಢ್ಯೆಯಂ ಪತ್ನಿಯಂ
ಸುರೆಯುಂ ಸೇವಿಸಿ ಜಾರನಾಗಿ ಜನರಂ ಕೊಲ್ಲುತ್ತಮಂತಿರ್ದೊಡೇಂ
ಸಿರಿಯಾಣ್ಮಂ ಸಲೆ ಸೇವ್ಯನಲ್ತೆ ಧರೆಯೊಳ್ ಶ್ರೀ ಚೆಲ್ವ

ಶಮಮಂ ಮೆಟ್ಟಿ ಸುಶೀಲಮಂ ಸದೆದು ಮೇಣ್ ಸೌಜನ್ಯಮಂ ನೀಗಿಮಾ
ನಮನೀಡಾಡಿ ಸುಖಂಗಳಂ ತೊಲಗಿಸುತ್ತಾನಂದಮಂ ತಾಳ್ದಿ ಧೈ
ರ್ಯಮನಟ್ಟುತ್ತುರೆ ತೇಜಮಂ ತವಿಸಿ ನಾಣಂ ಕೀಳ್ವ ದಾರಿದ್ರ್ಯದಿಂ
ದಮೆ ಸರ್ವೋತ್ತಮ ಸದ್ಗುಣಂಗಳಳಿಗುಂ ಶ್ರೀ ಚೆಲ್ವ

ಧನಹೀನಂ ಧೃತಿಹೀನನಪ್ಪನದರಿಂದಕ್ಕುಂ ತಿರಸ್ಕಾರಮುಂ
ಜನರಿಂದಂ ಪರಿಭೂತನಾಗೆ ಮನದೊಳ್ ನಿರ್ವೇದಮಂ ಪೊಂದುಗುಂ
ಮನಮುದ್ವಿಗ್ನಮದಾಗೆ ಶೋಕಮದರಿಂ ಬುದ್ಧಿ ಭ್ರಮಂ ಬುದ್ಧಿ ನಾ
ಶನದಿಂ ನಾಶಮೆ ನಿರ್ಧನಂಗಹುದೆಲ್ತೆ ಶ್ರೀ ಚೆಲ್ವ

ಧರೆಯಂ ಪುಟ್ಟಿಸಿದಾತನೊರ್ವ್ವನದನಾಂತಿರ್ಪ್ಪಾತನೊರ್ವ್ವಂ ಕರಂ
ಪೊರೆವಾತಂ ಪೆರನೊರ್ವ್ವನಿಂತವರವರ್ ಸ್ವಸ್ವಾಧಿಕಾರಂಗಳಾಂ
ತಿರೆ ತರ್ಕ್ಕೋಟಿಕಲಾಂಶ ಮಾತ್ರಕೊಡೆಯರ್ ತಾವೆಂಬ ದುರ್ಭಾವದಿಂ
ದೊರೆಗಳ್ ದುರ್ಮ್ಮದದಿಂದೆ ಬೀಗಿ ಬೆರೆವರ್ ಶ್ರೀ ಚೆಲ್ವ

ನಿಜವಕ್ತ್ರಾಗ್ರದೆ ಪಿಂಡಮೀವವರೆಗಂ ನೀಡುಂ ಮೃದು ಸ್ವಾನವಂ
ನಿಜದಿಂ ತೋರುತದಿಲ್ಲದಿರ್ದ್ದೊಡೆ ಕಟುಧ್ವಾನಂಗಳಿಂದಂ ಜನ
ವ್ರಜಮಂ ಬೆರ್ಚ್ಚಿಸುತಿರ್ಪ್ಪ ದುಷ್ಪ್ರಭುಗಳಾರಯ್ಯರ್ ಮೃದಂಗಕ್ಕೆ ಪೂ
ರ್ವ್ವಜರೋ ಮೇಣನುಜಾತರೋ ತಿಳಿಯೆ ನಾಂ ಶ್ರೀ ಚೆಲ್ವ

ಗರಳೋಗ್ರಾಹಿ ವಧೂಮುಖಾಗ್ರಮನಲಂಪಿಂದೆತ್ತಿ ಮುತ್ತಿಕ್ಕುವಂ
ತಿರೆ ಖಡ್ಗಾಗ್ರದ ಜೇನ್ಗೆ ನಾಲಗೆಯನಿಕ್ಕುತ್ತಾಸೆಯಿಂ ನೆಕ್ಕುವಂ
ತಿರೆ ಮೇಣ್ ಪೆರ್ವಸಿವಾಂತ ಪೆಣ್ಬುಲಿಗಳಂ ತಳ್ತಪ್ಪಿಕೊಳ್ವಂತೆವೊಲ್
ಧರೆಯೊಳ್ ದುಷ್ಪ್ರಭುಸೇವೆ ಕಷ್ಟಮೆ ವಲಂ ಶ್ರೀ ಚೆಲ್ವ

ಎಲೆ ನೀಂ ಚಂದ್ರನುಪೇಂದ್ರನಿಂದ್ರನೆನುತಂ ಮಿಥ್ಯಾಸ್ತವಾರಂಭದೊಳ್
ಖಲಭೂಪರ್ಕ್ಕಳ ಮುಂದೆ ನಿಂದು ಕವಿಗಳ್ ಮಿಥ್ಯೋಕ್ತಿಯಂ ಪೇಳೆ ತ
ತ್ಫಲ ರೂಪಂ ತಮಗಾವಗಂ ಬಡತನ ಬೆನ್ನೇರಿರಲ್ಕೀಯುತ್ತದಾ
ಯಿಳೆಯಾಣ್ಮರ್ಕ್ಕಳ ಲಾಭ್ಯಮಂ ಪಳಿಯಲೇಂ ಶ್ರೀ ಚೆಲ್ವ

ಕೆಸರೊಳ್ ಪುಟ್ಟಿ ಸುಗಂಧಮಂ ಪಡೆಯದೇನಬ್ಜವ್ರಜಂ ಪಾಲ್ಗಡ
ಲ್ಬಸಿರೊಳ್ ಪುಟ್ಟಿದಮಾತ್ರದಿಂದೆ ವಿಷಮೇನಾಸ್ವಾದ್ಯಮೇ ಲೋಕದೊಳ್
ಮುಸೆದಾಚಂದನದಿಂದ ಮೊಳ್ದನಲನೇಂ ತಣ್ಪೇವುದೇ ಪುಟ್ಟಿದಾ
ಬಸಿರಿಂದಾಂಪರೆ ಪೇಳ್ ಗುಣಾವಗುಣಮಂ ಶ್ರೀ ಚೆಲ್ವ

# ಪಂಜೆ ಮಂಗೇಶರಾಯ

## ತೆಂಕಣ ಗಾಳಿಯಾಟ

ಬರಲಿದೆ ! ಆಹಹಾ ! ದೂರದಿ ಬರಲಿದೆ—
ಬುಸುಗುಟ್ಟುವ ಪಾತಾಳದ ಹಾವೋ ?
ಹಸಿವಿನ ಭೂತವು ಕೂಯುವ ಕೂವೋ ?
ಹೊಸತಿದು ಕಾಲನ ಕೋಣನ—ಓವೋ
ಉಸಿರಿನ ಸುಯ್ಯೋ ? ಸೂಸೂಕರಿಸುತ

ಬರುವುದು ! ಬರಬರ ಭರದಲಿ ಬರುವುದು
ಬೊಬ್ಬೆಯು ಹಬ್ಬಿಸಿ, ಒಂದೇ ಬಾರಿಗೆ
ಉಬ್ಬರ ಎಬ್ಬಿಸಿ ಕಡಲಿನ ನೀರಿಗೆ
ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ,
ಅಬ್ಬರದಲ್ಲಿ ಭೋರ್ ಭೋರೆನೆ ಗುಮ್ಮಿಸಿ

ಬರುತದೆ ! ಮೈ ತೋರದೆ ಬರುತದೆ ! ಅದೆ
ನಡುಮುರಿಯುತ ಗಗನಾವೆಗೆ, ಕೂವೆಗೆ
ಉಡಿಸಿದ ಹಾಯಿಯ ಹರಿಯುತ ಬಿರಿಯುತ,
ಹಡಗನು ಕೀಲಿಸಿ, ತುಮುರನು ತೇಲಿಸಿ
ದಡದಲಿ ರಭೂಡಿಸಿ, ದೋಣಿಯನಾಡಿಸಿ

ಇದೆ ! ಇದೆ ! ಬರುತಿದೆ ! ಇದೆ ! ಇದೆ ! ಬರುತಿದೆ—
ಹಕ್ಕಿಯ ಕಣ್ಣಿಗೆ ಧೂಳಿನ ಕಾಡಿಗೆ

ಇಕ್ಕ್ರತ ಹೊಲದೆತ್ತಿಗೆ ದನಕಾಡಿಗೆ
ಫಕ್ಕನೆ ಹಟ್ಟಿಗೆ ಅಟ್ಟಿಸಿ, ಕಾಡಿಗೆ
ಸಿಕ್ಕಿದ ಕಿಚ್ಚನು ಊದಲು ಹಾರುತ

ಬರುತಿದೆ! ಇದೆ! ಇದೆ! ಇದೆ! ಇದೆ! ಬರುತಿದೆ
ಸಡಲಿಸಿ ಮಡದಿಯರುಡಿಯನು ಮುಡಿಯನು,
ಬಡ ಮುದುಕರ ಕೊಡೆಗರಿ ಹರಿದಾಡಿಸಿ,
ಹುಡುಗರ ತಲೆ ತಲೆ ಟೊಪ್ಪಿಯ ಆಟವ
ದಡಬಡನಾಡಿಸಿ ಮನೆಮನೆ ತೋಟವ
ಅಡಿಮೇಲಾಗಿಸಿ, ತೆಂಗನು ಲಾಗಿಸಿ,
ಅಡಿಕೆಯ ಬಾಗಿಸಿ, ಪನೆ ಇಬ್ಭಾಗಿಸಿ
ಬುಡದೂಟಾಡಿಸಿ, ತಲೆ ತಾಟಾಡಿಸಿ,
ಗುಡಿಸಲ ಮಾಡನು ಹುಲು ಹುಲು ಮಾಡಿಸಿ

ಬಂತೈ ಬಂತೈ ಇದೆ! ಇದೆ! ಬಂತೈ!
ಗಿಡ ಗಿಡದಿಂ ಚಿಲು ಗೊಂಚಲು ಮಿಂಚಲು
ಮಿಡಿಯನು ಹಣ್ಣನು, ಉದುರಿಸಿ ಕೆದರಿಸಿ
ಎಡದಲಿ ಬಲದಲಿ ಕೆಲದಲಿ ನೆನೆದಲಿ
ಪಡುವಣ ಮೋಡವ ಬೆಟ್ಟಕ್ಕೆ ಗಟ್ಟಕೆ
ಹೊಡೆದಟ್ಟುತ, ಕೋಲ್ ಮಿಂಚನು ಮಿರುಗಿಸಿ,
ಗುಡುಗನು ಗುಡುಗಿಸಿ, ನೆಲವನು ನಡುಗಿಸಿ
ಸಿಡಿಲನು ತಾಳೆಗೆ ಬಾಳೆಗೆ ಎರಗಿಸಿ,
ಜಡಿ ಮಳೆ ಸುರಿವೋಲ್, ಬಿರುಮಳೆ ಬರುವೋಲ್
ಕುಡಿ ನೀರನು ಒಣಗಿದ ನೆಲಕೆರೆವೋಲ್
ಬಂತೈ ಬೀಸುತ! ಬೀಸುತ ಬಂತೈ!
ತೆಂಕಣಗಾಳಿಯು ಕೊಂಕಣ ಸೀಮೆಗೆ
ಬಂತೈ! ಬಂತೈ! ಬಂತೈ! ಬಂತೈ!

# ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ

ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ ?
        ಸಾಕು, ಸುತ್ತಲು ನೋಡು ಕಣ್ದೆರೆದು ನಿಂದು ;
ಲೋಕದಲಿ ವಂದೆ ಮಾತರಮೆಂಬುದೊಂದೆ ಮಾ
        ತೇ ಕಿವಿಯನೊಡೆಯುತಿರೆ ಉಚ್ಚಳಿಸಿ ಬಂದು.
ಮತ ಜಾಲದಲಿ ಸಿಲುಕಿ, ಅತಿ ಜಾತಿಯಲಿ ಕುಲುಕಿ,
        ಗತಿಗೆಟ್ಟು ಸರ್ವರಲಿ ನೀಸಾದೆ ಹಿಂದು ;
ಪತಿತರಿಗೆ ಕೈ ಕೊಟ್ಟು ಭಾರತ ಧ್ವಜ ನೆಟ್ಟು
        ಪಥದೋರಿ ಬಂಗಾಲಿ ಹಾಯುತಿರೆ ಮುಂದು.

ನುಗ್ಗುನುಗ್ಗುತ ಪರರು ನುಗ್ಗುತೆ ಬರುತಿಹರು ;
        ಬಗ್ಗಿರದೆ ಬಾಗುವುದೆ ನಿನಗಾದುದಿಂದು ?
ಹಗ್ಗವಿಲ್ಲದ ಕಟ್ಟು, ಬೆತ್ತವಿಲ್ಲದ ಪೆಟ್ಟು,
        ಒಗ್ಗಿತೇ ಈ ಗತಿಯು ಸವಿವಿಷವ ತಿಂದು ?
ಕಿತ್ತು ಬಿಡು ಸಂದೇಹ, ಇತ್ತು ಬಿಡು ಧನದೇಹ,
        ಮಾತೃ ಭೂಮಿಯ ಪದಾರ್ಚನೆಗೆ ಬಲವಂದು.

ಹೊತ್ತ ಕಳೆಯಲು ಬೇಡ, ಭ್ರಾಂತಿಗೊಳದಿರು ಮೂಢ !
        ಸತ್ತಿರುವೆ ಏತಕೀ ಜೀವನದೊಳಿಂದು ?
ಚಿತ್ತ ವ್ಯಸನಾಕುಲೆಯು ಕುತ್ತಿಗೆಯ ಸಂಕಲೆಯ
        ಕತ್ತರಿಸಿ ತನ್ನ ಸೆರೆ ಬಿಡಿಸಬೇಕೆಂದು,
ನೆತ್ತಿಯಲಿ ಬೊಟ್ಟಡದೆ, ಬಿರುದು ಬಾವಲಿ ತೊಡದೆ
        ಅತ್ತತ್ತು ಹಲಬುತಿರೆ ಭೂಮಾತೆ ನೊಂದು.
ಸತ್ತಿತೇ ಸಾಹಸವು ? ಬತ್ತಿತೇ ಧೃತಿರಸವು
        ಮತ್ತೆ ಮಡಿದಾ ಕರ್ಣನಾ ಬೆನ್ನ ಹಿಂದು
ಎತ್ತ ಪೋದುದು ಪರಶುರಾಮನಾ ತೋಳ್ವಿರಿಸು ?
        ನೆತ್ತರೊಳಗಿಲ್ಲವೇ ವಿಕ್ರಮದ ಬಿಂದು ?
ಕಳವಾದ ಮೇಲ್ನೀನು ಕಳವಳಿಸಿ ಫಲವೇನು ?
        ಕಳೆದಪುದು ನಿನ್ನ ಸ್ವಾತಂತ್ರ್ಯ ಮಣಿಯೊಂದು.
ಕೆಳಕೋಟಿ ಕೈ ಸೋಕೆ ಕಹಳೆ ಕೂಗುವುದೇಕೆ ?
        ಕಳಚಿಬಿಡು ಆಧ್ಯಾತ್ಮ ನಿದ್ರೆ ಮಮ ಬಂಧು.

ಎದ್ದೇಳು, ಎದ್ದೇಳು ನಿದ್ದೆಗಣ್ಣನು ಕೀಳು ;
        ಹೊದ್ದಿರ್ದ ವೇದಗಂಬಳಿ ಮೂಲೆಗ್ಗೊಂದು.
ಎದ್ದು ಬರುತಿಹ ಭಾನು, ಎದ್ದಿತ್ತೈ ಜಪಾನು ?
        ಬಿದ್ದುಕೊಂಡಿರುವೇಕೆ ಕತ್ತಲೆಯೊಳಿಂದು ?
ತಳರು ಭರತ ಕುಮಾರ, ಕೊಳುಗುಳದಲತಿವೀರ
        ಸೆಳೆ ಮಿಂಚಿನಸಿಯ ತೆಗೆ, ರಣಕೆ ಬಳಿಸಂದು !
ಮಳೆ ರಕುತದಲಿ ಬೀಳೆ, ಬೆಳೆ ಕಲಿಗಳಿಂದೇಳೆ
        ಭಳಿರೇ ಭಾರತ ವರ್ಷ ಸೌಭಾಗ್ಯಮುಂದು.

# ಏನ ಬೇಡಲಿ ನಿನ್ನ

ಏನು ಬೇಡಲಿ ನಿನ್ನ ಬಳಿಗೆ ಬಂದು ?
ನೀನಿತ್ತ ಸೌಭಾಗ್ಯ ನಿಖಿಲವಾಯ್ತೆನಗೆ

ಅಕ್ಕಿಯನು ಕೊಡು ಎಂದು ಅಕ್ಕರೆಯೊಳ್ ಬೇಡುವೆನೆ ?
ಅಕ್ಕಿಯಾ ಮುಡಿಗಿಂದು ರೊಕ್ಕ ರೂಪಾಯಿ ನಾಲ್ಕು

ಸಕ್ಕರೆಯನೆ ಕೊಡು ಎಂದು ಸೌಖ್ಯದಲಿ ಬೇಡುವೆನೆ ?
ಸಕ್ಕರೆಯ ಸೇರಿಗಂ ಚಿಕ್ಕಾಸೂ ಕಮ್ಮಿಲ್ಲ

ಬಟ್ಟೆಯನು ಕೊಡು ಎಂದು ಬಟ್ಟೆಯೊಳು ಬೇಡುವೆನೆ ?
ಬಟ್ಟೆ ದೇಶಿಯ ಗಲಭೆ ಮುಟ್ಟೆ ಪ್ರಿಯವಾದುದೈ

ಕಟ್ಟಿಗೆಯ ಕೊಡು ಎಂದು ಕಟ್ಟೆ ಕೈ ಬೇಡುವೆನೆ ?
ಕಟ್ಟಿಗೆಯನೇರೆ ಭವ ನೆಟ್ಟಗಾಗುವುದಯ್ಯ

# ಕಬ್ಬಿಣದ ಬುದ್ಧಿವಾದ

"ಎಲೆಲೆ ಕಬ್ಬುನ ನೀನು ಮಲಿನ ಹಸ್ತದಿ ತುಡುಕಿ,
ಪೊಲೆಗೈದುದೇತಕೆನ್ನಯ ಮೈಯನಿಂದು ?
ಕಲಿಯುಗದ ಪೊಲೆಯ ಸತ್ಕುಲದ್ವಿಜನ ಸೋಂಕುವೊಲೆ,
ಖಲನೆ ಮುಟ್ಟಿದುದೇತಕೆನ್ನೆಡೆಗೆ ಬಂದು ?"

"ಲೋಹ ರಾಜನು ನಾನು ಮೋಹಿಸುವೆ ಜನಮನವ,
ಆಹವಂ ನಿರ್ವಹಿಸದೆನ್ನಾಜ್ಞೆ ಇರದೆ
ಈ ಹಸ್ತಲಾಘಕ್ಕೆ ದಾಹಗೊಳ್ಳುತ, ತಮ್ಮ
ದೇಹವಂ ದಂಡಿಪರು ಜನರು ತರತರದೆ"

"ದ್ವಿಜ ಹಸ್ತಸೇರಿ, ನೀರಜ ಮುಖಿಯ ಶಿರವೇರಿ,
ರಜನಿಯೊಳ್ ಭದ್ರವಾಗಿಹೆ ಪಿಟಕದೊಳಗೆ
ದ್ವಿಜನ ಕೆರ ಸೇರ್ವ ನೀರಜ ಮುಖಿಯ ತಲೆಗಳ್ವೆ
ರಜನಿ ಸನ್ನಿಭನೆ ನಿಲ್ಲದಿರೆನ್ನ ಬಳಿಗೆ"

"ಬಡವನಾ ಬಿನ್ನಹದ ನುಡಿಗುತ್ತರವ ನೀಡು
ಪೊಡವಿಯಂ ನಡೆಯಿಸುವರಾರೆಂದು ಪೇಳು ?
ಘುಡು ಘುಡಿಸಿ ನುಡಿಯದಿರ್ ಹುಡುಗ ನೀನೆಲೆ ಚಿನ್ನ !
ಬಿಡುಬಿಡೀ ಮೂರ್ಖತೆಯ ಬುದ್ಧಿಯನೆ ತಾಳು !"

"ಲೋಕದೊಳ್ ನಾನೋರ್ವನೇಕಾಧಿಪತಿಯಾಗಿ,
ಲೋಕಮಂ ನಡೆಯಿಪೆಂ ಚಿರಕಾಲದಿಂದಂ
ಲೋಕದೊಳಗರಿವರಾರ್ ಕಾಕವರ್ಣನನಿಂದು ?
ಲೋಕಮಂ ನಡೆಯಿಪೆಯೆ ಎನ್ನಂದದಿಂದಂ ?"

ಲಿಪಿ/ಪಂಜೆ ಮಂಗೇಶರಾಯ

ತಾನಿಲದಿರ್ದೊಡಂ ಮಾನವರ್ ಚಿರಕಾಲ
ಹಾನಿಗೊಳ್ಳದೆ, ಸುಖಿಪ ಬಗೆ ನೋಡಿ ನೋಡಿ
ಮಾನಗಳೆದುಂ ಕನಕಮಿಾ ನೆಲಕೆ ಮುಗುಳೆ ಬಂ
ದಾ ನಮ್ರ ಭಾವ ತಳೆದದು ಚಿಂತೆಗೂಡಿ

ಮೈಗರೆದು ಕಬ್ಬುನಂ ಕೈಗಾಣದಂತಾದುದು
ದೈಗಳಿಗೆಯೊಳ್ ಜಗಂದುಃಖಸಾಗರದಲಿ
ಮೈಗೊಟ್ಟು ಮುಳುಗಿದುದು—ತ್ರೈಗುಣಾತ್ಮಕನೆ ! ಸಲ
ಹೈ ! ಗತಿಯದೋರೆಂದು ಬಹುದೀನಸ್ವರದಿಂ

ತೆರಳದೈ ಹಡಗಕಟ ! ಪೊರಳದೈ ಶಿಖಿಶಕಟ !
ಉರುಳದೈ ಯಂತ್ರದೊಳ್ ಚಕ್ರಗಳ್ ಭರದಿ !
ಪರಿದು ವಿದ್ಯುತಂತಿ, ಮುರಿದು ಕಂಬದ ಹಂತಿ
ಕೊರಲು ಕಟ್ಟಿದೊಲಾಯ್ತು ವ್ಯಾಪಾರ ಪುರದಿ

ಅರಿವೆ ನೇಯಂ ಜೇಡ ! ಕರಿಯು ಕೊಲ್ಲನು ಬೇಡ !
ಮರವ ಸಿಗಿಯಂ ಬಡಗಿಯುಳನೊಕ್ಕಲಿಗನು
ಧರುಮ ಸೇರಂ ವೀರ ! ನರಳುವಂ ಕಮ್ಮಾರ
ಬರಿಯ ನೂಲ್ ಪಿಡಿದು ಚಿಂತಿಪನು ಚಿಪ್ಪಿಗನೂ

ಸುರಿಗೆಯದು ತರಿಯದಿರೆ, ತುರಿಪ ಮಣೆ ತುರಿಯದಿರೆ,
ವರಶಾಪ ಪಾಕಗಳು ಮಿಲ್ಲ ಭೋಜನಕೆ
ಧರಣಿಯೊಳ್ ಕಬ್ಬುನಂ ಮೆರೆವಾಗೆ, ದಿನದಿನಂ
ಮರಣ ಜೀವಿತಮಾಯ್ತು ಸಕಲ ಭೂಜನಕೆ

# ಹೊಲೆಯನ ಹಾಡು

ಉಳ್ಳಯ್ಯಾ—ದಯೆಗೊಳ್ಳಯ್ಯಾ
ಜಟ್ಟಿದಿಕ್ಕಾ ಮಾರಿಮುಂಡ ಮುಂಡಾಳಾ
ಹುಟ್ಟು ಹೊಲೆಯಾ ! ಪೋಲ ! ಚಂಡ ಚಂಡಲಾ !
ಬೊಟ್ಟ ಬೊಗ್ಗುರೆ ಎಂದು ಹೆಸರೆತ್ತಿ ಕೂಗಿ,
ಮುಟ್ಟಲಂಜುವೆ ನಿಲ್ವೆ ದೂರಕ್ಕೆ ಹೋಗಿ !

ಹಾಸಿಗೆ ತಗಣೆಯು ಮುದ್ದಿಪ ನಿಮ್ಮ ಮೈಗೆ
ಹೇಸಿಗೆ ಅಹುದೆ ಮುಟ್ಟಲು ನಿಮ್ಮ ಕೈಗೆ ?
ವಾಸಕ್ಕೆ ನಮಗೂರ ಹೊರಗೊಂದು ಎಡೆಯೆ ?
ಆ ಸುದ್ದ ಹಂದಿ ನಾಯ್ಗಳಿಗಿಂತ ಕಡೆಯೆ ?

ನೋಡು ! ಸ್ವರಾಜ್ಯಕ್ಕೆ ನಾವೂರುಗೋಲು !
ನೋಡಣ್ಣ ದಮ್ಮಯ್ಯಾ ! ಕೊಡು ಸರೀಪಾಲು !
ಬೇಡಿದಾಗಲೆ ಬಿಟ್ಟು ಕೊಡುವುದೇ ಮೇಲು !
ಬೇಡ ನಾವು ಸೆಳೆದುಕೊಂಬೆವು ನಮ್ಮ ಪಾಲು !
ನಂದಿಸು ಕಿಡಿಯಲ್ಲಿ ಹೊಲೆಯನಾ ಹಗೆಯಾ !

# ಮಂಜೇಶ್ವರ ಗೋವಿಂದ ಪೈ

## ಅಂದಿದಿನಿಂದಾಕೆ ನಕ್ಕಿಲ್ಲ ಅತ್ತಿಲ್ಲ

ಮೂರು ಮಕ್ಕಳ ತಾಯಿ ಮೋಚಿ ತಿಂಗಳಿನೊಳಗೆ
ಆರೆಂಟರಿಬ್ಬರನು ಗುಡಿಸಲಲಿ ಬಿಟ್ಟು,
ಹೆರವರಲಿ ದುಡಿವಾಕೆ ಹೋದಳು ತರೆಯ ಬಳಿಗೆ,
ಹಸುಳೆ ಸೊಂಟದಿ ಕೆಯ್ಯ ಹರಕರುವೆ ಕಟ್ಟು
ಮನೆಯೆ ನೆರೆಮರದ ಪೊಟ್ಟರೆಯ ಹಕ್ಕಿಯ ಹಿಡಿಯ
ಲೇರಿದಾ ಮಕ್ಕಳಿಬ್ಬರನೊಂದು ಹಾವು
ಕಡಿದುದನವಳಿಗಾರೋ ಕಂಡವರರುಹೆ, ತಡೆಯ
ದೋಡಲೇನವರನಸುಗೊಂಡಿಹುದು ಸಾವು !
ಅತ್ತಳತ್ತಳು, ಸಂತವಿಸುವರಲ್ಲದೆ ತರುವೆ
ವೆನುವರಿಲ್ಲೆನಲಾಯ್ತು ಕೆರೆಯ ತಡಿಯಲ್ಲಿ
ಬಿಟ್ಟು ಶಿಶುವನು ನೆನಹು, ಮರೆತುದಿತ್ತಣ ಪರಿವೆ
ಬಂದು ನೋಡಿವಳಲ್ಲಿ ನೀರ ಮಡಿಲಲ್ಲಿ
ತೇಲ್ವ ಬಾಲಕನೊಡಲ ! ಮಾತನೆತ್ತಿಲ್ಲ
ಅಂದಿದಿನಿಂದಾಕೆ ನಕ್ಕಿಲ್ಲ, ಅತ್ತಿಲ್ಲ

# ಎಂ. ಆರ್. ಶ್ರೀನಿವಾಸಮೂರ್ತಿ

## ಒಂದು ಕಾಗದ

ನಿಮ್ಮ ಪತ್ರ ಬಂದು ಸೇರಿ
ಎರಡು ಮೂರು ಬಾರಿಯೋದಿ
ಎಲ್ಲ ತಿಳಿದೆನು.

ನೀವು ನನಗೆ ಗಂಡನಲ್ಲ
ನಾನು ನಿಮಗೆ ಹೆಂಡತಿಯಲ್ಲ
ನೀವು ತಿಳಿವುದು.

ಕುಂಟು ಕಾಲು ಬಚ್ಚು ಬಾಯಿ
ಮೆಳ್ಳಗಣ್ಣು, ನಿಮ್ಮ ಸೇವೆ
ಮಾಡಲಾರೆನು.

ಬ್ರಹ್ಮ ಹಿಂದೆ ಗಂಟು ಹಾಕಿ
ಗಂಡಹೆಂಡಿರಾದೆವೆಂದು
ನೀವು ಬರೆವಿರಿ.

ಬ್ರಹ್ಮಗಿಮ್ಮ ಹಾಕಲಿಲ್ಲ
ಅಪ್ಪ ತಂದು ನನಗೆ ನಿಮಗೆ
ಗಂಟುಹಾಕಿದ

೮೯/ಎಂ. ಆರ್. ಶ್ರೀನಿವಾಸಮೂರ್ತಿ

ಹೆತ್ತ ತಂದೆ ಮಾರಿಕೊಂಡು
ಮೃತ್ಯುವಾಗಿ ಕೊಲ್ಲಲಿಂತು
ಮಾಡಲೇನಿದೆ.

ಶಾಸ್ತ್ರ ಗೀಸ್ತ್ರ ತಿಳಿಯೆ ನಾನು
ಬರೆದ ಜನರು ಹೆಂಡಿರಾಗಿ
ಸೇವೆ ಮಾಡಲಿ.

ನೋಟ ಬೇಟ ಗಂಡಿಗೆಂದು
ಧರ್ಮಶಾಸ್ತ್ರ ಹೆಣ್ಣಿಗೆಂದು
ನುಡಿವರೆಲ್ಲರು.

ಕೋರ್ಟು ಗೀರ್ಟು ಆಡಬೇಡ
ಜಡ್ಜಿ ಧರ್ಮವೇನು ಬಲ್ಲ
ನಾನು ತಿಳಿಸುವೆ.

ಕುರ್ಚಿ ಮೇಲೆ ಕುಳಿತುಕೊಂಡು
ಏನೊ ಗೀಚಿ ಎದ್ದು ಬರುವ
ಮಾತಿದಲ್ಲವು.

ತನ್ನ ಮಗಳ ನಿಮಗೆ ಕೊಟ್ಟು
ತನ್ನ ಮಗನ ಎನಗೆ ಕೊಟ್ಟು
ಮದುವೆ ಮಾಡಲಿ.

ಎನ್ನ ದುಃಖ ಆರಿಗುಂಟು
ಬಾಳಬೇಕು, ಬಾಳಲಾರೆ
ಹಾಳು ಲೋಕವು.

ಬಯ್ವ ಜನರು ಜರಿವ ಜನರು
ಅವರಿಗೇನು, ಬಾಯಿ ಕೊಬ್ಬು
ನೋವು ತೆಗೆವರೆ ?

ಬಲ್ಲೆನವರ ಮನದ ಭಾವ
ಇಂದು ನಾನು ಸೂಳೆಯಾಗೆ
ಸುಖಿಪರೆಲ್ಲರು.

ಭೂಮಿ ಮೇಲೆ ಇರುವಳಲ್ಲ
ಇಂದೆ ನಾನು ಕೆರೆಗೆ ಬಿದ್ದು
ಜನ್ಮ ನೀಗುವೆ.

ಶಾಸ್ತ್ರ ಧರ್ಮ ತಣ್ಣಗಾಗಿ
ಬಯ್ದ ಜನರು ಉರಿದು ಹೋಗಿ
ಲೋಕವಡಗಲಿ.

೯೧/ಎಂ. ಆರ್. ಶ್ರೀನಿವಾಸಮೂರ್ತಿ

# ಶ್ರೀಧರ ಖಾನೋಳ್ಕರ

## ಕಾಲೂರ ಜೀವನ

ಯಾರಿಗ್ಹೇಳಲೀ ಮನದ ಉಮ್ಮಳಾ ಯಾರಿಗ್ಹೇಳಲೆವ್ವಾ ಗೆಳತಿ
ನೀನೆ ಕೇಳಿ ಸರುವಾ | ನನ್ನ ಮನ | ಕಹೀ ವಿಷಾ ಬೇವಾ
ಯಾಃ ಹೇಳಿದರೆ ಯಾರು ಕೇಳತಾರ ನನ್ನ ದುಃಖ ದೇವಾ || ಪ ||

ಅತ್ತಿ ಭಡಭಡೀ ಗಂಡ ಸಿಡಿಮಿಡೀ ತಿನ್ನತಾರ ಜೀವಾ | ಹಸಿದ
ಹುಲಿಹಾಂಗ ನನ್ನ ಮಾವಾ | ನೆಗೆಣಿಗೆ ಬರೋದಿಲ್ಲ ಸಾವಾ ||
ನನ್ನ ಮಕ್ಕಳಿಗೆ ಬೈದೇ ಬೈಯತಾನ ಹಂದಿಯಂಥ ಭಾವಾ—ಗೆಳತಿ—
ಯಾರಿಗ್ಹೇಳಲೀ....

ನೀರ ತಂದ ತಂದು ನೆತ್ತಿ ಸೋಲತದ, ಕುಳ್ಳ ಬಡದ ರಟ್ಟೀ | ಹಸಿದ
ವ್ಯಾಲ ಉರಿಯತದ ಹೊಟ್ಟೀ | ಬಡೆಯಬೇಕು ನಾನೇ
ಎಲ್ಲ ರೊಟ್ಟಿ | ಅಂದಗೇಡಿ ಗಂಡನ್ನ ಮಾಡಿಕೊಂಡ
ಹಡದೆ ಮೊಟ್ಟಮೊಟ್ಟ—ಯಾರಿಗ್ಹೇಳಲೀ........

ಕರಾ ಕಟ್ಟಬೇಕು, ದನಾ ಹಿಂಡಬೇಕು, ಹೊಲಾ ತುಳಿದು ಹರದಾರಿ
ಹತ್ತಬೇಕು ಬುತ್ತಿ ಕಟ್ಟಿ ಗುಡ್ಡದೇರಿ | ತಿನ್ನಬೇಕು ಬಿಸಿಲ
ಹಣ್ಣಿನಾ ಉರೀ | ಗಂಡ ಕೇಳಿದರೆ ಹೇಳಿ ಹೇಳಬೇಕು
ತಿಂದೆ ಸಕ್ಕರಿ ಪುರೀ—ಯಾರಿಗ್ಹೇಳಲೀ—

ತಂದೆ ತಾಯಿ ಬಡತನದಿ ಬಗ್ಗಿದಾರು ತವರಿನೂರು ಬರಲು ದೂರ
ಹ್ಯಾಂಗ ನಾ ಬಿಡಲಿ ಭರದ ಸಂಸಾರ | ನನ್ನ ಮೊಲಿ ಕುಡಿವ
ಕೂಸು ಭಂಗಾರ | ಹೊಟ್ಟಿಯೊಳಗಾರು ತಿಂಗಳಿನ ಬಸರಾ ||
ಹಬ್ಬಹುಣ್ಣಿಮೆಗೆ ಗಂಡನಾಡುವಾ ಪ್ರೀತಿ ಮಾತಿನಾಧಾರ—ಗೆಳತಿ

# ಮಾಸ್ತಿ ವೆಂಕಟೇಶ ಅಯ್ಯಂಗಾರ್

## ಎಂದು ತಿಳಿವುದೋ ಮನುಜಕುಲ

ಎಂದು ತಿಳಿವುದೋ ಮನುಜಕುಲ ತಾನು ಒಂದೆಂದು
ಬಿಳಿಯವನು ಕರಿಯವನ ತುಳಿಯುವುದು, ಯೇಹೂದ್ಯ
ತನಗೆ ದೇವರಿಗೆ ಏನೋ ಹೆಚ್ಚಿಕೆಯ ಬಾಧ್ಯ
ಇದೆ ಎನುತ ಬೀಗುವುದು, ಬ್ರಹ್ಮಮುಖದಿಂದಂದು
ಹೊರಟು ಬಂದೆವು ನಾವು ನಮಗಾರು ಸರಿಯೆಂದು
ಮತ್ತೊಬ್ಬನುಬ್ಬಿ ಉಳಿದೆಲ್ಲರನು ಹಳಿಯುವುದು
ನಾವಿಂತು ಒಂದೊಂದು ಡಂಭದಲಿ ಕೊಳೆಯುವುದು
ಎಂದು ಬಿಡುವೆವೂ ಜಗನ್ನಾಯಕನ ಕೃಪೆ ಸಂದು.
ಬಿಸಿಲಿನಲಿ ಮಲಗಿರುವ ತಾಯ ಮೊಲೆಯೆಡೆ ಸೇರಿ,
ಎರಡು ಕಣ್ತೆರೆದ, ಒಂದನು ತೆರೆದ, ಒಂದನೂ
ತೆರೆಯದಿಹ ನಾಯಿಮರಿ, ಹುಟ್ಟಿದೆರಡನೆಯ ದಿನ,
ಒಂದರೊಡನೊಂದು ಕಚ್ಚಾಡಿ, ಹೋಗೋಭಿಕಾರಿ,
ಹೋಗೊ ಬೆರಕೆ, ತೊಲಗು ನಾಯಲ್ಲ ಹಂದಿ ನೀ,
ಎಂದು ಕಾದುವ ತೆರದೆ ಕಾದುತಿದೆ ಜಗದ ಜನ

# ವಿ. ಸೀತಾರಾಮಯ್ಯ

## ಅಭೀಃ

ಕಾಡುವಮೌನವ ಸೀಳಿ ಹಬ್ಬುತಿದೆ ಕೇಳುತಿದೆ
ಬಿತ್ತರದ ದಿಕ್ತಟಗಳಡ್ಡಿ ದಾಟುತಿದೆ !
ಉಳಿದೆಲ್ಲ ನುಡಿಗಳನು ಮುಳುಗಿಸುತ ಮೊಳಗುತಿದೆ
—ಅಭೀಃ ! ಅಭೀಃ ! ಅಭೀಃ ! ಎಂಬಮೃತವಾಣಿಯಿದು
ಮೂವತ್ತು ಶತಮಾನಗಳ ಮೆಟ್ಟಿ ಕೇಳುತಿದೆ
ಬಾಳ ಹೆದ್ದಾರಿಯನು ಹಿಡಿದೆತ್ತಿ ತೋರುತಿದೆ
ಕಾಲದಾ ಕರೆಯಂಚಿನಾಚೆಯಿಂದ.

ಯಜ್ಞ ಶಾಲೆಗಳಿಂದ, ಬಲಿಯಿಂದ, ಸೆರೆಯಿಂದ
ತೊಂಡು ಮಲೆತೆಲ್ಲವನು ತುಳಿದತ್ತಣಿಂದ
ಕಲ್ಲುಗಾಣಗಳಿಂದ, ಸಿಲುಬೆಗಳ ನೋವಿಂದ
ವಿಷಪಾತ್ರೆಯೊಡಲಿಂದ ಸುಡುವುರಿಯ ಮಡಿಲಿಂದ
—ಅಭೀಃ ! ಅಭೀಃ ! ಅಭೀಃ ! ಎಂಬ ನುಡಿ ಏಳುತಿದೆ
ಹೇಡಿತನದಳುಕುಗಳ ಓಡಿಸಿದೆ ಚದರಿಸಿದೆ
ವೀರ ಸಂಜೀವನವ ಊಡಿಸುತಿದೆ !

ಬಲಹೀನರೆಂದೆತ್ತಲಾತ್ಮವನು ಗಳಿಸಿದರು ?
ಬಲಕಾಗಿ ಕಾಯ್ವವರು ಏಗೈವರು ?
ಛಲವೊತ್ತ ಅಧಿಕಾರದಂಡಲೆಗೆ ಬೆದರುವರು
ಎಂದೇನ ಸಾಧಿಸುವರೆಂದೆಮ್ಮ ಕೇಳುತಿದೆ

—ಅಭೀಃ ! ಅಭೀಃ ! ಅಭೀಃ ! ಎಂಬ ಸಗ್ಗದ ಬಿತ್ತು
ನರರ ಎದೆವೊಲಗಳಲಿ ಬೇರಿಟ್ಟು ವೊಳೆಯುತಿದೆ
ಬಲದ ತಿರುಳನು ಬಲಿಸಿ ಬೆಳಸುತ್ತಿದೆ !

ನಿಲ್ಲಿಸದು ಕೂಡಿಸದು ಕೆರಳಿಪುದು
ಆಡುವಾಟದ ನಡುವೆ ಕೂಟಗಳ ನಡುವೆ
ಆಸರಲಿ ಕಣ್ಣೆವೆಯು ಮುಚ್ಚಿ ಬರುತಿರಲತ್ತ
ಹೊಸ ತವಕದೊತ್ತಿನಲಿ ಮೇಲೆತ್ತಿದೆ !
—ಅಭೀಃ ! ಅಭೀಃ ! ಅಭೀಃ ! ಇದೆ ಮಂತ್ರವೆನ್ನುತ್ತೆ
ಎಂಟು ದಿಕ್ಕಿನ ಗಾಳಿಗುಸಿರೆತ್ತಿ ಊದುತಿದೆ !
ನೀಳ್ಗೊರಲ ತುತ್ತುರಿಯನೂದಿಸುತಿದೆ !

ಯುಗದಗಲ ಜಗದಗಲ ಎಡರೆದ್ದು ನಿಂತಾವು !
ಸಂರಾಜರಬ್ಬರವು ನಡುಗಿಸೀತು !
ಕುಲವೆಂಬ ಮತವೆಂಬ ಕೆಳೆಯೆಂಬ ನಾಡೆಂಬ
ಮಮತೆಗಳು ದಾರಿಯಲಿ ಕತ್ತಲಿಟ್ಟಾವು !
—ಅಭೀಃ ! ಅಭೀಃ ! ಅಭೀಃ ! ಎಂಬ ಧ್ರುವ ತಾರಗೆಯು
ಕತ್ತಲಲಿ ತವಿಲಲ್ಲಿ ದಿಕ್ಕನ್ನು ಕಾಣಿಪುದು
ನಿಜಕಿಟ್ಟ ಮುಸುಕೆತ್ತಿ ಮರೆ ತೆರೆವುದು.

ಮಣಿಯದಿಹ ಮನವೊಂದು, ಸಾಧಿಸುವ ಹಟವೊಂದು
ನಿಜದ ನೇರಕೆ ನಡೆವ ನಿಶ್ಚಲತೆಯೊಂದು
ಅನ್ಯಾಯಕೆಂದೆಂದು ಬಾಗದೆಚ್ಚರವೊಂದು
ಮರುಕಕ್ಕೆ ಪ್ರೇಮಕ್ಕೆ ಚಿರತೆರೆದ ಎದೆಯೊಂದು
—ಅಭೀಃ ! ಅಭೀಃ ! ಅಭೀಃ ! ಎಂಬ ತಾರಕ ವಾಕ್ಯ
ನಾಡಿಯನು ನಡೆಸುತಿರೆ, ಬಾಳನ್ನು ತಿದ್ದುತಿರೆ
ನಡೆ ಮುಂದಕೆನ್ನುತ್ತ ಕೂಗುತಿವೆ ನುಗ್ಗಿಸುತಿವೆ.

# ಕ್ರೋಧಕೇತನ

ಅದುವೆ ಕೇಳಿರಿ ಪ್ರಳಯ ಘೋಷವು ಏರಿ ಕವಿಯುತೆ ಬರುವುದು
ಗಣದ ತಂತ್ರವು ಧನಿಯ ರಕ್ತದಿ ನಾಂದು ಬಲಿವುದು ಎನ್ನುತೆ ;

1

'ಎಮ್ಮ ಕೇತನ ಗಣನಿಕೇತನ
ಕಾಡುಗಿಚ್ಚೇ ನಡಗೆಯು
ಎಮ್ಮ ದನಿಗಳೆ ಸಿಡಿಲು ಗುಡುಗು
ಉರಿಯ ಕಾರುವ ಮೋಡವು—'

'ಬಂಡವಾಳದ ಭಂಡ ಬಾಳನು
ಮುಗಿಸಿ ನೆತ್ತರ ಸುರಿವೆವು
ದುಡಿದು ಕೊರಗುವ ದಣಿದು ಸೊರಗುವ
ಶ್ರಮದ ಶ್ರಮವನು ಹರಿಪೆವು—'

'ಇದುವೆ ಕಾವಲು, ಇದುವೆ ಕೂಗು
ಇದುವೆ ಬಿಡುಗಡೆ ಬಾಗಿಲು
ಇದುವೆ ಆಸೆಯು, ಇದುವೆ ಆಸರು
ನಾಳೆಯೇಳ್ಗೆಯ ನೇಸರು—'

2

ಕರೆಯ ನುಂಗುವ ಅಲೆಗಳಂದದಿ ನೀಳವಾಗಿದೆ ಕೂಗದೋ
ಹಸಿವು ಬೇಗೆಗೆ ತಾರಿ ಕಂದಿದ ಒಡಲಡೊಗರಿಂವೆದ್ದುದು

ಹಗಲು ಇರುಳು ದುಡಿದು ದುಡಿದು, ಯಾರಿಗಾಹಾ ಬೆಳೆವೆವು
ಮನೆಯ ಮಕ್ಕಳ ಚಳಿಯ ನೀಗದ ನೆಯಿಗೆ ಯಾರಿಗೆ ನೆಯ್ವೆವು ?

ಹಾಲಿಗಿಲ್ಲದೆ ಹಸುಳೆಯಳಿವುವು ದಿನಕೆ ಸಾವಿರವಿದಿರಲಿ
ರೋಗಕೌಷಧಿ ಪಥ್ಯ ದೊರೆಯದೆ ಸಾವು ತಿಂಬುದು ಜನರನು

ಗೇಣು ಬಟ್ಟೆಯು ಸೆರಗು ಸಿಕ್ಕದೆ ಚಿಂದಿ ಚೂರುಗಳುಡುವೆವು
ಹೆಣ್ಣ ಮಾನವ ಕಾವೆನೆಂದರೆ ಕೋವಿಯುಂಜಿಕೆ ಸುಡುವುದು

ಮುಡದಿ ತಾಯ್ವಿರ ಕೊರಲ ತಾಳಿಯು ಕಾಯಲಾರದೆ ನರಳ್ವೆವು
ಮನವು ಬಾಯ್ಗಳು ಮಿಸುಕದಂದದಿ ಭಯದಿ ಉಸಿರನು ತಡೆವೆವು

ಬೀಡು ಬೀಡನು ತಿರುಗಿ ಬಿಡುಗಡೆಗಾಗಿ ಕಾದಿದ ಕಲಿಗಳು
ನಾಡ ಹಿರಿಯರು ವೀರಗುವರರು ನೋಡಿ ಸೆರೆಯಲಿ ಕೊಳೆವರು

ಎಮ್ಮ ಬಾಳಿನ ತಿರುಳು ಸಂತತ ಮಾರಿರಕ್ಕಸರೂಟವು
ಎಮ್ಮನಾಡಿನ ಹೂ ಹಣ್ಗಳು ಎಮ್ಮನೆತ್ತರ ಕುಡಿಗಳು

ಕೋಟಿದೇವರ ಕುರುಡು ಕಣ್ಗಳು ಷಂಡತೋಳ್ಗಳು ಕಾಯವು
ಕೋಟಿ ಮುವತ್ತೈದು ಮನುಜರ ನೋವು ಅಳಿಸದು ಸಿಗ್ಗನು

3

ತಗ್ಗಿ ಬಗ್ಗಿ, ಕುಗ್ಗಿ ನೆಗ್ಗಿ
ಹುಟ್ಟು ಹುಟ್ಟಗು ನವೆದೆವು
ತಂದೆ ಮಕ್ಕಳು ಸಾಹುಕಾರಗೆ
ಬಂದಿಯಾಗಿಯೆ ದುಡಿದೆವು

ನಿಮಿರಿ ನಿಲ್ಲುವ ಒಡಲು ಬಾಗಿತು
ಭುಜವು ಸೋತಿತು ಸೊರಗಿತು
ತೊಡೆಯ ಹಜ್ಜೆಯ ದೃಢವು ಕೆಟ್ಟಿತು
ಎದೆಯ ಗಂಡೇ ಹೀರಿತು

ಹೆರರ ಲಾಭಕೆ ದುಡಿವ ತೊತ್ತುಗ
ಳಾಗಿ ನೊಗವನು ಹೊತ್ತೆವು
ಅವರು ನೂಕಲು ಮುರಿದುಬಿದ್ದೆವು
ಅವರ ಕೋಪಕೆ ಮಣಿದೆವು

ಕೋಟಿ ಖಂಡುಗ ಧಾನ್ಯ ಬೆಳೆಯಲು
ಲಾಭ ಸಾಲದೆ ಸುಡುವರು
ಕೋಟಿ ಮಕ್ಕಳು ಹಸಿದು ಸತ್ತರು
ಕಡಲ್ಗೆ ಹಾಲನು ಸುರಿವರು

ನಾಡು ನಾಡಿನ ಜೀತ ಜೀವಿಕೆ
ಇವರ ಕುದುವಿಗೆ ಸೆರೆಗಳು
ಇವರ ಹೆಜ್ಜೆಯ ನೊಗದ ಭಾರಕೆ
ಬೆವರುತಾತ್ಮವು ಕುಸಿವುವು

ಯಾರೋ ಉಳುವರು ಯಾರೊ ದಣಿವರು
ಯಾರೊ ಕೊಯ್ವರು ತಿಂಬರು
ಯಾರೊ ನಗುವರು ಯಾರೊ ಕುಣಿವರು
ಯಾರೊ ಬೆವರನು ಬಸಿವರು !

4

ಅಸ್ಥಿಚರ್ಮದ ಭಾಗ್ಯವಂತರೆ, ಬನ್ನಿ ಕಾಣಿರಿ, ನಲಿಯಿರಿ
ನಿಮ್ಮ ಯೋಗದ ಮಸಣವೀಡಿಗೆ ಹೊಸ ನಿಕೇತನ ಬರುತಿದೆ

ಧರ್ಮದೇವರು ಕಟ್ಟುಕಟ್ಟಳೆ ಯಾರಿಗೀ ಯಮಪಾಶವು
ಕರುಣೆಯಿಲ್ಲದ ಧನಿಕರಾಯರ ಮನೆಯ ಕಾಪಿನ ತಂತ್ರವು

ಮಿಂಚುಮಿಂಚಲಿ ಸಿಡಿಲು ಸಿಡಿಯಲಿ ಧನದ ಸೊಕ್ಕುಗಳುರಿಯಲಿ
ಮುರಿದ ಮನಗಳು ಒಡೆದ ಎದೆಗಳು ಶಿವಗೆ ಮಾಲೆಗಳಾಗಲಿ.

# ಆದ್ಯ ರಂಗಾಚಾರ್ಯ

## ಎಲ್ಲಾರು ಒಂದೇ

ನಾ ಬ್ಯಾರಿ ನೀ ಬ್ಯಾರಿ | ಅನಬೇಡ ನನಗೆಣೆಯ |
ಎಲ್ಲಾರು ನಾವು ಒಂದೇ || ಹೋ ಹೋ ಹೋ ||

1

ಗದ್ದೀಗ ಬೆಳೆಯಾಗಿ || ಗದ್ದೀಗ ಬೆಳೆಯಾಗಿ
ಕಣಜಕ್ಕ ಭತ್ತಾಗಿ
ಅಡಗೀಗ ಅಕ್ಕ್ಯಾಗಿ
ಊಟಕ್ಕ ಅನ್ನಾಗಿ
ಸಗತೀಗ ರಗತಾಗಿ || ಹೋ || ಸಗತೀಗ ರಗತಾಗಿ ||

ಅದು ಬ್ಯಾರಿ ಇದು ಬ್ಯಾರಿ ಅನಬೇಡ ನನಗೆಣೆಯ
ಇದ್ದಾಗ ಎಲ್ಲಾ ಒಂದೇ || ಹೋ ಹೋ ಹೋ ||

2

ಇಲ್ಲಾಗ ಬರ್ತೈತಿ | ಠಕ್ತನ ಫಜೀತಿ |
ಇದ್ದವ್ನ ಬ್ಯಾರೆ ರೀತಿ || ಹೋ ಹೋ ಹೋ ||

ಗದ್ದೀಗ ಲೆಕ್ಕಾಗಿ || ಗದ್ದೀಗ ಲೆಕ್ಕಾಗಿ—
ಕಣಜಕ್ಕ ರೊಕ್ಕಾಗಿ
ಊಟಕ್ಕ ಚೊಕ್ಕಾಗಿ || ಹೋ ||

ಇಲ್ದವನ ದುಕ್ಕಾಗಿ
ಗಂಟ್ಲಾನ ಸಿಕ್ಕಾಗಿ
ಸಾಲಕ ಪಕ್ಕಾಗಿ || ಹೋ ಹೋ ಹೋ ||

ಇದ್ದವ್ಗ ಅದು ಗಂಟು | ಇಲ್ದವ್ಗ ಬರಿ ದಂಟು || ಹೋ ||
ಅಪಬ್ಯಾರಿ ಇವಬ್ಯಾರಿ | ಅನಬ್ಯಾಡ ನನಗೆಣೆಯಾ
ಇಬ್ಬರು ಕೂಡಿ ಒಂದೇ || ಹೋ ಹೋ ಹೋ ||

# ಪುರಾಣ ಪ್ರಶ್ನೆ

ವ್ಯಾಸನು ಬರೆದನು ಭಾರತ ಕತೆಯನು
ವಾಲ್ಮೀಕಿಯು ರಾಮಾಯಣವ
ಸಾಸಿರವರ್ಷಗಳಾದರವುಗಳನು
ಬೇಸರವಿಲ್ಲದೆ ಸವಿಯುವ ನಿಮ್ಮನು
ಕೇಳುವೆನೆನ್ನಯ ಸಂಶಯವ

ಪಾಂಡವ ಘನತೆಗೆ ಕೌರವ ನೀಚತೆ
ತಳಹದಿಯಾಗಲು ಬೇಕಿತ್ತೆ ?
ಕಂಡ ಕಂಡ ಪಾಪಕೆ ಮನಸೆಳೆಯುತೆ
ಭಂಡನು ರಾವಣ ರಾಕ್ಷಸನೆನ್ನುತೆ
ರಾಮ ದೇವನೆನಬೇಕಿತ್ತೆ ?

ದುಷ್ಟರದಾರು ? ಶಿಷ್ಟರದಾರು ?
ಪಾಪ ಪುಣ್ಯ ನಿರ್ಣಯವೆಂತು ?
ಮುಷ್ಟಾ ಮುಷ್ಟಿಗೆ ನಿಂತರೆಂದರು
'ಶ್ರೇಷ್ಠನೆ ಗೆದ್ದವ ಸೋತರೆ ದುಷ್ಟರು
ಕೆಳತುಳಿವುದೆ ಮೇಲ್ಮೆಯದೆಂದು'

ಹುಟ್ಟುವ ಮಾನವ ಕೆಟ್ಟವನಿಹನೆ
ಪಾಪವೆ ಬಾಳುವ ಆಸೆಯಿರೆ ?
ಹುಟ್ಟಿದು ಬೆಳೆವುದೆ ಸೃಷ್ಟಿ ನಿಯಮವೆನೆ
ಹೊಟ್ಟೆಗಿಲ್ಲ ಬೆಲೆ ಬಾಳಿನ ಬೆಳೆಯನೆ
ತಡೆವವನೇ ಪಾತಕೀ ಎನರೆ ?

ಮಾನವಕೋಟಿಯು ಅಜ್ಞಾನದಲಿರೆ
ತಾನು ಸುಜ್ಞ ಎನ್ನುವುದು ಪಾಪ
ಮಾನವಕೋಟಿಯು ಕೂಳಿಗೆ ಬಕ್ಕರೆ
ಕಾಣದೆ, ಬಡತನ ಬವಣೆ ಹಿಂಗದಿರೆ
ಸಿರಿ ತನ್ನದು ನರಕದ ಕೂಪ.

# ದ. ರಾ. ಬೇಂದ್ರೆ

## ಪುಟ್ಟ ವಿಧವೆ

ಆಕೆಯಿದ್ದಳು ಕೂಸು, ಈತನಿನ್ನೂ ಹುಡುಗ
ಅವರ ತಾಯ್ತಂದೆಗಳ ಹಿಗ್ಗು ಎಷ್ಟು !
ಧರ್ಮದಾ ಹೆಸರಿನಲಿ ಅವರ ಕೈ ಕೂಡಿಸಲು
ಇವರಿಗೆನಿಸಿತು ಹರ್ಷ ಹಬ್ಬದಷ್ಟು
ಕೊರಳ ಕರಿಮಣಿ, ಗಲ್ಲದರಿಷಿಣವು ಮೂಗುಬೊಟ್ಟು
ಆನೋಲೆ ಉದ್ದು ಕುಂಕುಮದ ಅಂದ !
ಆ ಪುಟ್ಟ ಮುತ್ತೈದೆ ಪುಟ ಪುಟನೆ ನೆಗೆದಾಡೆ
ಅಷ್ಟೆ ಕಂಡಿತು ಕಣ್ಣಿಗೆಷ್ಟೋ ಚಂದ
ಆಕೆ ದೊಡ್ಡವಳಾಗಿ, ಈತ ಚಿಕ್ಕವನಿದ್ದು
ಶೋಭನವ ಮಾಡಿದ್ದು ಊರಿಗಾಟ !
ಪೆಚ್ಚು ಮೋರೆಯ ಅಳಿಯ ದೇವರಿದಿರಲಿ ಜನಕೆ
ಕಡಿಮೆ ಸಹಸಿಹಿಯೆನಿಸಿತ್ತೆ ಪ್ರಸ್ತದೂಟ ?

ವರ್ಷವೆಂಬುದರೊಳಗೆ ಚೊಚ್ಚಲದ ಸಂಭ್ರಮವು
ದೈವದಾಟವು ಎಂದಿತಿಡಿಯ ಊರು
ಮಗನು ಬಂದಿರೆ ಇಹಕೆ, ತಂದೆ ಏರಿದ ಪರಕೆ ;
ಕ್ಷೀರ ಸಾಗರವಾಯ್ತು ಉಪ್ಪು ನೀರು
ತಂದೆ ಹಿಡಿದಿಹ ಹಾದಿ ಒಂದೆರಡು ದಿನದಲ್ಲಿ
ಕೂಸು ಹಿಡಿದಿತು ; ತಾಯಿಗುಳಿದಿತೇನು ?
ಮೈ ಗೋರಿಯಲಿ ಮಡಗಿ ಜೀವ, ಜೀವನವಾಯ್ತು
ಜೇನು ಹುಳ ಉಳಿದಂತೆ ಕಳೆದ ಜೇನು

ಸತ್ತನೆಂದೆಳು ಕೂಸು—ತಾಯಿ ಅಯ್ಯೋ
ಭೋರೆಂದು ಗೋಳಿಟ್ಟು ಹೊಟ್ಟೆ ಹೊಸೆದು
ಹುಚ್ಚಿದ್ದು ಹೌಹಾರಿ ಹುಯ್ಯಲಿಟ್ಟಳು ಆಕೆ
ತನ್ನ ತಾ ಶಪಿಸಿದಳು ಹಲ್ಲ ಮಸೆದು.
ಹತ್ತು ದಿವಸಕೆ ಹಾಳು ಮುತ್ತೈದೆತನ ಹೋಗಿ
ವೈಧವ್ಯ ಸಂಪತ್ತು ಪಡೆದಳಾಕೆ ;
ಮನೆಯವರು ವೈದಿಕರು, ಊರು ಧರ್ಮದ ತವರು ;
ಶಾಸ್ತ್ರವಿರೆ ಬೇರೆಯ ವಿಚಾರವೇಕೆ ?
ತಲೆಭಾರ ಇಳಿದಿತ್ತು ಅಂಗಾರ ಬೆಳೆದಿತ್ತು
ಮೈಯನ್ನು ಮುಚ್ಚಿತ್ತು ಕೆಂಪು ಸೀರೆ
ಆದರಯ್ಯೋ ಪಾಪ ! ಆಕೆಯಿನ್ನೂ ಮಗುವು
ಸಿಂಗಾರವಿದೆ ? ಆ ಮಾತೆ ಬೇರೆ
ಹಿಟ್ಟು ಅಪಲಕ್ಕಿಗಳ ಮೂಲಕ್ಕೆ ಹುಟ್ಟಿದಳೋ
ಹೂ ಬತ್ತಿ ಹೊಸೆಯಲಿಕೆ ಮೈ ತಳೆದಳೋ !
ಎಂಬಂತೆ ಬಾಳ ಕಳೆದಳು ಬಾಲೆ ; ಹೂಮಾಲೆ
ಮುಳ್ಳು ಕಂಟೆಯ ಮೇಲೆ ತಾನೆಳೆದಳೋ !
ನಿಟ್ಟುಸಿರ ಸರದಲ್ಲಿ ಕಂಬನಿಯ ಪೋಣಿಸುತ
ಪುಟ್ಟ ವಿಧವೆಯು ಪುರಾಣಕ್ಕೆ ಬರಲು
ಗುಡಿಯ ಮೂರ್ತಿಗೆ ಮಂಕು ಹಿಡಿದು, ಆಚಾರ್ಯರಿಗು
ಉರುಲಿಕ್ಕಿದಂತೆ ಬಿಗಿದಿತ್ತು ಕೊರಲು
ಕುರುಡು ಧರ್ಮಕ್ಕೆ ಸ್ಮಾರಕವು ನಿಂತಂತಾಕೆ
ಮೈ ಮರೆತು ನಿಂತಾಗ್ಗೆ ಗೂಗೆ ಹಾಡಿತ್ತು
ಮುದ್ರೆಯೊತ್ತುವ ಕಣ್ಣು ಮೋರೆ ನೋಡಿತ್ತೊಮ್ಮೆ
ಜಾರ ಕೃಷ್ಣನ ಕಥೆಗೆ ಕೋಡು ಮೂಡಿತ್ತು !

# ಎದೆಯ ಒಕ್ಕಲಿಗನ ಹಾಡು

ತತ್ ಎನ್ನು ತತ್ತಿಗೆ | ಬಿತ್ತೆನ್ನು ಬಿತ್ತಿಗೆ
ಸತ್ ಎನ್ನು ಕುತ್ತಿಗೆ—ಮುತ್ತಿಗೆ
ಮಿಂಚಾದ ಚಿತ್ತಿಗೆ | ಸ್ವಾತಿ ತುಟಿ ಮುತ್ತಿಗೆ
ನೇಸರು ಏರಿದನೋ ! ನೆತ್ತಿಗೆ
ನೀರು ಬಿಡು ಹೋರಿ, ಎತ್ತಿಗೆ.

ಎದೆಯ ಕಮ್ಮಟದಾಗ, ಒಲುಮಿಯ ಕುಲುಮಿಯೋ
ಆಡಿಗಲ್ಲ ಮ್ಯಾಲೈತಿ ಸುತ್ತಿಗೆ
ಹೊತ್ತಿಗೆ ಹೊತ್ತಿಗೆ | ಢಣ ಢಣ ದೀಪಾ—ಗಂಟಿ
ಒಲವಿನ ಬಲ ಐತಿ ಜತ್ತಿಗೆ
ಬಾರಣ್ಣ ಬಾತಮ್ಮ ಒತ್ತಿಗೆ

ಕಲ್ಲಾದ ದೇವರು ಮಣ್ಣಾದ ದೇವರು
ಬೂದ್ಯಾದ ದೇವರು ಹೋದಾರೋ
ಬಣ್ಣಾದ ದೇವರು ಸುಣ್ಣಾದ ದೇವರು
ಕಣ್ಣಾದ ದೇವರು ಬಂದಾರೋ
ವರಬೇಡೊ ವರಬೇಡೋ ಎಂದಾರೋ

"ರವಿಚಂದ್ರ ಮನಿ ದೀಪ ! ನೆಲಕೆ ನೀರು ಸಮೀಪ
ಮನುಷ್ಯಾರ ಕುಲಮೂಲ ಒಂದಾಗಿ
ಸತ್ಯವಂತರಾಗಿ ನಿತ್ಯವಂತರಾಗಿ
ಬಾಳುವೆ ಮಾಡಲಿ ಚೆಂದಾಗಿ
ದೇವರ ಬೆಳಕಾಗಿ ಮುಂದಾಗಿ"

ಗಿರಿಶ/ದ. ರಾ. ಬೇಂದ್ರೆ

## ಭೂಮಿತಾಯಿಯ ಚೊಚ್ಚಲು ಮಗ

ಭೂಮಿ ತಾಯಿಯಾ
ಚೊಚ್ಚಲ ಮಗನನು
ಕಣ್ತೆರದೊಮ್ಮೆ
ನೋಡಿಹರೇನು ?
ಮುಗಿಲೆಂಬುವದು
ಕಿಸಿದಿತು ಹಲ್ಲು !
ಬಂದಾ ಬೆಳೆಯು
ಮಿಡಿಚಿಯ ಮೇವು ;
ಬತ್ತಿದ್ದಾಯಿತು
ಉತ್ತಿಹ ಮಣ್ಣು !
ದಿನವೂ ಸಂಜೆಗೆ
ಬೆವರಿನ ಜಳಕ,
ಉಸಿರಿನ ಕೂಳಿಗೆ
ಕಂಬನಿ ನೀರು !
ಹೊಟ್ಟೆಯು ಹತ್ತಿತು
ಬೆನ್ನಿನ ಬೆನ್ನು !
ಎದೆಯ ಗೂಡಿನೊಳು
ಚಿಂತೆಯ ಗೂಗಿ !
ಮಿದುಳಿನ ಮೂಲೆಗೆ
ಲೊಟ ಲೊಟ ಹಲ್ಲಿ
ಮೋರೆಯು ಸಾವನು
ಅಣಕಿಸುತಿಹುದು
ಕೊರಳಿಗೆ ಹತ್ತಿದೆ
ಸಾಲದ ಶೂಲ !
ಆದರು ಬರದೋ
ಯಮನಿಗೆ ಕರುಣ
ಉಸಿರಿಗೆ ಒಮ್ಮೆ
ಜನನಾ ಮರಣ
ನರಗಳ ನೂಲಿನ

ಪರಿಪರಿ ಚೀಲಾ
ತೆರೆ ತೆರೆಯಾಗಿದೆ
ಜಿರಿಜಿರಿಯಾಗಿದೆ ;
ಅದರೊಳಗೊಂದು
ಎಲುವಿನ ಬಲೆಯು
ಟುಕು ಟುಕು ಡುಗು ಡುಗು
ಉಲಿಯುವ ನರಳುವ
ಜೀವದ ಜಂತು
ಹೊರಳುತ ಉರುಳುತ ;
ಜನುಮುವೆಂಬುವಾ
ಕತ್ತಲೆಯಲ್ಲಿ
ಬಿದ್ದಿದೆ ಒಳಗೆ
ಹೇಗೋ ಬಂದು !
ಸಾವಿನ ಬೆಳಕದು
ಕಾಣುವದೆಂದು ?
ಎಂದೋ ಎಂದೋ
ಎಂದೋ ಎಂದು
ಕನಕರಿಸುವದು
ತಳಮಳಿಸುವದು !

# ಅನ್ನಯಜ್ಞ

ಕೂಸುಗಳಿಗೆ ಹಾಲು ಇಲ್ಲ, ಪಶುಬಲಿಯೇ ನಡೆದಿದೆ
ಕಾಳು ಇದೆ ಕೂಳು ಇಲ್ಲ ಹಣದ ಹುಚ್ಚು ಹಿಡಿದಿದೆ
ಕತ್ತಲಲ್ಲಿ ಬೆಳಕೆ ಇಲ್ಲ, ಜಗಕೆ ಬೆಂಕಿ ಹತ್ತಿದೆ,
ಎಲ್ಲ ಇದೆ ಎಲ್ಲ ಇಲ್ಲ, ಇಲ್ಲೆ ಸುತ್ತು ಮುತ್ತಿದೆ

ಸಾಕು ಎಂಬುವಂತೆ ನೀಡು, ಬೇಕು ಎಂಬ ಹೊತ್ತಿಗೆ
ಬೆಣ್ಣೆ ಎಣ್ಣೆ ಎರೆಯಬನ್ನಿ ಹಸಿದ ಹೊಟ್ಟೆ–ನೆತ್ತಿಗೆ

ಬರುವ ಸಾವ ನೆನೆದು ಕೆಲವು ತಿನ್ನುತಿಹವು ಹೆಚ್ಚಿಗೆ
ಕಾಳು ಸಾಲದೀಗ ಜನದ ಇರುವ ಹೊಟ್ಟೆಕಿಚ್ಚಿಗೆ
ಇದ ಕಂಡೂ ಕಂಡು ಕೂಡ ಏಳಬೇಡ ರೊಚ್ಚಿಗೆ
ಇದರ ಹೊಟ್ಟೆಯಲ್ಲಿ ಹುಟ್ಟಿತೀ ಪಿಶಾಚಿ ಹುಚ್ಚಿಗೆ

ಬಾಳ್ಮೆಯಲ್ಲಿ ತಾಳ್ಮೆಬೇಕು ಬದುಕಬೇಕು ಎಂದರೆ
ಜೀವವೆ ಸಾವಾಗಬಹುದು ಬಚ್ಚಬರಿಯೆ ನೊಂದರೆ

ಖಣವುರಣವು, ಜನವು ಹೆಣವು ಸಾವಿಗಾಗಿ ದುಡಿವರೇ ?
ಯಾರ ಬಾಳಿಗಾಗಿ ಯಾರೊ ಯಾವ್ರೋ ಕೈಗೆ ಮಡಿವರೇ ?
ಕಾವ ಕೈಯ್ಯೆ ಕೊಲ್ಲುತಿಹವು ! ಮರಣದತ್ತ ನಡೆದರೇ
ಸಾವಿಗಾಗಿ ತಪಿಸುವವರು ಬಾಳ–ಬೀಜ ಹಿಡಿವರೇ ?

ಕಣ್ಣೀರಿನ ಕಡಲ ನಡುವೆ ತೇಲುತಿಹವು ನೆಲಗಳು
ತಾಯಿ–ಹಾಲು ಕುದಿಯುತಿಹುದು ಕೆಂಪೇರಲು ಜಲಗಳು

# ತುತ್ತಿನ ಚೀಲ

ಅನ್ನ ಬ್ರಹ್ಮದ
ದೇಗುಲದಲ್ಲಿ
ಬೆಳಗೂ ಬೈಗೂ
ಛಿಟ ಛಿಟ ಬೆಂಕಿ
ಡೊಂಬರ ಪೂಜೆಯು,
ಕಾಗೆಯ ಮಂತ್ರ
ಗಾಳಿಯ ಎಡೆಯು,
ಬೊಬ್ಬೆಯ ಗಂಟೆ
ಅನ್ನ ಬ್ರಹ್ಮದ
ದೇಗುಲದಲ್ಲಿ !

ನಾದ ಬ್ರಹ್ಮದ
ಕಗ್ಗವಿಯಲ್ಲಿ
ಮೌನದ ವೀಣೆಗೆ
ಕರುಳಿನ ತಂತಿ
ಮಿಡಿದೂ ಮಿಡಿದೂ
ಮುರಿದವು ಬೆರಳು
ಮಿಡುಕೀ ಮಿಡುಕೀ
ನೊಂದಿತು ಎದೆಯು
ನಾದ ಬ್ರಹ್ಮದ
ಕಗ್ಗವಿಯಲ್ಲಿ !

ಶಬ್ದ ಬ್ರಹ್ಮದ
ಗುಮ್ಮಟದಲ್ಲಿ
ಹಗಲೂ ಇರುಳೂ
ವೇದದ ವಾದ,
ಪಾಪ ಪುಣ್ಯಗಳ
ಜಾಳಿಗೆಯಲ್ಲಿ

ನೇತಿದೆ ಜೋತಿದೆ
ಜೀವದ ಜೇಡ—
ಶಬ್ದ ಬ್ರಹ್ಮದ
ಗುಮ್ಮಟದಲ್ಲಿ !

ದೈವುಳ್ಳವರಿಗೆ
ದಯವೇ ಇಲ್ಲ !
ತಿತ್ತಿರೆ ತುಂಬಿದೆ
ಕೊಳಿನ ಕೋಟೆ
ಬಿಡುಗಣ್ಣವರಿಗೆ
ಕಾಣುವುದಿಲ್ಲ
ಅಮೃತ ತೇಗಿನ
ಮದವಂತಹುದು
ಹಸಿದವ ಬಲ್ಲ !
ಹಸಿವೆಯ ಶೂಲ !
ಶಿವಾ ಶಿವಾ ಹೇ !
ಶಿವ ಮಾದೇವಾ
ಅತ್ತಿತು ಕೂಗಿತು
ಚೀರಿತು ಜೀವ
ಬಾಯಂಗಳದಲ್ಲಿ
ಹುಟ್ಟದ ಮಾತು
ಮುಗಿಲಿನ ಕಿವಿಯನು
ಮುಟ್ಟಲೆ ಇಲ್ಲ ;
ಹಾಡುವ ಸಭೆಯಲಿ
ನರಳುವುದುಂಟೆ ?
ಕಿಕ್ಕಿರಿ ತುಂಬಿದೆ
ಭೂಮಿಯ ಕಣಜ
ಕಕ್ಕಸ ಬಡುತಿದೆ
ಬೊಕ್ಕಸದೊಡಲು
ಬಾಳಿಗಿಂತಲೂ
ಕೂಳೇ ಮೇಲೊ ?

ಬರಿದೋ ಬರಿದು
ತೆರವೋ ತೆರವೂ
ಬಡವರ ಬಗ್ಗರ
ತುತ್ತಿನ ಚೀಲಾ

ದೇವರದೊಂದು
ಗೋರಿಯ ಕಟ್ಟಿ
ಧರ್ಮದ ಧೂಪಕೆ
ಬೆಂಕಿಯನಿಕ್ಕಿ
ಗಣ ಗಣ ಬಾರಿಸಿ
ಪ್ರಾಣದ ಗಂಟೆಯ
ಸಾವಿನ ನೋವಿಗೆ
ಕಲಮಲವೆದ್ದು
ನೆಲವನ್ನೆಲ್ಲಾ
ತುತ್ತುವೆನೆಂದು
ಗದರುತ್ತಿಹುದು
ಗರ್ಜಿಸುತಿಹುದು
ಬಡವರ ಬಗ್ಗರ
ತುತ್ತಿನ ಚೀಲದ
ಒಳಗಿನ ಒಳಗಿನ
ಒಳದನಿಯೊಂದು !

# ದುಡ್ಡು – ದುಡಿತ

ದುಡಿತನು–ದುಡ್ಡು ಕೂಡಿ । ಒಡೆತನ ನಡೆಸಿದರ
ಕಡೆತನ ಉಳಿದೀತು । ಕಾರಭಾರಾ ।
ಬಡತನ ಬಂತಂತ । ಬೊಡ್ಡಿತನ ಮಾಡಿದರ
ಬದುಕನು ಆದೀತು । ತಲೆ ಭಾರಾ ॥ ಹಾ–ಜೀ–ಜೀ–ಜೀ– ॥

ಅತ್ತೀದು ಒಂದು ಕಾಲ ಸೊಸೀದು ಒಂದು ಕಾಲ
ಅವರವರ್ಗೆ ಅವರ ಕಾಲ ಒಂದೈತಿ
ಆಳಾವರ್ಗು ಒಂದು ಕಾಲ ಆಳುಗಳಿಗೆ ಒಂದು ಕಾಲ
ದುಡಿದವ್ಗ ದುಡ್ಡಿನ ಕಾಲ ಬಂದೈತಿ ॥ ಹಾ–ಜೀ–ಜೀ– ॥

ಅಜ್ಜಾ ಆರುತಲಿ ಮುತ್ತ್ಯಾ ಮೂರುತಲಿ
ಕಚ್ಯಾಡಿ ಗಳಿಸಿದ್ದು ಕಳಿದಾರೋ
ನಿನ್ನಿನ ಮಂದಿ ಇಂದನ ಇಲ್ಲಾ
ಇಂದಿನವರು ಮುಂದ ಹ್ಯಾಂಗ ಉಳಿದಾರೋ ॥ ಹಾ–ಜೀ–ಜೀ– ॥

ಕೈ ಕಾಲು ಕೂಡಿಕೊಂಡು । ಹೊಟ್ಟೀಗೆ ಹಾಕದಿದ್ದರೆ
ರಟ್ಟೀಗ ಬಲ ಹ್ಯಾಂಗ ಬರಬೇಕು
ಸೆಟ್ಟಿ ಸಂಸಾರಾಂತ ಮೊಟ್ಟೆಯ ಕಟ್ಟಿಧಾಂಗ
ಹೊಟ್ಟೀನ ಬೆಳಸಿವರೆ ಹ್ಯಾಂಗಿರಬೇಕು ॥ ಹಾ–ಜೀ–ಜೀ– ॥

ಹೊಲ ಮಾಡುವವ್ಗ ನೆಲಾನ ಇಲ್ದಿದ್ದರ್
ಬಲಾ ಹ್ಯಂಗಾರೆ ಅವಗ ಉಳಿದೀತು
ಹಲಾ ಹಲಾ ಅಂತ ಎತ್ತಿನ್ನ ಗುದ್ದಿದರೆ
ಬಿತ್ತದ ಹೊಲಾ ಹ್ಯಾಂಗ ಬೆಳದೀತು ॥ ಹಾ–ಜೀ–ಜೀ– ॥

# ಕುರುಡು ಕಾಂಚಾಣ

ಕುರುಡು ಕಾಂಚಾಣ ಕುಣಿಯುತಲಿತ್ತು
ಕಾಲಿಗೆ ಬಿದ್ದವರ ತುಳಿಯುತಲಿತ್ತೋ || ಕುರುಡು ಕಾಂಚಾಣ ||

ಬಾಣಂತಿಯೆಲುಬು ಸಾ
ಬಾಣದ ಬಿಳುಪಿನ
ಕಾಣದ ಕಿರುಗೆಜ್ಜೆ ಕಾಲಾಗ ಇತ್ತೋ ;
ಸಣ್ಣ ಕಂದಮ್ಮಗಳ
ಕಣ್ಣಿನ ಕವಡೀಯ
ತಣ್ಣನ್ನ ಜೋಮಾಲಿ ಕೊರಳೊಳಗಿತ್ತೋ ;

ಬಡವರ ಒಡಲಿನ
ಬಡಬಾನಲದಲ್ಲಿ
ಸುಡು ಸುಡು ಪಂಜು ಕೈಯೊಳಗಿತ್ತೋ
ಕಂಬನಿ ಕುಡಿಯುವ
ಹುಂಬ ಬಾಯಿಲೆ ವ್ಯೆ—
ದುಂಬಿದಂತುಧೋಉಧೋ ಎನ್ನುತ್ತಲಿತ್ತೋ ;

ಕೂಲಿ ಕುಂಬಳಿಯವರ
ಪಾಲಿನ ವ್ಯೆದೊಗಲ
ಧೂಳಿಯ ಭಂಡಾರ ಹಣೆಯೊಳಗಿತ್ತೋ ;
ಗುಡಿಯೊಳಗೆ ಗಣಣ, ಮಾ
ಹಡಿಯೊಳಗ ತನನ, ಅಂ
ಗಡಿಯೊಳಗೆ ಝಣಣಣ ನುಡಿಗೊಡುತ್ತಿತ್ತೋ ;

ಹ್ಯಾಂಗಾರೆ ಕುಣಿಕುಣಿದು
ಮಂಗಾಟ ನಡೆದಾಗ
ಅಂಗಾತ ಬಿತ್ತೋ, ಹೆಗಲಲಿ ಎತ್ತೋ.

# ಬೆಟಗೇರಿ ಕೃಷ್ಣಶರ್ಮ

## ಬಾಳಿದು ಕಾಳಗದ ಕಣ

ಬಿಡಿರಿ ಬಿಡಿರಿ ಹಳೆಯಾಯುಧ
ಕೊಡಲಿಕತ್ತಿ ಬಿಲ್ಲು ಗದಾ—
ಹೊಸತುಕಾಲ ಹೊಸ ಕಾಳಗ
ಹೊಸ ಕೈದುವ ಹುಡುಕಿರೀಗ
ಕೂಗುತಲಿದೆ ಕಹಳೆಯು
ನವಯುಗ ವೈತಾಳಿಯು

ಬಲಿದಿರುವುವೆ ಜಾಲಗಳು ?
ಬಳಸಿರುವುವೆ ಬೇಲಿಗಳು
ಹರಿದೊಗೆಯಿರಿ ಕೊಳೆತ ಜಾಲ
ಮುರಿದೇಳಿರಿ ಹುಳಿತ ಬೇಲಿ
ಕೂಗುತಲಿದೆ ಕಹಳೆಯು
ನವಯುಗ ವೈತಾಳಿಯು !

ಕೇಳಿ ಕೇಳಿ ಕಹಳೆಯು
ಕೆಲದೊಳೆ ಇದೆ ಪಾಳೆಯ !
ಕಾಳಗಕೆದ್ದವ ಬಾಳುವ
ಏಳದಿದ್ದರವ ಬೀಳುವ
ಕೂಗುತಲಿದೆ ಕಹಳೆಯು
ನವಯುಗ ವೈತಾಳಿಯು

# ಹೊಸ ದಿನ

1

ನಿನ್ನೆಗಳನು ನೆಲಕೆ ಮೆಟ್ಟಿ
ನಾಳೆಗಳನು ತಲೆಗೆ ಕಟ್ಟಿ
ಕುಣಿದು ಹಾಡಿ ಕೈಯ ತಟ್ಟಿ
ಬಂದಿತಿಂದು ಹೊಸದಿನ
ತಂದಿದೆ ಸುಖಜೀವನ

2

ಅದೇ ಬಾನು ಅದೇ ಭಾನು
ಅದೇ ನಾನು ಅದೇ ನೀನು
ಅದೇ ನೆಲ—ಅದೇ ಕೆಲ
ಆದರು ಇದು ಹೊಸದಿನ
ಇದರ ತಿರುಳೆ ಹೊಸತನ !

3

ಋತುರಾಜನ ಕೆಳೆಯ ಮಾಡಿ
ಹಳತೆಲ್ಲವ ಹೋಳಿಯಾಡಿ
ಹೊಸನಿರ್ಮಿತಿಗೆಡೆಯ ನೀಡಿ—
ನಗುತಿದೆ ಈ ಹೊಸದಿನ !
ನವಯುಗ ಸಂವಾಹನ !

4

ಭಾವದ ಸಂದೃಷ್ಟಿಯಿರಿಸಿ
ಜೀವದನುಭವದಿ ಗುಣಿಸಿ
ಕೇವಣಿಸಿದ ಪಂಚಾಂಗವ
ಹಿಡಿದಿದೆ ಈ ಹೊಸದಿನ
ಸತ್ಯಯುಗದ ಚಾರಣ !

೧೧೫/ಬೆಟಗೇರಿ ಕೃಷ್ಣಶರ್ಮ

5

ಸವಿಯೆಂದೇ ನಂಜನುಂಡು
ಸವೆದುವು ಹಳೆದಿನದ ಹಿಂಡು
ಕಹಿಯಲ್ಲಿಯು ಸೊದೆಯ ಕಂಡು
ತಿರೆಗೆ ಸುಖದ ಬಾಗಿಣ
ತಂದಿದೆ ಈ ಹೊಸದಿನ !

6

ನಿನ್ನೆಗಳನು ನೆಲಕೆ ಮೆಟ್ಟಿ
ನಾಳೆಗಳನು ತಲೆಗೆ ಕಟ್ಟಿ
ಕುಣಿದು ಹಾಡಿ ಕೈಯ ತಟ್ಟಿ
ಬಂದಿತಿಂದು ಹೊಸದಿನ
ತಂದಿದೆ ಸುಖಜೀವನ !

# ಕೆ. ವಿ. ಪುಟ್ಟಪ್ಪ

## ರೈತನ ದೃಷ್ಟಿ

ಕರಿಯರದೊ ಬಿಳಿಯರದೊ ಯಾರಾದರೆ ಏನು ?
ಸಾಮ್ರಾಜ್ಯವಾವಗಂ ಸುಲಿಗೆ ರೈತರಿಗೆ !
ವಿಜಯನಗರವೋ ? ಮೊಗಲ್ವರಾಳಿಕೆಯೋ ? ಇಂಗ್ಲೀಷರೊ ?
ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ !
ಕತ್ತಿ ಪರದೇಶಿಯಾದರೆ ಮಾತ್ರ ನೋವೆ ?
ನಮ್ಮವರೆ ಹದಹಾಕಿ ತಿವಿದರದು ಹೂವೆ ?
ಸೋಮಾರಿಗಳಿಗೆ ಸುಖಿಗಳಿಗೆ ರಸಿಕರಿಗಲ್ತೆ
ಸಾಮ್ರಾಜ್ಯವೆಂಬುದದು ಕಾಮಧೇನು ?
ನೃಪ ಎಂಬ ಹೆಸರೊಡನೆ ಮುಡಿದೊಂದನಾಂತೊಡನೆ
ಕಳ್ಳರೊಡೆಯನು ಕೃಪೆಯ ಮೂರ್ತಿಯೇನು ?
ತಿಂದುಂಡು ಮೆರೆವವರ ಮೆರವಣಿಗೆಗಾನು
ಬಾಯ್ದೆರೆದು ನೋಳ್ಪ ಬೆಪ್ಪಾಗಬೇಕೇನು ?
ಹರಕೆ ಯಾರದೊ ? ಹಬ್ಬವಾರಿಗೊ ? ಅದಾವಗಂ
ಸಾಮ್ರಾಜ್ಯಕಾಳಿಗಾನಲ್ತೆ ಕುರಿ ಕೋಲೆಗೆ ?
ಕುಯ್ಗುರಿಯನೆಂತಂತೆ ಸಾವು ಬದುಕಿನ ನಡುವೆ
ಕರುಣೆ ಗರಗಸದಿಂದೆ ಸೀಳುವರು ಬೆಲೆಗೆ
ಸಾಕೆನಗೆ, ಸಾಕಯ್ಯ, ಸಾಮ್ರಾಜ್ಯ ಪೂಜೆ
ಸಿಡಿಮದ್ದಿನಕ್ಷತೆಗೆ ಗುಂಡು ಚರೆ ಲಾಜೆ !
ನೇಗಿಲಿನ ಮೇಲಾಣೆ ! ಬಸವಗಳ ಮೇಲಾಣೆ !
ನೆತ್ತರಿಲ್ಲದೆ ಸುಕ್ಕಿ ಸೊರಗಿದೆನ್ನಾಣೆ !

ಸಾಮ್ರಾಜ್ಯ ಶೂರ್ಪನಖಿ ಮೋಹಿಸಿಯ ರೂಪಕ್ಕೆ !
ಮರುಳಾಗೆನೆಂದಿಗೂ, ಸೀತೆ ಮೇಲಾಣೆ !
ಬಡತನದ ಗೊಬ್ಬರವನನುದಿನಂ ಹೀರಿ
ಹಿಡಿಸದೋ ಸಾಮ್ರಾಜ್ಯ ಸಿರಿಯ ಕಸ್ತೂರಿ !

# ಕವಿ

ವಸಂತ ವನದಲ್ಲಿ ಕೂಗುವ ಕೋಗಿಲೆ
ರಾಜನ ಬಿರುದನು ಬಯಸುವುದಿಲ್ಲ ;
ಹೂವಿನ ಮರದಲಿ ಜೇನುಂಬುಳುಗಳು
ಮೊರೆವುದು ರಾಜನ ಭಯದಿಂದಲ್ಲ.

ವನದೇಕಾಂತದಿ ಪೆಣ್ ನವಿಲೆಡೆಯಲಿ
ಮಯೂರನೃತ್ಯೋನ್ಮತ್ತ ವಿಲಾಸಕೆ
ರಾಜನ ಕತ್ತಿಯ ಗಣನೆಯೆ ಇಲ್ಲ ;
ನಿದಾಘವ್ಯೋಮದಿ ಮೆಲ್ಲಗೆ ಮೆಲ್ಲಗೆ
ತನ್ನೊಂದಿಚ್ಛೆಗೆ ತೇಲುವ ಮೇಘದ
ಆಲಸ್ಯಕೆ ಅರಸನ ಅಳುಕಿಲ್ಲ.

ಗಾಳಿಯ ಮುತ್ತಿಗೆ ಮೈ ಜುಮ್ಮೆನ್ನಲು
ತರೆ ತರೆಯಹ ತಿಳಿಗೊಳದೆದೆಯಲಿ
ಮಿನು ಮಿನು ಮಿಂಚುವ ನುಣ್ ಬೆಳುದಿಂಗಳ
ಲೀಲೆಗೆ ದೊರೆ ಮೆಚ್ಚುಗೆ ಬೇಕಿಲ್ಲ ;

ಸಿಡಿಲನು ಸಿಡಿಯುತೆ ಮೊಳಗುತೆ ನುಗ್ಗುವ
ಕಾರ್ಗಾಲದ ಕರ್ಮುಗಿಲಂ ಹೊಮ್ಮುವ
ಕೆಂಗಿಡಿ ಬಣ್ಣದ ಹೊಂಗೆರೆ ಮಿಂಚಿಗೆ
ಆಸ್ಥಾನದ ದಾಸ್ಯದ ಹುರುಪಿಲ್ಲ
ಕತ್ತಲೆ ಮುತ್ತಿದ ಬಾನಲಿ ಮಿಣುಕುವ
ತಾರೆಗೆ ದೊರೆಯಾಣತಿ ತೃಣವಿಲ್ಲ.

ವಿಪ್ಲವ ಮೂರ್ತಿಯ ಸಖನಾಗಿಹನೈ ;
ಕವಿಗರಸುಗಿರಸುಗಳ ಋಣವಿಲ್ಲ !
ಅವನಗ್ನಿಮುಖಿ !
ಪ್ರಲಯ ಶಿಖಿ !

೧೯೯/ಕೆ. ವಿ. ಪುಟ್ಟಪ್ಪ

# ಲೆನಿನ್

ಧಮನಿಯಲಿ ಬಿಸಿ ನೆತ್ತರುಕ್ಕದೆ ನೆನೆಯಲಾರೆ
ನಿನ್ನಂ ಲೆನಿನ್ ! ನಿನ್ನ ಹೆಸರದು ಸಿಡಿಲ್ ಸದ್ದು
ದೊರೆಗಿವಿಗೆ ; ನಿನ್ನ ಸಮತಾ ಬೋಧೆ ಸಿಡಿಮದ್ದು
ನರನ ಸಂಗ್ರಹ ಬುದ್ಧಿ ಸ್ವಾರ್ಥತೆಯ ನುರಿದೋರೆ
ದಹಿಸಿ, ನಿಃಸ್ವಾರ್ಥತೆಯ ಬೆಂಕಿಯಿಂ ಹೃತ್ಕುಂಡ
ಸರ್ವದಾ ಪ್ರಜ್ವಲಿಸುವಂತೆಸೆಗೆ, ಜಮದಗ್ನಿ
ಸುತನಂತೆ ನೀನು ಪಾರ್ಥಿವ ಕುಲಕೆ ಬಡಬಾಗ್ನಿ :
ದುಡಿವ ದೀನನದೈವವನ್ಯರ್ಗೆ ಯಮದಂಡ !
ಗೆಯ್ಯುವರ್ಗೇನಿಲ್ಲ, ಕುಳಿತುಂಬರಿಗೆ ಬೆಲ್ಲ ;
ಮುಳ್ಳನೋವಾಳಿಂಗೆ, ಕಂಪು ಹೂ ಒಡೆಯಂಗೆ
ಗೋಳವಗೆ, ಸೊಂಪಿವಗೆ. ಈ ತರತಮವನೆಲ್ಲ
ಮುರಿಯೆ ಬಹನಲ್ಲಲ್ಲಿ ಕಲ್ಕಿ. ರಕ್ತದ ಗಂಗೆ
ಸಿರಿನಾಳದಿಂ ಮರಳಿ ಬಡತನದೊಣಗು ಮೈಗೆ
ಹರಿದಿಕ್ಕೆ ದೊರೆಗಳಿಸಿ ಕೂಲಿರ್ ೈತರ ಕೈಗೆ !

# ಪಾಂಚಜನ್ಯ

ನಡೆ ಮುಂದೆ, ನಡೆ ಮುಂದೆ
ನುಗ್ಗಿ ನಡೆ ಮುಂದೆ !
ಜಗ್ಗದೆಯೆ, ಕುಗ್ಗದೆಯೆ
ಹಿಗ್ಗಿ ನಡೆ ಮುಂದೆ!
ಬೆಚ್ಚಿಬಿಡು, ನೆಚ್ಚ ನೆಡು,
ಕೆಚ್ಚೆದೆಯ ಗುಡಿಯಲ್ಲಿ ;
ಸೆರೆಯ ಹರಿ, ಅರಿಯನಿರಿ,
ಹುಟ್ಟಳಿಸು ಹುಡಿಯಲ್ಲಿ !
ನಾನಳಿವೆ, ನೀನಳಿವೆ,
ನಮ್ಮೆಲಬುಗಳ ಮೇಲೆ
ಮೂಡುವುದು, ಮೂಡುವುದು
ನವಭಾರತದ ಲೀಲೆ !
ನೊಂದ ದನಿ, ಕಣ್ಣ ಪನಿ,
ಬಂದೆ ಎಂದೊರೆಯದಿರು !
ತೆತ್ತ ಹಣ, ಸತ್ತ ಹೆಣ
ಹೋಯ್ತೆಂದು ಮೊರೆಯದಿರು ?
ಪೊಡವಿಯೊಳಗಡಗಿರುವ
ತಳಹದಿಯ ತೆಗಳುವರೆ ?
ಮೆರೆಯುತಿರುವರ ಮನೆಯ
ಸಿರಿಯೊಂದೆ ಹೊಗಳುವರೆ ?
ಎಲ್ಲ ಇದೆ, ಎಲ್ಲ ಇದೆ
ನಿತ್ಯತೆಯ ಗಬ್ಬದಲಿ ;
ಮುಂದೆಯದು ತೋರುವದು
ಬಿಡುಗಡೆಯ ಹಬ್ಬದಲಿ !
ನೆಚ್ಚುಗೆಡಬೇಡ ನಡೆ,
ಕೆಚ್ಚೆದೆಯ ಕಲಿಯೇ
ಬೆಚ್ಚಿದರೆ, ಬೆದರಿದರೆ
ಕಾಳಿಗದು ಬಲಿಯೇ ?

೧೨೧/ಕೆ. ವಿ. ಪುಟ್ಟಪ್ಪ

ಭರತ ಖಂಡದ ಹಿತವೆ
ನನ್ನ ಹಿತ ಎಂದು
ಭರತ ಮಾತೆಯ ಮತವೆ
ನನ್ನ ಮತ ಎಂದು
ಭಾರತಾಂಬೆಯ ಸುತರೆ,
ಸೋದರರು ಎಂದು,
ಭಾರತಾಂಬೆಯ ಮುಕ್ತಿ
ಮುಕ್ತಿ ನನಗೆಂದು
ನುಗ್ಗು ಮುಂದಕೆ, ಧೀರ
ಕಾಳೆಗದ ಕೊಲೆಗೆ
ನುಗ್ಗು ಮರಣಕೆ, ವೀರ
ಸಗ್ಗದಾ ನೆಲೆಗೆ !

ನೋಡದೋ ನೋಡಲ್ಲಿ
ದರ್ಪರಥದಡಿಯಲ್ಲಿ
ಹೊರಳುತಿರುವಳು ತಾಯಿ
ನೆತ್ತರಿನ ಪುಡಿಯಲ್ಲಿ !
ಬಾಳನೊರೆಯಿಂದ ಹಿರಿ !
ನುಗ್ಗು, ನಡೆ, ಕಟ್ಟಹರಿ !
ತಡೆಯ ಬಂದವರ ಇರಿ
ಒಲಿಯುವಳು ಜಯದ ಸಿರಿ !
ಜನ್ಮವೊಂದಳಿದರೇಂ ?
ನೂರಿಹವು ಬಲಿಗೆ !
ಕಾಳೆಗದೊಳಳಿಯಲೇಂ ?
ಸಾವೆ ಸಿರಿ ಕಲಿಗೆ !
ನಿಂತೇನು ನೋಡುತಿಹೆ ?
ಹುದುಗುಪರೆ ಇಲ್ಲಿ ?
ಮಸಣವಾಗಲಿ ಎದೆಯು
ರಣರಂಗದಲ್ಲಿ !
ನೆತ್ತರನು ನೋಡುವೆಯ ?
ಸತ್ತವರ ನೋಡುವೆಯ
ಕಂಕಾಲಗಳ ಗೋಡೆ ?

ಮರಳುಗಳ ನೆಲೆಬೀಡೆ
ಕಾಳಿಯುಳುಕುವಳೇನು
   ರಕ್ಕಸರ ಬಲಿಗೆ ?
ಸಮರ ರಂಗದ ನಡುವೆ
   ಬೆದರಿಕೆಯೆ ಕಲಿಗೆ ?
ಹಾ ನೋವು ! ಹಾ ನೋವು !
ಎಂದೆಲ್ಲ ಕೂಗುವರೆ ?
ಹಾ ನೀರು ! ಹಾ ನೀರು !
ಎಂದಸುವ ನೀಗುವರೆ
ಕೂಗಿಗೆದೆಗರದಿರು !
ಬೇನೆಯಿರೆ ಮರುಗದಿರು
ಕಂಬನಿಯ ಕರೆಯದಿರು
ಗುರಿಯ ಮರೆಯದಿರು
ಕಲಿಯೆ ಹಿಂಜರಿಯದಿರು
ತಾಯ ತೊರೆಯದಿರು !
ಎಲುಬುಗಳ ತೊಲೆಗಳಲಿ
ಮಾಂಸದ ಮಣ್ಣಿನಲಿ,
ನೆತ್ತರಿನ ನೀರಿನಲಿ,
ಬೆನೆ ಬಿಸು ಸುಯ್ಲಿನಲಿ,
ಬಿಡುಗಡೆಯ ಸಿರಿಗುಡಿಯ
ಮಸಣದಲಿ ಕಟ್ಟು !
ಪಾವನದ ತಾಯಡಿಯ
ಬಲ್ಮೆಯಲಿ ಮುಟ್ಟು !
ಆತ್ಮವಚ್ಯುತವೆಂದು
ಜನ್ಮಗಳು ಬಹವೆಂದು
ಮೃತ್ಯು ನಶ್ವರವೆಂದು
ಭಾರತಿಗೆ ಜಯವೆಂದು
ನಡೆ ಮುಂದೆ, ನಡೆ ಮುಂದೆ
   ನುಗ್ಗಿ ನಡೆ ಮುಂದೆ !
ಜಗ್ಗದೆಯೆ, ಕುಗ್ಗದೆಯೆ
   ಹಿಗ್ಗಿ ನಡೆ ಮುಂದೆ.

೧೨೩/ಕೆ. ವಿ. ಪುಟ್ಟಪ್ಪ

# ತರುಣರಿರ ಎದ್ದೇಳಿ

ಹೋಗುತಿದೆ ಹಳೆಕಾಲ, ಹೊಸಕಾಲ ಬರುತಲಿದೆ,
ಬರುತಲಿದೆ ಹೊಸದೃಷ್ಟಿ ಹೊಸಬಯಕೆಗಳು,
ಹೋಗುತಿದೆ ಹಳೆಬಾಳು, ಹೊಸಬಾಳು ಬರುತಲಿದೆ,
ಬರುತಲಿದೆ ಕುದಿಗೊಂಡು ತರುಣರೆದೆಗಳಲಿ.
ತರುಣರಿರ, ಎದ್ದೇಳಿ ! ಎಚ್ಚರಗೊಳ್ಳಿ ! ಕೇಳಿ !

ಬೀಸುತಿದೆ ಪಶ್ಚಿಮದ ರಸಪೂರ್ಣ ಹೊಸಗಾಳಿ
ಭಾರತದ ಬಣಗು ಬಾಳ್ಮರವನಲುಗಾಡಿ ;
ಉದುರುತಿವೆ ಮುದಿಕಡ್ಡಿ ತರಗು ಹಣ್ಣೆಲೆಗಳೆಲ್ಲ,
ನಲಿಯುತಿವೆ ನಳನಳಿಸಿ ಹೊಸಚಿಗುರು ಮೂಡಿ.
ತರುಣರಿರ ಎದ್ದೇಳಿ ! ಎಚ್ಚರಗೊಳ್ಳಿ ! ನೋಡಿ !

ಮೊನ್ನೆ ಮೊನ್ನೆಯವರೆಗೆ ಪಶ್ಚಿಮದ ಹೊಲಗೇರಿ,
ಇಂದು ನಂದನವಾಗಿ ನಗುತಲಿದೆ ರಷ್ಯಾ.
ಗರ್ಜಿಸಲು ತೊಡಗಿಹುದು ಕೇಸರಂಗಳ ಕೆದರಿ
ಇದುವರೆಗೆ ಮಲಗಿ ನಿದ್ರಿಸುತ್ತಿದ್ದ ಏಷ್ಯಾ
ತರುಣರಿರ, ಎದ್ದೇಳಿ ! ಎಚ್ಚರಗೊಳ್ಳಿ ! ಕೇಳಿ !

ಹಳೆಮತದ ಕೊಳೆಯೆಲ್ಲ ಹೊಸಮತಿಯ ಹೊಳೆಯಲ್ಲಿ
ಕೊಚ್ಚಿ ಹೋಗಲಿ. ಬರಲಿ ವಿಜ್ಞಾನ ಬುದ್ಧಿ.
ವೇದಪ್ರಮಾಣತೆಯ ಮರುಮರೀಚಿಕೆಯಲ್ಲಿ
ನೀರರಸಿ ಕೆಡದಿರಲಿ ಸ್ವಾತಂತ್ರ್ಯಸಿದ್ಧಿ.
ತರುಣರಿರ, ಎದ್ದೇಳಿ ! ಎಚ್ಚರಗೊಳ್ಳಿ ! ಬಾಳಿ !

ಹೊಸಬಾಳ ಗೀತೆಯನು ದಿಕ್ಕುದೆಸೆ ಬಿರಿವಂತೆ
ಕೊರಳೆತ್ತಿ ಕೈಯೆತ್ತಿ ದನಿಯೆತ್ತಿ ಹಾಡಿ.
ಸೇರಿ ನಡೆದರೆ ನಿಮ್ಮ ತಡೆಯುವವರಾರಿಲ್ಲ :
ಜಗವೆ ಹಿಂಜರಿಯುವುದು ನಿಡುದಾರಿ ನೀಡಿ.
ತರುಣರಿರ, ಎದ್ದೇಳಿ ! ಎಚ್ಚರಗೊಳ್ಳಿ ! ಮೂಡಿ !

# ಹೊಸಬಾಳಿನ ಗೀತೆ

“ ಸರ್ವರಿಗೆ ಸಮಬಾಳು ! ಸರ್ವರಿಗೆ ಸಮಪಾಲು ! ”
ಎಂಬ ನವಯುಗವಾಣಿ ಘೋಷಿಸಿದೆ ಕೇಳಿ !
ಯುಗಯುಗದ ದಾರಿದ್ರ್ಯಭಾರದಿಂ ಬೆನ್‍ಬಾಗಿ
ಗೋಳಿಡುವ ಬಡಜನರೆ, ಏಳಿರೈ ಏಳಿ !
ಶ್ರೀಮಂತರಡಿಗಳಡಿಹುಡಿಯಲ್ಲಿ ಹೊರಳಾಡಿ
ಕುಸಿದು ಕುಗ್ಗಿದರೆಲ್ಲ ಸಂತಸವ ತಾಳಿ !
ಕಂಗೆಟ್ಟ ಸೋದರರೆ, ಬರುತಿಹಳು ಕಾಣಿರೈ
ದಾನವರ ಸೀಳಿ ಅದೋ ವಿಪ್ಲವದ ಕಾಳಿ !

ಇಂದ್ರ ಸಿಂಹಾಸನಕೆ ಬಂದಿಹುದು ಕೊನೆಗಾಲ,
ಕಳಚಿ ಬೀಳುವುದಿಂದು ನಂದನದ ಬೇಲಿ !
ದೇವತೆಗಳಶ್ಲೀಲ ಮೋದಕ್ಕೆ ಬದಲಾಗಿ
ಗೋಚರಿಪುದಲ್ಲಿ ಮರ್ತ್ಯರ ಕೃಷಿಯ ಕೇಲಿ !
ದ್ರವ್ಯಾನುಕೂಲತೆಯ ಜಾತಿಯಾ ನೀತಿಯಾ
ಪಕ್ಷಪಾತವನೆಲ್ಲ ಕೊಚ್ಚುವುದು.
ಮತ್ತೊಂದು ನಾಕವನೆ ನೆಯ್ಯುವರು ಲೋಕದಲ್ಲಿ
ದೇವರನ್ಯಾಯವನು ಮಾನವರೆ ತಿದ್ದಿ !

ಕೈಲಾಗದವರೆಂಬ ನಾವು ಕೀಳೆಂದೆಂಬ
ಹಣೆಬರಹವೆಂದೆಂಬ ಮೂಢತೆಯ ನೀಗಿ
ಯುಗಚಕ್ರ ಪರಿವರ್ತನೆಗೆ ಸರ್ವರೂ ಸೇರಿ
ಹೆಗಲು ಕೊಟ್ಟೊಮ್ಮನಸು ಮಾಡಿ ನೆರವಾಗಿ !
ಮೋಹಿನಿಗೆ ಮರುಳಾಗಿ ಮೂರ್ಖದಾನವರೆಲ್ಲ
ತಮ್ಮಗೆಯ್ಮೆಯ ಪಾಲನನ್ಯರಿಗೆ ತೆತ್ತು
ಸತ್ತಂತೆ ಸಾಯದಿರಿ : ಸಂಸ್ಕೃತಿಯ ಹೆಸರಿಂದೆ
ಶ್ರೀಮಂತರೊಡ್ಡುವಾ ಬಲೆ ನಿಮಗೆ ಮೃತ್ಯು.

ಇಂದು ನೆತ್ತರು ಚೆಲ್ಲಿ ಮುಂದೆ ಬಹ ಮಕ್ಕಳಿಗೆ
ಹೊಟ್ಟೆಗನ್ನವ, ಮೈಗೆ ಬಟ್ಟೆಯನು ನೀಡಿ.
ಇಂದು ನೋವಾದರೂ ಇಂದು ಸಾವಾದರೂ
ಮುಂದೆ ಬಾಳಿನ ಸೊಗಸು ನೆಮ್ಮದಿಯ ಮಾಡಿ.
ಇಂದು ನೀವೇಳದಿರೆ ಕೆಚ್ಚೆದೆಯ ತಾಳದಿರೆ
ನಿಮ್ಮವರ ಬಾಳು ಎಂದೆಂದಿಗೂ ಹೇಡಿ !
"ಇಂದು ರಕ್ತದ ಬಿಂದು ಮುಂದೆ ಸೌಖ್ಯದ ಸಿಂಧು"
ಎಂದು ಸಾಹಸಕೇಳಿ, ಹಿಂಜರಿಯಬೇಡಿ !

# ಕಲ್ಕಿ

ನಿದ್ದೆಯ ಲೋಕದಿ ಕನಸಿನ ಬೀದಿ
ತಿರುಗಿದೆ ತೊಳಲಿದೆ ತಪ್ಪಿತು ಹಾದಿ !
ಮುಂದೆ ಕಾಣಿಸಿತೊಂದು ಅರಣ್ಯ
ಅನಂತವಾದುದು ವನವಿಸ್ತೀರ್ಣ
ಹೆಮ್ಮರಗಳು ಕಿಕ್ಕಿರಿದುವು ಅಲ್ಲಿ
ಬಿಡುವಿಲ್ಲದೆ ಹೆಣೆದಿದ್ದವು ಬಳ್ಳಿ
ಮುಳ್ಳಿನ ಪೊದೆಗಳು, ಗರಗಸವಳ್ಳಿ
ಪ್ರೇತದಂತೆ ಪಾಪಾಸಿನ ಕಳ್ಳಿ !
ನುಗ್ಗಿದೆ ನಾನಾ ಹಳುವಿನಲಿ
ಆ ಕನಸಿನ ಹೆಗ್ಗಾಡಿನಲಿ
ಅಲ್ಲಿದ್ದುದು ಬೆಳಕೆಂಬುವುದಲ್ಲ
ಕತ್ತಲು ಅಲ್ಲ !
ಬೆಳಕೋ ಕತ್ತಲೋ ಶಿವನೇ ಬಲ್ಲ !
ಶಿವನೇ ಬಲ್ಲ
ಪ್ರೇತಗಳಂದದಿ ಭೀತಿಯ ಛಾಯೆ
ಸುಳಿಸುಳಿದಾಡಿತು ಅಲ್ಲಿ !
ಆ ಘೋರ ಕಾನನದಲ್ಲಿ !
ನಡೆದೇ ನಡೆದೇ ನಡೆದೂ ನಡೆದೆ
ಸಾಹಸ ಬಿಡದೆ ಎದೆಗೆಡದೆ
ಸುತ್ತಲು ಮೌನ !
ಶ್ಮಶಾನ ಮೌನ !
ಕಾಡನು ದಾಟಿದೆ : ಮುಂಗಡೆ ಬೆಟ್ಟ
ಶಿಖರವೊ ನಿಂತಿದೆ ಮುಗಿಲಿನ ಮುಟ್ಟ !
ಹತ್ತೀ ಹತ್ತೀ ಹತ್ತೀ ಹತ್ತೀ
ಕಡೆಯಲಿ ಸಿಕ್ಕಿತು ನಡು ನೆತ್ತಿ !
ನೋಡಿದೆನಲ್ಲಿ
ನಡುನೆತ್ತಿಯಲಿ !
ಯಾವುದೋ ಊರು ? ಆ ಊರು !
ಬರಿ ಮಾಯದ ಊರು !

ಧನಿಕರ ಮನೆಗಳು ಒಂದೆಡೆ ನಿಂತಿವೆ
ಬಡವರ ಗುಡಿಸಲು ಒಂದೆಡೆ ನಿಂತಿವೆ
ಜ್ಯೋತಿಯ ಮಣಿ ದೀಪಗಳಲ್ಲಿ
ಕತ್ತಲು, ಕಗ್ಗತ್ತಲು ಇಲ್ಲಿ !
ಹಾಡಿನ ನುಡ್ಡಿನಿಯತ್ತ
ಗೋಳಿನ ನೀಳ ನಿಯತ್ತ !
ಕೂಳನು ಹೆಮ್ಮೆಗೆ ಬಿಸುಡುವರಲ್ಲಿ
ಹೊಟ್ಟೆಗೆ ಇಲ್ಲದೆ ಕೊರಗುವರಿಲ್ಲಿ
ಆ ಕಡೆ ಉದ್ಯಾನ
ಈ ಕಡೆ ಸ್ಮಶಾನ !
ಪೀತಾಂಬರಗಳ ಹೊದೆಯುವರಲ್ಲಿ
ಕಾಪೀನಕೆ ಚಿಂದಿಯು ಸಿಗದಿಲ್ಲಿ !
ನೋಡುತ ನೋಡುತ ನೋಡುತ್ತಿದ್ದೆ
ನೋಡುತ್ತಿರೆಯಿರೆ ಬೆಚ್ಚಿ ಬಿದ್ದೆ
ಬಡಬಗ್ಗರ ಜಠರಾಗ್ನಿಯು ಎದ್ದು
ಗುಡಿಸಲುಗಳಿಗೇ ಬೆಂಕಿಯು ಬಿದ್ದು
ಧಗಧಗ ಧಗಧಗ ಹೊತ್ತಿದುದು ।
ಭುಗಿ ಭುಗಿಲೆನ್ನುತ ಮುತ್ತಿದುದು !
ಮುಗಿಲಿನವರೆಗೂ, ಬಾನಿನವರೆಗೂ
ದಿಕ್ಕು ದಿಕ್ಕುಗಳ ಜುಟ್ಟಿನವರೆಗೂ
ಬಡವರ ಬೆಂಕಿಯು ನಾಲಗೆ ಚಾಚಿ
ಶ್ರೀಮಂತರನಪ್ಪಿತು ಬಾಚಿ !
ಬಡವರ ಸಿಟ್ಟಿದು ಏನು ಪಿಶಾಚಿ ?
ಬಡಬಾಗ್ನಿಯು ತಲೆ ತಗ್ಗಿತು ನಾಚಿ !
ಶ್ರೀಮಂತರ ಸೌಧಂಗಳ ನೆತ್ತಿ
ಸೀದುದು ಬಡಹೊಟ್ಟೆಯ ಉರಿಹತ್ತಿ.
ದೂರದ ಆ ಗಿರಿಶಿಖರದ ಮೇಲೆ
ನನಗೂ ತಟ್ಟಿತು ಬೆಂಕಿಯ ಜ್ವಾಲೆ !
ಕೇಳಿಸಿತೊಡನೆಯೆ ಹಾಹಾಕಾರ !
ಮಕ್ಕಳು ಮರಿಗಳ ಚೀತ್ಕಾರ !

ಗರ್ಭಿಣಿ ಸ್ತ್ರೀಯರು, ಬಾಣಂತಿಯರು,
ನವವಧುಗಳು ಮೇಣ್ ಶ್ರೀಮಂತೆಯರು
ಹುಡುಗರು ಮುದುಕರು, ಕುಂಟರು ಕಿವುಡರು,
ಬಡವರ ಗೋಳನು ಕೇಳದ ಕಿವುಡರು
ಹೊಟ್ಟೆಯ ಪಾಡಿಗೆ ಕಾವಿಯನುಟ್ಟು
ಬಡವರ ಹಸಿವಿಗೆ ಮೌಢ್ಯವ ಕೊಟ್ಟು
ಸುಖಸಂಪತ್ತನು ಕೊಂಡವರು,
ಮೃಷ್ಟಾನ್ನವನೇ ಉಂಡವರು,
ಗುರುಗಳು ಶಿಷ್ಯರು, ಮನೆಗಳು, ಮಠಗಳು,
ಎಲ್ಲರು ಬೆಂದರು ಜಠರಾಗ್ನಿಯಲಿ !
ಬಡವನ ಜಠರಾಗ್ನಿಯೆ ಬಡಬಾಗ್ನಿ
ಬಡವನೆ ಕಲಿಯುಗದಂತ್ಯದ ಕಲ್ಕಿ !
ನೋಡುತಲಿದ್ದೆ !
ನೋಡುತಲಿದ್ದೆ !
ಕಣ್ಮರೆಯಾಯಿತು ಆ ದೃಶ್ಯ !
ಏನಿದು ಈ ದೃಶ್ಯ ?
ರಕ್ತದ ಜಲಪಾತ !
ನರಮಾಂಸದ ನಾತ !
ಧುಮುಧುಮುಕುತಲಿದೆ ರಕ್ತದ ರಣಧುನಿ !
ಹೊರಹೊಮ್ಮುತ್ತಿದೆ ನರರಾರ್ತಧ್ವನಿ !
ಗಗನವು ರಕ್ತ ! ಭೂಮಿಯು ರಕ್ತ
ನೋಡಿದರೆತ್ತಲು ರಕ್ತ ! ರಕ್ತ !
ಅಯ್ಯೋ ರಕ್ತ !
ಧುಮುಕುವ ಶೋಣಿತ ಗಿರಿಝರಿಯಲ್ಲಿ
ನರ ರುಂಡಗಳು
ನರ ಮುಂಡಗಳು
ಮುಂಗಾರ್ಗಾಲದ ಬಲ್ಸರಿಯಲ್ಲಿ
ಆಲಿಯ ಕಲ್ಲುಗಳುರುಳುರುಳ್ವಂತೆ
ಧುಮುಕುತಲಿರುವುವು ! ಬಂಡೆಗಳಂತೆ
ಧುಢುಂ ಧುಡುಂ ಧುಡುಮ್ಮನೆ ಬಿದ್ದು
ಹಾರುತಲಿವೆ ಬಿಸಿ ನೆತ್ತರು, ಸದ್ದು !

ಸುಂದರಿಯರ ತಲೆ ಮುಂಡೆಗಳು
ಶ್ರೀಮಂತರ ನೆಣದುಂಡೆಗಳು
ಪಾಪದ ದೇಹ, ಪುಣ್ಯದ ದೇಹ,
ಗುಡಿ ಗೋಪುರಗಳು, ಧರ್ಮದ ಗೇಹ,
ತೇಲಿ, ತೇಲಿ, ತೇಲಿ, ತೇಲಿ,
ನುಗ್ಗುತಲಿವೆ ಕಸಕಡ್ಡಿಯ ಹೋಲಿ !
ಯಾರವನಲ್ಲಿ ? ದೂರದಲ್ಲಿ
ಧಾವಿಸಿ ಬರುವನು ಕ್ರೌರ್ಯದಲಿ !
ಅಸ್ಥಿಪಂಜರದಶ್ವವನೇರಿ,
ಬೆಳ್ಳಗೆ ಚಿಲಿಯುವ ದಾಡೆಯ ತೋರಿ
ಅಸ್ಥಿಪಂಜರದಾಳವನು !
ಪ್ರೇತ ಸ್ವರೂಪಿಯುದಾರವನು ?
ಬಲಗಡೆ ಕೈಯಲಿ ಮಿಂಚಿನ ಕತ್ತಿ !
ಎಡಗಡೆ ಕೈಯಲಿ ಸಿಡಿಲಿನ ಬುತ್ತಿ !
ಎಲುಬಿನ ಕುದುರೆ ! ಎಲುಬಿನ ಆಳು !
ಇವನೆಯೆ ಕಲ್ಕಿ ? ಬಡವರ ಬಾಳು !
ಮೂರ್ತಿವೆತ್ತಿಹ ಬಡವರ ಗೋಳು !
ನೋಡುತಲಿದ್ದೆ ;
ಕೇಳುತಲಿದ್ದೆ !
"ಹಸಿವೆ ! ದಾಹಾ !" ಎನ್ನುತ ಬಂದು
"ರಕ್ತಾ ! ರಕ್ತಾ ! ರಕ್ತಾ !" ಎಂದು
ನೆತ್ತರು ಹೊಳೆಯಲಿ ಧುಮುಕಿದನು
ಕುದುರೆಯೊಡನೆ ಧುಮ್ಮಿಕ್ಕಿದನು !
ಕುಡಿದನು ರಕ್ತವ ವೊಗೆ ವೊಗೆದು
ತಿಂದನು ತಲೆಗಳ ತೆಗೆ ತೆಗೆದು !
ಎಲುಬಿನ ಕುದುರೆಯು ಕೆನೆಯುತ್ತಿತ್ತು ;
ನಾದವು ಬೊಮ್ಮವ ಬಿರಿವಂತಿತ್ತು !
ಎಲುಬಿನ ಮೂರ್ತಿಯು ಗಹಗಹಿಸಿತ್ತು
ಗುಡಗಿನ ಮಾಲೆಯೆ ಪೊರವಡುತಿತ್ತು !
ಕುದುರೆಯು ಕುಡಿದೂ, ಆಳೂ ಕುಡಿದೂ
ತಿಂದರು ಶವಗಳ ಲರಿಲರಿ ಕಡೆದೂ

ಬತ್ತಿತು ರಣಧುನಿ, ಇನ್ನೂ ದಾಹ !
ಮುಗಿದವು ಹೆಣಗಳು, ಇನ್ನೂ ಹಸಿವೆ !
ಬಡವರ ಗಂಟಲ ಬೇಗೆಯ ದಾಹ !
ಬಡವರ ಹೊಟ್ಟೆಯ ಬೆಂಕಿಯ ಹಸಿವೆ !
ತುಂಬದು ಹೊಟ್ಟೆ !
ತುಂಬದೊ ಹೊಟ್ಟೆ !
ಕೆಟ್ಟೇ ಕೆಟ್ಟೇ !
ಅಯ್ಯೋ ಕೆಟ್ಟೆ !
ನೋಡಿದನೆನ್ನಂ ಬೆಟ್ಟದ ಮೇಲೆ !
ಬರುತಿಹನಯ್ಯೋ ! ಒಲ್ಲೇ ಒಲ್ಲೇ !
ನೋಡುತಲಿದ್ದೆ !
ಕಂಪಿಸಿ ಬಿದ್ದೆ !
"ಕಲ್ಕಿ ! ಕಲ್ಕಿ !" ಎನ್ನುತ ಚೀರಿ
ಕನಸೊಡೆದೆದ್ದೆ !
ಇನ್ನೆಲ್ಲಿಯ ನಿದ್ದೆ ?

# ರಕ್ತಧುನಿ

ಬರುತಲಿದೆ !   ಬರುತಲಿದೆ !
ವಿಪ್ಲವದ ರಕ್ತಧುನಿ !
ನೋಡು ಹರಿದು ಬರುತಿದೆ !
ಬೇನೆವಸಿರಿನಿಂದ ಚಿಮ್ಮಿ
ದಾಸ್ಯ ಶಿಲೆಯನೊಡೆದು ಹೊಮ್ಮಿ
ಶ್ರೀಮಂತರ ಕೊಳಕೆ ಬಿಚ್ಚಿ
ಹಳತನೆಲ್ಲ ಕೊಚ್ಚಿ ಕೊಚ್ಚಿ
ನೋಡು ನುಗ್ಗಿ ಬರುತಿದೆ !
ಮರಣದಂತೆ ಮೌನವಾಗಿ
ವಿಲಯದಂತೆ ರುದ್ರವಾಗಿ
ಗುಡುಗನುಳಿದ ಸಿಡಿಲಿನಂತೆ
ಹೊಳೆವ ಮಿಂಚಿನುದಧಿಯಂತೆ
ಕಾಳಿ ತೆರೆದ ಜಿಹ್ವೆಯಂತೆ
ತರುಣ ರಕ್ತದರುಣದಿ
ವಿಪ್ಲವದ ರಕ್ತಧುನಿ
ಬರುತಲಿದೆ !  ಬರುತಲಿದೆ !
ನೋಡು ನೋಡು ಬರುತಿದೆ !
ತಡೆವ ಧೀರರಾರು ?   ಬನ್ನಿ !
ಕುಡಿವ ವೀರರಾರು ?  ಬನ್ನಿ !
        ಬನ್ನಿ ಮುಂದಕೆ !
ಈಜಿ ಈಜಿ ದಡವ ಸೇರಿ
        ಬಲುಮೆಯುಳ್ಳೊಡೆ ;
ಬೆದರುವೊಡೆ ಬೆಚ್ಚುವೊಡೆ
        ಮುಳುಗಿ ಸಾಯಿರಿ !
ಮುತ್ತು ಮರಗಳನ್ನೆಲ್ಲ
ಒತ್ತಿ ಮುರಿ ಮುರಿದು
ಮುತ್ತು ಗುಡಿಗಳನೆಲ್ಲ
ಕಿತ್ತು ತೆಗೆದೊಗೆದು,
ರುಂಡಗಳನು ಮುಂಡಗಳನು

ರಭಸದಲಿ ತೇಲಿಸುತ
ರಾಜ್ಯಗಳ ಗುಡಿಸುತ್ತ
ರಾಜರನು ಬಡಿಯುತ್ತ,
ಮಕುಟಗಳನು ತುಳಿಯುತ್ತ
ಗದ್ದುಗೆಗಳನಳಿಸುತ್ತ
ಬರುತಲಿದೆ! ಬರುತಲಿದೆ!
ವಿಪ್ಲವದ ರಕ್ತಧುನಿ
ನೋಡಿ ಹರಿದು ಬರುತಿದೆ!

ಕೆಂಪು ಗಗನವದರ ಬರುವ
ನೋಡು, ಅದೋ ತೋರುತಿದೆ!
ಬಿರುಸು ಗಾಳಿಯುದರ ಬರವ
ಕೇಳು ಅದೋ ಸಾರುತಿದೆ!
ಸಿಡಿವ ಮದ್ದಿನುಂಡೆಯಂತೆ,
ಹಾರಲಿಹ ಫಿರಂಗಿಯಂತೆ
ಒಡೆಯಲಿರುವ ಬಾಂಬಿನಂತೆ
ವಿಪ್ಲವದ ಕೇಸರಿಯು
ರಕ್ತಪಾನಕೆಳಸಿ, ಎಳಸಿ
ಹೊರಗೆ ನೆಗೆಯೆ, ನರಳಿ, ಕೆರಳಿ
ಸಿದ್ಧವಾಗುತಿರುವುದು,
ಪ್ರಬುದ್ಧವಾಗುತಿರುವುದು;
ನೋಡದೋ! ಕಾಣೆಯಾ?
ಕಬ್ಬಿಗನ ಲೇಖನಿಯು
ಕಠಾರಿಯಾಗುತಿರುವುದು!
ಇಂಚರದ ಕೊಳಲು ಬಿರಿದು
ಕಠೋರ ಭೇರಿಯಾಗುತಿದೆ!
ಚೆಲುವೆಯರ ಮುಗುಳ್ನಗೆಯು
ಮರುಳ್ನಗೆಯದಾಗುತಿದೆ!
ದೇಶಭಕ್ತರೆದೆಗಳಿಂದ
ಸೋರ್ವ ನೆತ್ತರೆಲ್ಲ ಸೇರಿ,
ವೀರಸತಿಯರಕ್ಷಿಗಳ

೧೩೩/ಕೆ. ವಿ. ಪುಟ್ಟಪ್ಪ

ಶೋಣಿತಾಶ್ರು ನದಿಯು ಸೇರಿ,
ಕ್ರೋಧದಿಂದ, ವೇಗದಿಂದ
ಸಿರಿಮನೆಗಳನುರುಳಿಸಿ
ಬಡಜನರನು ಕೆರಳಿಸಿ
ಬರುತಲಿದೆ ! ಬರುತಲಿದೆ !
ವಿಪ್ಲವದ ರಕ್ತಧುನಿ
ನೋಡು ನೋಡು ಅದೋ ನೋಡು
ಹರಿದು ಬರುತಿದೆ !

# ರಂ. ಶ್ರೀ. ಮುಗಳಿ

## ಅನ್ನ

ಅನ್ನ ! ಅನ್ನ ! ಕೊಟ್ಟರೆ ಚೆನ್ನ !
ಕೊಡದಿರೆ ನಾವೂ ನೀವೂ ಸಾವಿನ ಬಾಯಿಗೆ ಅನ್ನ !
ನಮಗಿಲ್ಲದೆ ನೀವುಣ್ಣುವ ತುತ್ತು
ನಮ್ಮಯ ವಿಷದುಸಿರಿನ ಹೆಬ್ಬಾವಿನ ಹುತ್ತು !

ಕೇಳುವ ಕಿವಿಗೇ ಕೇಳುವುದಿಂತು
ಬರಿಯೊಡಲಿನನಡೆ ಹೆಣಗಳ ರೋಮರೋಮಗಳ ಮಾತು
ಕೇಳದ ಕಿವುಡರು ದೇವರೆ ಇದ್ದರು
ಬಡವರ ಪಾಲಿಗೆ ಕಮರಿದ ಕರುಳಿನ ಕಾಳ್‌ರಕ್ಕಸರು

ಅಯ್ಯೋ ವಿಗಡವೆ ! ಎಲ್ಲಾ ಜೀವವು
ಒಂದೇ ಆತ್ಮನ ನೆಲೆಮನೆಯೆಂದೇ ಸಾರಿದ ದೇಶವು
ತಿನಲಿಲ್ಲದೆ ಸಾವರ ತಾನೋಡುತ
ತಿನ್ನುವ ನಲಿಯುವ ನಾಣಿಲಿಗಳ ನೆಲೆಯಾಗಿದೆ ನಿರುತ

'ನಮ್ಮಿಷ್ಟಕೆ ನಾವ್ ಬದುಕಿದರಾಯ್ತು
ಹೆರವರು ಇದ್ದರೆ ಇರಲಿ ಹೋದರೆ ಹೋಗಲಿ ಹೋಯ್ತು'
ಇದುವೇ ಇಂದಿನ ಜೀವನದರ್ಶನ
ತಂದಿದೆ ನಮ್ಮಯ ಜನತೆಗೆ ಮರಣದ ಭೀಕರ ದರುಶನ.

೧೩೫/ರಂ. ಶ್ರೀ. ಮುಗಳಿ

ಅನ್ನದ ಕೊರತೆಯೆ ಸಾವಿಗೆ ಕಾರಣ ?
ಹೃದಯದ ಒರತೆಯು ಒಸರದೆ ಇರುವುದೆ ನಾಡಿಗೆ ಮಾರಣ
ಹಬ್ಬಕ್ಕೆ ಹಾಳಿಗೆ ಇರುವುದು ಅನ್ನ
ಮಡಿವರ ಒಡಲಿನ ಕಿಚ್ಚನು ಆರಿಸೆ ಏನಿದೆ ಬನ್ನ !

ಉಳ್ಳವನಿಗೆ ತಿನ್ನಲೆಲ್ಲಾ ಬೇಕು
ಇಂದಿಗೆ ನಾಳಿಗೆ ಮುಂದಿಗೆ ಮೋಜಿಗೆ ಕೂಡಿಡಬೇಕು !
ಉಳಿದವರಿಗೆ ಏನಾದರೆ ಏನು ?
ಅವರದು ಕರ್ಮ ! ಸಿಗುವುದೆ ಎಲ್ಲರಿಗೂ ಸವಿಜೇನು ?

ಹಿಮವತ್ ಪರ್ವತದೆಲ್ಲಾ ಮಲೆಗಳೆ
ಅನ್ನದ ರಾಶಿಯೆ ಆಗಿಯೆ ನಮ್ಮನು ಇದಿರಿಸೆ ಈಗಳೆ
ಹೊಟ್ಟೆಯು ಬಿರಿತು ಸತ್ತರು ಸರಿಯೇ
ಎಲ್ಲಾ ನಮಗೇ ನಮ್ಮವರಿಗೆ ತಿಸಲಲ್ಲವೆ ಸಿರಿಯೇ ?

ಬಡವರ ಹರಣದ ಲೂಟಿಯ ಮಾಡಿ
ಕಳ್ಳಪೇಟೆಯ ಕುಬೇರರು ತಂದನ್ನವ ಮಾರಾಡಿ
ಹೆಣಗಳ ಒಣವೆಯ ರಂಗದ ಮೇಲೆ
ಹಣಗಳ ಕುಣಿತವ ಮಾಡಿಸಿ ಮಲೆವರು ತನುಮನಸೋಲೆ

ಹಸಿವರ ಗೇಣೊಡಲಿನ ವಾಮನನು
ಸೊಕ್ಕೇರಿದ ಬಲಿರಾಜರ ತಲೆಮೆಟ್ಟಲು ಹೊರಟಿಹನು
ಮೂಲೋಕವ ಮೂರಡಿಯಲಿನುಂಗಿ
ಅನ್ನ ಕೊಡದಿರೆ ಪ್ರಾಣದ ಬಲಿಯನು ಕೊಳ್ವನು ಹೊಂಗಿ

ಅನ್ನವ ಹೆಚ್ಚಿಸಬೇಕೆಂಬುದು ಸರಿ
ಅದಕಿಂತಲು ಜನ ಹೃದಯದ ಮುಗಿಲನು ಹಿಗ್ಗಿಸುವುದು ಹಿರಿ
ನಾಡಿನ ಬಿಡುಗಡೆ ಬಂದರೆ ಮುಗಿಯದು
ಹೃದಯದ ಸೆರೆಮನೆ ಬೇಡಿಯ ಕಳಚಿ ಹಿಗ್ಗುತ ನೆಗೆವುದು

ಅನ್ನ ! ಅನ್ನ ! ಹೃದಯದ ಅನ್ನ !
ಬೇಕಿಹುದಿಂದು ನಾಡಿನ ಬಾಳಿಗೆ ಗೈಯಲು ಚೆನ್ನ
ಮಾಡುವುದಿದಕೇ ಹಗಲಿರುಳೂ ತನ್ನ,
ದೇಹವ ತೆಯ್ದು ಎಡೆಯನು ಕುದಿಸಿ ಮರಣಕೆ ಅನ್ನ

೧೩೭/ರಂ. ಶ್ರೀ. ಮುಗಳಿ

# ವಿ. ಕೃ. ಗೋಕಾಕ್

## ಬೆಡಗಿ

ಸುಡು ನಿನ್ನ ಸಿಂಗರವ
ನಿನ್ನ ಸೊಗವ
ಬಿಡು ನಿನ್ನ ಬೆಡಗ ಹಾ
ಳಾಗಿಸಿತು ಜಗವ !
ಆಳಾಗಿಸಿತು ನೂರು
ದೇಹಗಳನು ;
ತೊಳಲಾಡಿಸಿತ್ತೆನಿತೊ
ಗೇಹಗಳನು !

ನಿನ್ನ ಮುಖಮುಲು ಮುಖವ
ಬಣ್ಣಿಸಿದ ಪೆಂಪು—
ಕಳೆಯಲದು ನಿಲ್ಲುವವು
ನೂರು ಸಂಪು !
ಓ ಸುವಾಸಿನಿ ! ನೀನು
ತೈಲಿಸಿದ ಕೇಶ ;—
ಅದಕೆ ಬರಿದಾಯ್ತು ; ಜನ
ಶಂಕರಿಯು ಕೋಶ !
ಸುಡು ನಿನ್ನ ಸಿಂಗರವ
ನಿನ್ನ ಸೊಗವ
ಬಿಡು ನಿನ್ನ ಬೆಡಗ ಹಾ
ಳಾಗಿಸಿತು ಜಗವ !

ನಿನ್ನ ಧಮನಿಯಲಿರುವ
ರಾಜರಕ್ತ
ಅನ್ಯಾಯಗಳ ತೀರ್ಥ
ವೆಂದು ವ್ಯಕ್ತ.
ಕೆಲಸವಿಲ್ಲದೆ ರಾಣಿ
ವಾಸದಲ್ಲಿ
ಕುಳಿತರಳಿಸಿದ ಮಂದ—
ಹಾಸದಲ್ಲಿ
ನಿನ್ನ ಕುಲಕೋಟಿಯಾ
ಹೆಂಗಳೆಯರು
ಕಂಡಿಹರು ಸ್ವರ್ಗವನು—
ನೆಲಕಿಳಿಯರು !
ನೂರು ಹೆಣ್ಣಿನ ಹೆಣ್ಣು
ತನವೆ ಹೋಗಿ,—
ಕೂಲಿ ಹೆಣ್ಣಾಗಿ ಬರಿ
ಯಂತ್ರವಾಗಿ
ಸಾಯುತಿರೆ ಕೂಡಿಟ್ಟ
ಹಣದ ಗಂಟು,—
ಅದರಿಂದ ನಿನ್ನ ಚೆಲು
ವಿಕೆಗೆ ಉಂಟು,—
ನರಕದಾ ಮುಗಿಲಿಂದ
ಬಂದ ಮಿಂಚು,—
ನಿನ್ನ ಕೆಂದುಟಿಯ ನಗೆ
ರಕ್ಕಸರ ಹೊಂಚು !
ಸುಡು ನಿನ್ನ ಸಿಂಗರವ
ನಿನ್ನ ಸೊಗವ
ಬಿಡು ನಿನ್ನ ಬೆಡಗ ಹಾ
ಳಾಗಿಸಿತು ಜಗವ.

ನಿತ್ಯ ಸುಂದರಿಯಹುದು
ನೀನು ಬಾಲೆ

೧೩೯/ವಿ. ಕೃ. ಗೋಕಾಕ್

ಸೆರೆಗೊಳುವ ಸೆರೆ ನೀನು ;
ಹೆಂಡ ಹಾಲೆ ?
ನಿತ್ಯ ಸಂಕಟಪಡಲು
ನೂರು ನರಪ್ರಾಣಿ—
ಮೆರೆಯಲೆಳೆಸುವಿಯಲ್ಲ
ಆಗಿ ಇಂದ್ರಾಣಿ ?
ಬಾ ಇತ್ತ ಶಪಿಸುತ
ನಿನ್ನ ಕುಲಕೋಟಿ,
ಬಾ ಇತ್ತ ಸಂಪದದ
ಸೆರೆಮನೆಯದಾಟ !
ನೂರು ಗುಡಿಸಲಗಳಲಿ
ಮಾರಿ ನರಳಾಟ—
ಕಾಸಿಲ್ಲ—ಈಸಿಲ್ಲ
ವೆಂದು ಹೊರಳಾಟ !
ದೇವ ಕೊಟ್ಟಿಹ ಚೆಲುವ
ದೊಂದೆ ಸಾಕು.
ಚೆಲು ಗುಲಾಬಿಗೆ ಬಣ್ಣ
ನೆಯದೇಕೆ ಬೇಕು ?
ಮಾಸಲಿಡು ಆ ಹಣವ
ಕಾಸಿಲ್ಲದವರಿಗೆ.
ಇಳಿಯಾಣ್ಮ ಗ್ರೀವದಿದೆ—
ಇದೆ ಸುಂಕ, ತೆರಿಗೆ !

ಸುಡು ನಿನ್ನ ಸಿಂಗರವ
ನಿನ್ನ ಸೊಗವ
ಬಿಡು ನಿನ್ನ ಬೆಡಗ ಹಾ
ಳಾಗಿಸಿತು ಜಗವ.

# ಕಲೋಪಾಸಕನಾದ ಸುಧಾರಕ

ಧರ್ಮದ ಹೆಸರಿನಲಿ ಮಾಯವಾಯ್ತು
ನಮ್ಮ ಹಿರಿಮೆಯೆಲ್ಲ !
ಉರುಳುತಿರುವ ಕಾಲಚಕ್ರವನ್ನು ಕಾಣದೆ
ನಿಂತಲ್ಲಿಯೆ ನಿಂತು ನಾವು
ನಗೆಗೇಡಿಗಳಾದೆವೆಂದೆ
ಮನ್ವಂತರವನ್ನು ಮರೆತು ಗತಿಯ ಕಾಣದೆ

ಹಳ್ಳಿಗರನು ಮುರಿವಗೌಡ
ಮೋಸಗೊಳಿಸುವಕ್ಕರಿಗನು
ಜನಗಣತಿಯ ಮಧ್ಯ ಕುಡಿದ ರಾಜಕಾರಣಿ
ಧರ್ಮ ಮತದ ಮಣ್ಣು ತುಂಬಿ
ಕಂಣು ಕಳೆಯುತಿರುವ ಕುರುಡ
ಇವರ ಮುರಿದ ದಿನವೆ ನಾಡಿಗಿಹುದು ಪಾರಣೆ

ಸರಸ್ವತಿಯ ದೊಂಬರಾಟ
ವಿದ್ಯೆಯಿಂದು ; ತಳ್ಳಿಬಿಡಿರಿ
ಅನ್ನ ಸಮಸ್ಯೆಯನು ಬಿಡಿಸದಂಥ ವಿದ್ಯೆಯು
ವಿದ್ಯೆಯೆಂತು ? ಭ್ರಮೆಯು ಬೇಡ.
ಇದ್ದುದನಿದ್ದಂತೆ ತೋರ
ಳಿಯಬಹುದು ಜನದ ಕುಂಭಕರ್ಣ ನಿದ್ರೆಯು

೧೪೧/ವಿ. ಕೃ. ಗೋಕಾಕ್

# ದಿನಕರ ದೇಸಾಯಿ

## ಬಿರುಗಾಳಿ

ಬಿರುಗಾಳಿಯೇ ಬೇಕು ನಮ್ಮ ಉದ್ಧಾರಕ್ಕೆ
ಪೊಳ್ಳು ಮರಗಳನೆಲ್ಲ ಭೂಮಿಗುರುಳಿಸಲಿಕ್ಕೆ

ಬೊಡ್ಡೆಯೊಂದಿಗೆ ಅಡ್ಡ ಟೊಂಗೆಗಳನೂ ಸೀಳಿ
ಹುಳಿ ಕಾಯಿಗಳನೆಲ್ಲ ಉರುಳಿಸಲಿ ಬಿರುಗಾಳಿ

ಚಂಡಮಾರುತದಲ್ಲಿ ಹಾರಿ ಹೋಗಲಿ ಬೆಂಡು
ಸಪ್ತ ಸಾಗರದಾಚೆ ಹರಕುಚಿಂದಿಯ ಮುಂಡು

ಸೋರುವಾ ಮಾಡಗಳು ಮುರಿದು ಬಿದ್ದರೆ ಶಾಂತಿ
ನಾರುವಾ ಗೂಡುಗಳು ಕಳಚಿ ಬಿದ್ದರೆ ಕ್ರಾಂತಿ

ದರಗೆಲ್ಲ ದೂರಾಗಿ ಚೊಕ್ಕವಾಗಲಿ ನೆಲವು
ಬಿರುಗಾಳಿಯಲ್ಲಿಯೇ ಬರಲಿ ನರನಿಗೆ ಗೆಲವು

# ಕಲ್ಲುಕುಟಿಗರು

ಕಲ್ಲುಕುಟಿಗರು ನಾವು ಕಲ್ಲ ಕಡಿದು
ಅರಮನೆಯ ಕಟ್ಟಿದೆವು ದುಡಿದು ದುಡಿದು
    ಕಟ್ಟಿದಾ ಮಂದಿರವು
    ಎನಿತೆನಿತು ಸುಂದರವು
ಅನಿತನಿತು ಮಣಿಮಣಿದು ಬೆವರ ಕುಡಿದೂ
ನೀರಡಿಕೆಯೂ ಕೂಡ ಬೆನ್ನ ಬಿಡದು !

ಇಂದ್ರಭವನವ ನಾವು ರಚಿಸಿದರು ದುಡಿದು
ನಮ್ಮ ಗುಡಿಸಲು ಮಾತ್ರ ಸೋರುವುದು ಬಿಡದು.
    ನೆತ್ತರಿನ ನೀರಾಯ್ತು !
    ಅತ್ತರೂ ಬೆವರಾಯ್ತು !
    ಸತ್ತರೇ ಪಾರಾಯ್ತು ನಮ್ಮ ಜೀವ !
    ನಮ್ಮ ಕಾಯುವನಾರು ? ಯಾವ ದೇವ !

ನಮ್ಮ ಕಾಯುವನಾರು ? ಕೇಳು ಅಂದೆ :
ನಮಗೆನಾವೇ ಇನ್ನು ಮುಂದೆ ತಂದೆ ;
    ನಮ್ಮದೇ ಒಕ್ಕಟ್ಟು
    ದೇವರಿಗು ಬಿಕ್ಕಟ್ಟು !
ಪೃಥಿವಿಗೋಲಿನ ಕಲ್ಲಗುಂಡ ಕುಟ್ಟಿ
ಮನೆಯ ಕಟ್ಟಲು ಹೊಟ್ಟೆತುಂಬ ರೊಟ್ಟಿ !

೧೪೩/ದಿನಕರ ದೇಸಾಯಿ

## ಮಂಜು

ಮಂಜಿನ ಮುತ್ತು
ಮುಗಿಲಿಂಬಿತ್ತು
ಚುಕ್ಕಿಯ ಕಣ್ಣೀರು ;
ಬಡವನು ಚೀರೆ
ಅತ್ತವು ತಾರೆ !
ಉದುರಿತು ತುಸು ನೀರು !

# ಚೀನಾದ ಕ್ರಾಂತಿ

ಏಶಿಯಾ ಖಂಡದಲಿ ನವಕಿರಣ—ಮಾರ್ತಾಂಡ
ಉದಯವಾದನು ಬೇಗನೇಳಿರಣ್ಣಾ ;
ಸುಪ್ರಭಾತದ ಸೊಂಪು, ಪಕ್ಷಿಗಳ ಸ್ವರದಿಂಪು,
ಮೂಡಣದ ಬಾನೊಳಗೆ ಕೆಂಪು ಬಣ್ಣ.

ಕಪ್ಪು ಶತಮಾನಗಳದಪ್ಪ ಕತ್ತಲು ಹರಿದು
ಬೆಳಗಾಗೆ ದೂರಾಯ್ತು ನರನ ಭ್ರಾಂತಿ ;
ಹೊಸ ಹುರುಪು, ಹೊಸದು ಜೀವನದಾಸೆ
ಹೊಸ ಯುಗದ ಕೋರಿಕೆಯು ಚೀನ ಕ್ರಾಂತಿ.

ಹೊಸ ತರದ ಹೂವುಗಳು ದೆಸೆದೆಸೆಗೆ ಅರಳಿದವು
ಮೊಗ್ಗೆಯೇ ಕಾಣಿಸದು, ವಿಧಿಯ ಮಾಟ.
ಎಲ್ಲ ಗಿಡಬಳ್ಳಿಗಳು ಒಮ್ಮೆಗೇ ಹೂ ಬಿಡಲು
ಹಿಂದೆಂದಿಗೂ ನೋಡದಂಥ ನೋಟ.

ಯಾವ ಹೂವಿನ ಬಣ್ಣ ಹೇಳುವರು ಯಾರಣ್ಣ ?
ಎಲ್ಲವೂ ಹೊಸದಣ್ಣ ಕಣ್ಣ ಮುಂದೆ.
ಹಸುರು ಹಾಡುವ ವೃಕ್ಷ ಎಸಳು ಬಾಡದ ಪುಷ್ಪ
ಹೊಸ ದೃಷ್ಟಿಯೇ ಹುಟ್ಟಿ ಬಂತು ಇಂದೆ.

ಚೀನ ದೇಶದ ಕ್ರಾಂತಿ ಬ್ರಹ್ಮಾಂಡವದು ವಾಂತಿ
ಕಾರಿ ಹೋಯಿತು ಹತ್ತು ಯುಗದ ಪಿತ್ತ
ಕೆಟ್ಟ ಪಾಪದ ಗಂಟು ಧರೆಗೆ ಹತ್ತಿದ ಅಂಟು,
ತೊಳೆದು ಹೋಯಿತು ದೊಡ್ಡದೊಂದು ಕುತ್ತ

ರಕ್ಷಕನ ಹೆಸರಿನಲಿ ರಾಕ್ಷಸನು ತಾನಾಗಿ
ಜೀವ ಭಕ್ಷಕನಾಗೆ 'ದೇಶಭಕ್ತ'
ಜನರ ದುಃಖದ ಹೊಳೆಯು ಕಾಲ ಪ್ರವಾಹದಲಿ
ಸೆಳೆದು ಹೋದನು ; ಚೀನದೇಶ ಮುಕ್ತ.



೧೪೫/ದಿನಕರ ದೇಸಾಯಿ

ಮನುಜ ಮಾನವನಾಗಿ ಬದುಕುವುದೆ ನಿರ್ಧಾರ
ನಿರ್ಧಾರಕಾಗಿಯೇ ಚೀನ ಕ್ರಾಂತಿ ;
'ಅನ್ನದೇವರ ಮುಂದೆ ಇನ್ನು 'ದೇವರು ಇಲ್ಲ'
ಸಿದ್ಧಾಂತ ಸಿದ್ಧಿಯಲ್ಲಿ ನರನ ಶಾಂತಿ.

ಬುದ್ಧದೇವನ ಕನಸು ನನಸಾಗಿ ಬಂತೇನೋ ?
ಮಾನವನ ಸಂಸ್ಕೃತಿಯ ಹೊಸದು ಹಣ್ಣೋ ?
ಬೋಧಿವೃಕ್ಷವು ತಿರುಗಿ ಚಿಗುರೊಡೆದು ಫಲಿಸಿತೋ ?
ಬೌದ್ಧ ತತ್ವವು ಕ್ರಾಂತಿಗೆರೆಯ ಮಣ್ಣೋ ?

ಚೀನ ದೇಶದ ಗಾಳಿ ಹೂಣ ದೇಶಕೆ ಬೀಸಿ
ಏಶಿಯದ ದೆಸೆದೆಸೆಗೆ ಸುಳಿವುದೇನೋ ?
ಹೂವಿಂದ ಹೂವಿನಲಿ ಭಾವಭೃಂಗವು ಹಾರೆ,
ಕ್ರಾಂತಿ ಬೀಜನ ಗಾಳಿ ತರುವುದೇನೊ ?

ಮೂಡಲ ಕಡಲ ತೆರೆ ಹಿಗ್ಗಿ ಮುಗಿಲಿಗೆ ಹಾರೆ,
ಲೋಕ ವಾತ್ಸಲ್ಯವೇ ಉಕ್ಕಿ ಬಂತು.
ಹಕ್ಕಿಗೂ ಆನಂದ ಚುಕ್ಕಿಗೂ ಸಾನಂದ
ಸತ್ತವರಿಗೂ ಕುಣಿವ ಹಕ್ಕು ಬಂತು !



# ಕೆಂಪು ಬಾವುಟ

ಕೆಂಪು ಬಾವುಟವು ರೈತನದೊ | ಈ ||
ರಕ್ತ ಬಾವುಟವು ಕೂಲಿಯದೋ || ಪಲ್ಲ ||

ಬಡವರ ಉರದಲಿ ಹಸಿವೆಯು ಸುಣ್ಣ
ಉರಿದೂ ಉರಿದೂ ಉರಿದೂ ಹುಣ್ಣ
ಹುಣ್ಣಿನ ನೆತ್ತರು ಧ್ವಜಕದು ಬಣ್ಣ !
ಕೆಂಪು ಬಾವುಟೆಯು..................||

ರೈತನಿಂದಲೇ ಜನದಲಿ ಅನ್ನ
ರೈತನ ಹೊಟ್ಟೆಯು ತುಂಬುವ ಮುನ್ನ
ಕೊಡಲಾಗದು ಯಾರಿಗು ಬೆಳೆಯನ್ನ !
ಕೆಂಪು ಬಾವುಟೆಯು...............

ಕೂಲಿಯಿಂದಲೆ ಜಗದಲಿ ಕರ್ಮ
ಶ್ರಮ ಜೀವನವೇ ವಿಶ್ವದ ಮರ್ಮ
ಕೂಲಿಯ ಸುಖವೇ ಮಾನವ ಧರ್ಮ !
ಕೆಂಪು ಬಾವುಟೆಯು...............

ರೈತನಂತೆಯೇ ಬೆವರಲಿ ತೇಲಿ
ಕಾರಖಾನೆಯಲಿ ದುಡಿವನು ಕೂಲಿ
ಪ್ರಗತಿ ರಥಕೆ ಇವರಿಬ್ಬರು ಗಾಲಿ
ಕೆಂಪು ಬಾವುಟೆಯು...............

ಹಾರಲಿ ಹಾರಾಡಲಿ ಈ ಧ್ವಜವು
ಧ್ವಜದ ಕೆಳಗೆ ರೈತರ ಭುಜಬಲವು
ಜಮೀನುದಾರಿಯ ಮರಣವು ನಿಜವು
ಕೆಂಪು ಬಾವುಟೆಯು...............

೧೯೭೭/ದಿನಕರ ದೇಸಾಯಿ

ಕೂಲಿಕಾರ ಒಕ್ಕಲಿಗರ ಬಲವು
ಮೀನುಗಾರ ಶ್ರಮಜೀವಿಯ ಕುಲವು
ಒಂದೆಡೆ ಸೇರಲು ಜನತೆಯ ಗೆಲುವು
ಕೆಂಪು ಬಾವುಟೆಯು................

ಮೂಡಣ ಪಡುವಣ ಬಡಗಣ ತೆಂಕಣ
ಐದು ಖಂಡಗಳ ಶ್ರಮಜೀವಿಯ ಗಣ
ಎತ್ತಿ ಹಿಡಿದ ಧ್ವಜ ವಿಶ್ವದ ತೋರಣ !
ಕೆಂಪು ಬಾವುಟೆಯು................

ಧ್ವಜದಲಿ ಮೂಡಲು ಅನುಪಮ ಭಕ್ತಿ
ಹೊಳೆವುದು ಬೆಳೆವುದು ಜನತೆಯ ಶಕ್ತಿ
ಇದರೊಳಗೇನೇ ಮನುಜನ ಮುಕ್ತಿ
ಕೆಂಪು ಬಾವುಟೆಯು................

ಬಿಟ್ಟು ಬಿಡಲು ನಾವ್ ಸಂಶಯ ಭ್ರಾಂತಿ
ನಾಲ್ಕು ದಿಕ್ಕಿನಲಿ ಹಬ್ಬಿತು ಕ್ರಾಂತಿ
ಸಮತಾವಾದದಿ ವಿಶ್ವದ ಶಾಂತಿ !
ಕೆಂಪು ಬಾವುಟೆಯು................

ಕೆಂಪು ಧ್ವಜದಲೇ ಜನತೆಯ ತ್ರಾಣಾ
ಧ್ವಜ ಬಿಡಲಾರೆವು ಹೋದರು ಪ್ರಾಣಾ
ವೀರಪ್ರತಿಜ್ಞೆಯು ವೆಂಕಟರಮಣಾ !
ಕೆಂಪು ಬಾವುಟೆಯು................

# ಬಡತನ

ಬಡತನದ ಬೇಗೆಯಲಿ ಬೆಂದ ಭಿಕ್ಷುಕನೊಬ್ಬ
ಮಸಣದಲಿ ಮಲಗಿದ್ದ ಹೆಣಕೆ ಅಂದ :—

“ಬಡತನದ ಭಾರವನು ಸ್ವಲ್ಪ ಹಿಡಿ, ಎದ್ದೇಳು
ಬದುಕಿಸೆನ್ನನು ತಲೆಯ ಭಾರದಿಂದ ;
ಇತ್ತೀಚೆ ಬಾಳುವೆಗೆ ಮತ್ತಿಷ್ಟು ಬೇಸತ್ತು
ನಿನ್ನ ಬಗೆ ನನಗಿಂತಲೂ ಮಿಗಿಲು ಎಂದು ;
ನಿನ್ನೆಡೆಗೆ ಬಂದಿಹೆನು ತಾಪ ಕಳೆಯಲಿಕೆಂದು
ನಿನ್ನ ಶಾಂತಿಯ ನಾನು ಪಡೆಯಲೆಂದು”

ಬಡತನದ ಬಾಳ್ವಿಗಿಂತಲು ಮರಣ ಲೇಸೆಂದು
ಒಪ್ಪಿಕೊಳ್ಳುವ ತೆರದಿ ಬಿದ್ದ ಹೆಣವು
ಮರುಮಾತನಾಡದೆಯೆ ಮೌನದಲಿ ಮಲಗಿತ್ತು !
ಇಂತಿಹುದು ಬಡತನದ ಕೆಟ್ಟ ಋಣವು !

## ಹರಿಜನರು

ಆಗೇರ ಸೋಮೂ
ಮುಕ್ರೀ ಓಮೂ
ಹಳ್ಳೇರ ಖೇಮೂ ಹರಿಜನರೋ ;
  ಹಗಲೂ ಇರುಳೂ
  ಬೆಳಗೂ ಬೈಗೂ
  ದುಡಿದೂ ಹೊಟ್ಟೆಗೆ ಸಿಗದವರೋ !

ಬಿಸಿಲಲಿ ಬೆಂದು
ಬೆವರಲಿ ಮಿಂದು
ಭೂಮಿಗೆ ಕಳೆಯನು ತಂದವರೋ
  'ಬರಿದೇ ಹೊಟ್ಟೆ
  ನ್ಯೈಯಲಿ ಬಟ್ಟೆ
  ಇಲ್ಲದೆ ಕೆಟ್ಟೆ' ಎಂಬುವರೋ !

ಮಳೆಗಾಲ ಬಂತು,
ಕೆಲಸಾನಂತು
ದುಡಿಸುವರಿಲ್ಲಾ, ಜರ್ ಜರರೋ !
  ಸರಕಾರ್ ಸುಳ್ಳು
  ಜನರಿಗೆ ಮುಳ್ಳು
  ಬಡವರದಲ್ಲಾ, ಒಡೆಯರದೋ !

ಗುಡಿಸಲು ಸಣ್ಣಾ
ತೊಯ್ದಿದೆ ಮಣ್ಣಾ
ಸೋರುವುದಣ್ಣಾ ಅಲ್ಲಲ್ಲಿ !
  ಮಡಕೆಯು ತುಂಡು ;
  ಸುತ್ತುವ ಮುಂಡು
  ಜಿರಿಜಿರಿಯಾಗಿದೆ ಅಲ್ಲಲ್ಲಿ !

ಮದುವೆಯು ಬಂದರೆ
ಸಾಲವ ತಂದರೆ
ಸಾಯುವವರೆಗೂ ದುಡಿಸುವರೋ !
ಸತ್ತರೆ ತಂದೆ
ದುಡಿವನು ಮುಂದೆ
ಮಗ ತಾನಿದ್ದರೆ; ದಣಿಸುವರೋ ;

ತೆಗೆದರೆ ದೆವ್ವ
ಮುದುಕಿಯು ಅವ್ವ
ಬದುಕುವಳೆಂಬುದೆ ವಿಶ್ವಾಸ !
ಭಟ್ಟರ ಮಂತ್ರಾ,
ಪೋಡಿಯ ಯಂತ್ರಾ,
ದೆವ್ವದ ತಂತ್ರಾ ; ಬಲು ಪಾಪಾ !

ಕೂಲಿಯ ಕೆಲಸಾ
ಇಲ್ಲದ ದಿವಸಾ
ಉರದಲಿ ತಾಪಾ ಉಪವಾಸಾ !
'ಯಾಕೋ ಕದ್ದೆ ?
ಹೊಟ್ಟೆಗೆ ತಿಂದೆ'
ಎನ್ನುವ ಜಾಣರಿಗಾವೇಶಾ.

ಗುಡಿಸಲು ಭೂಮಿ
ಒಡೆಯರು ಸ್ವಾಮಿ
ಅಡಿಯಷ್ಟೂ ನೆಲ ನಮಗಿಲ್ಲಾ !
ಇಲ್ಲಾ ಗದ್ದೆ !
ಇರುವುದು ಹುದ್ದೆ !
ಹರಿಜನ ಹುದ್ದೆಯು ನಿಮಗಿಲ್ಲಾ !

ಶಿಕ್ಷಣ ಲೇದು
ಬಾರದು ಓದು
ಲೆಕ್ಕಾಪೊಕ್ಕಾ ಸೆಟ್ಟರಿಗೆ ;

ಮಣ ಮಣ ಮಂತ್ರಾ
ದೇವರ ತಂತ್ರಾ
ಬರುವುದು ಮಾತ್ರಾ ಭಟ್ಟರಿಗೆ !

ಸಾಲದು ತ್ರಾಣಾ
ಹೋಗದು ಪ್ರಾಣ !
ಭಗವಂತನಿಗೇ ಅರ್ಪಣವೋ ?
ಬಡ ಕಂಗಾಲಿನ
ಹರಿಜನ ಜೀವನ
ನ್ಯಾಯ ನೀತಿಗಳ ದರ್ಪಣವೋ ?

ಬಂತು ಸ್ವರಾಜ್ಯ
ಆದರು ಭಾಗ್ಯ
ಹರಿಜನಕಿಲ್ಲಾ, ನಿರ್ಬಲರೋ ;
ಹರನೂ ನೋಡಾ !
ಹರಿಗೂ ಬೇಡಾ !
ಹೆಸರಿಗೆ ಮಾತ್ರ ಹರಿಜನರೋ

## ಚುಟುಕಗಳು

### ಬಡತನ

ಆಲಿಂಗನವ ಕೊಡಲು ಬಡತನದ ರಂಡೆ
ಕೆಂಡವನ್ನೇ ತಬ್ಬಿಕೊಳ್ಳುವುದ ಕಂಡೆ
ಮುತ್ತು ಕೊಡುತಿರುವಾಗಲೇ ಅವಳ ಆತ್ಮ
ಸತ್ತು ಹೆಣವಾಗಿತ್ತು, ಕೇಳು ಪರಮಾತ್ಮ.

### ಯೋಜನೆಯ ಫಲಶ್ರುತಿ

ಇಪ್ಪತ್ತು ವರುಷ ಮಾಡಿದರು ಪ್ಲ್ಯಾನಿಂಗು
ಬಡಜನರ ಬಾಯೊಳಗೆ ಹಾಕಿದರು ಹಿಂಗು
ಮಧ್ಯರಾತ್ರಿಯ ತನಕ ಕೊಚ್ಚಿದರು ಜಂಬ
ಬೆಳಕು ಹರಿಯಲು ಎಲ್ಲವೂ ಅಗಡಬಂಬ.

### ಹಾಲಕ್ಕಿ ಒಕ್ಕಲಿಗ

ಇವನ ಮನೆಯೊಳಗಿಲ್ಲ ಸಾಕಷ್ಟು ಅಕ್ಕಿ
ಅದರೂ ಈತನಿಗೆ ಹೆಸರು ಹಾಲಕ್ಕಿ
ಹಾಲು ಅಕ್ಕಿಗಳೆರಡೂ ಹೆಸರೊಳಗೆ ಮಾತ್ರ
ಹಸಿವೆಯೆಂಬುದು ಇವನ ಹಣೆಯ ಕುಲಗೋತ್ರ

### ಇವರ ಸಮತಾವಾದ

ಇವರ ಸಮತಾವಾದ ಕೃತಿಗಿಳಿದು ಮೊನ್ನೆ
ಸಾಮಾನ್ಯ ಜನರ ಪಾಲಿಗೆ ಬಂತು ಸೊನ್ನೆ
ಸರಕುಗಳ ಬೆಲೆಯೇರಿ ಬಂಡವಾಳಶಾಹಿ
ಮತ್ತಷ್ಟು ಅಗಲಗೊಳಿಸಿತು ತನ್ನ ಬಾಯಿ.

### ಪ್ರಜಾರಾಜ್ಯದ ಸುಭಾಷಿತ

ಈ ಪ್ರಜಾರಾಜ್ಯದಲ್ಲಿ ಪ್ರಾಮುಖ್ಯ ರೊಕ್ಕ
ರೊಕ್ಕದಿಂದಲೇ ನಷ್ಟವಾಗುವುದು ದುಃಖ
ರೊಕ್ಕವೇ ನಕ್ಕು ನಗಿಸುವ ದೇವದಾಸಿ
ಠಕ್ಕತನವಿದ್ದರಂತೂ ರೊಕ್ಕರಾಶಿ.

೧೯೫೩/ದಿನಕರ ದೇಸಾಯಿ

**ಕವಿಗೆ**

ಎಲೆ ಕವಿಯೆ, ಸುಡು ನಿನ್ನ  ಕವನಗಳ ಕೀರ್ತಿ,
ತಿಳಿಬಾನು ಗಿರಿಕಾನುಗಳೆ ನಿನ್ನ  ಸ್ಫೂರ್ತಿ
ಕೇರಿಕೇರಿಗಳಲ್ಲಿ ಉರಿದರೂ ಜ್ವಾಲೆ
ಕವನ ಕಟ್ಟುವೆ ನೀನು ಮಲ್ಲಿಗೆಯ ಮೇಲೆ.

# ಜಿ. ಪಿ. ರಾಜರತ್ನಂ

## ಯೆಂಡ ಕುಡಿಯೋರ್ ನಾವು

ದೊಡ್ಡೋರ್ನ್ಗ ಎಚ್ಗೆ ಸಂಬ್ಳಾಂತ್ ಅಂದ್ರೆ
ಚಿಕ್ಕೋರ್ ಕೆಲ್ಸಕ್ ಕೋತ !
ಆನೆ ಮೈನ ಬೆಳಸಬೇಕಂದ್ರೆ—
ಆವ್ತಿ ಬಡಕಲ್ ವೋತ !

ಗುಡಿಸಿಲ್ಗ ಉಲ್ಲು ಸಾಲ್ದಿದ್ರೂನೆ
ಮಾಡೀಗ್ ಮಾಡಿ ಬಡ್ತಿ !
ರೂಪಾಯ್ಗ ಒಂದ್ ಕಾಸ್ ಕಮ್ಮಿ ಬಂದ್ರೆ
ಬಡವ್ರೋನ್ ಮನೇ ಜಡ್ತಿ

ನಾಯ್ನ ನಾಯೇ ತಿಂತಾದಂತೆ
ಮಿಾನ್ಗೆ ಮಿಾನೆ ತಿಂಡಿ !
ಮನ್ಸನ್ ಮನ್ಸ ತಿಂತಾನ್ ಈಗ
ಜೀವಪೂರ ಯಿಂಡಿ

ಯೆಂಡ ಕುಡಿಯೋರ್ ನಾವ್ ಇಂಗಿಲ್ಲ
ಬುಂಡೆ ಪೂರ ತಂದಿ
ಪಕ್ದೋರ್ನ್ ಕೈಲಿ ಕಾಸ್ ಇಲ್ದಿದ್ರೆ
ಔನ್ಗೆ ಕೊಡತೇವ್ ಸೇಂದಿ

೧೫೫/ಜಿ. ಪಿ. ರಾಜರತ್ನಂ

ನಂತಾಕ್ ಬಂದ್ರೆ ಯೋಳ್ಕೊಡ್ತೀವಿ
ದಾನಧರ್ಮುಕ್ ಅರ್ತ
ಸಾಜ ಕೇಳಿ ಕೇಳ್ಕೊಂಡ್ ಓದ್ರೆ—
ಕೋಪಾನೆಲ್ಲ ವೆರ್ತ

# ಬಡವನ್ ದೇವ್ರು

ಸಾವರ್ ಜನಕೆ ಸಾವರ್ ದೇವ್ರು !
ಬಡವನ್ ದೇವ್ರು ವೊಟ್ಟೆ !
ದುಡ್ಡಿನ್ ಡಬ್ಬಿ ! ಯೋಳಾದ್ ಕೇಳು !
ಸತ್ಯಕ್ ನಾ ಬಾಯ್ ಕೊಟ್ಟೆ

ತಿನ್ನದ್ ಕಲ್ಲಿನ್ ದೇವರ್ ಮುಂದೆ
ತಿಂಡಿ ತುಂಬಿದ ತಟ್ಟೆ !
ಕಾಲಿ ತಿಂದು ಕಾಲಿ ತಿಂದು
ಕೆರಳುರುಳ್ತೈತೆ ವೊಟ್ಟೆ

ಬಡವನ್ ದೇವ್ರನ್ ಕೆರಳಿಸ್ಬಾರ್ದು—
ಲೋಕಕ್ ಒಳ್ಳೇದಲ್ಲ
ಬಡವನ್ ದೇವ್ರಿಗ್ ನರಳಿಸ್ತಿದ್ರೆ
ಲೋಕಕ್ ಬೆಳಕೇ ಇಲ್ಲ

ನೀ ಮುಗ್ದಿ ಪೂಜೇ ಮಾಡೋ ದೇವ್ರು
ಮುನ್ನೂರ್ ಮುವತ್ತು ಕೋಟಿ
ಇದ್ರೂ ಬಡವನ್ ದೇವ್ರಿಗೂನೆ
ತೋರ್ಸು ಆ ಪೈಪೋಟಿ

ತಿನ್ನೋನಾರ್ವು ದುಡೀಲೂನಾರ್ವು
ಕಲ್ಲಿನ್ ದೇವರ್ ಗುಂಪು !
ಬಡವನ್ ದೇವ್ರಿಗ್ ನೀನ್ ಇಕ್ಕಿದ್ರೆ
ನಿನ್ಗೆ ಬಾಳ ತಂಪು

ನಂದೇವರ್ಗೆ ಬೋನ ನೀಡು—
ದರ್ಮ ಬರತೈತ್ ನಿಂಗೆ
ದುಡ್ಡಿನ್ ಡಬ್ಬಿ ಕರಗೀತ್ ಅಂತ
ಸುಂಕೆ ಕುಂತ್ರೆ ಎಂಗೆ ?

೧೯೭೭/ಜಿ. ಪಿ. ರಾಜರತ್ನಂ

ಅಗ್ನಾನೀಗೆ ಮೆಲ್ಗ್ ಯೇಳ್ತಾರೆ
ಎಂಟ್ ಆತ್ ಸಾರಿ ಬುದ್ದಿ ;
ಕೇಳ್ದಿವೋದ್ರೆ ಗೊತ್ತೈತಲ್ಲ—
ಯಿಡಕೊಂಡ್ ಮಾಡ್ಸೋದ್ ಒದ್ದಿ !

ಬಡವನ್ ದೇವ್ರಗೆ ಕೆಣಕ್ಲೆಬಾರ್ದು
ನೀ ಕಂಡಿಲ್ ಅದರ್ ಯೇಟ !
ಬಡವನ್ ದೇವ್ರು ಲೋಕಾನ್ ನುಂಗೋ
ಜೋಲಾಮುಕಿ ! ಬೇಟ !

ಬಡವನ್ ದೇವ್ರು ಗರ್ಜಿಸ್ತಿದ್ರೆ
ಕೇಳಿಸ್ತಿದ್ರೆ ಆ ಸದ್ದು—
ಕಲ್ಲಿನ್ ದೇವ್ರು ಗಿಲ್ಲಿನ್ ದೇವ್ರು
ಪೇರಿಕಿತ್ತಾರ್ ಎದ್ದು

ಬೆನ್ನಿನ್ ಚರ್ಮ ಬದ್ರಾಗ್ ಇರಲಿ !
ಬಡವನ್ ದೇವ್ರಿಗ್ ಬೊಗ್ಗು !
ಕಲ್ಲಿನ್ ದೇವ್ರಿಗ್ ಉಲ್ನೆ ತಿನ್ಸಿ
ಸದ್ಯಕ್ ಉಳದೇಂತ್ ಯಿಗ್ಗು

# ತ್ರುಪ್ತಿ

'ದುಡ್ ಉಳ್ಳೋರು ದುಡ್ ಇಲ್ದೋರು
ಲೋಕಕ್ ಎಳ್ಡೇ ಜಾತಿ'
ಅಂತಂದಾನೆ ನಮ್ಮೌನ್ ಒಬ್ಬ !
ಏ ಹೈ ಸಚ್ಚಿ ಬಾತ್ಜಿ !

ಪೈಲಾದೋರು ದುಡ್ಡಿಗ್ ದತ್ತು
ಔರ್ ಕಂಡಿಲ್ಲ ತ್ರುಪ್ತಿ !
ಕಾಸ್ ಇಲ್ದಿದ್ರು ದುಸರೀಯೋರ್ಗೆ
ಇದ್ದಿದ್ರಲ್ಲೆ ತ್ರುಪ್ತಿ

ದುಸರಿಯೋರ್ದು ತ್ರುಪ್ತಿ ಸತ್ರೆ
ಲೋಕಕ್ ಬಂತು ಚಟ್ಟ !
ಆಗಯಾರೆ ಚಟ್ಟಾಂತಂದ್ರೆ—
ಎಲ್ಲ ಘನ ! ಮಟ್ಟ

ಬಡವರ ತೃಪ್ತಿಗೆ ದಪ್ಪನ್ ಅಂದ್ರೆ
ಎಲ್ಲಾರ್ ಬಾಯ್ಗೂ ಮಣ್ಣು
ದೊಡ್ದು ಚಿಕ್ದು ಸಬ್ಬಿ ಒಟ್ಗೆ
ಎಕ್ಕ ಉಟ್ಕೋಯ್ತದಣ್ಣ !

ಲೋಕಾನ್ ಬದಕ್ಕೋ ಇಸ್ನೊಂತೆ ಅಂದ್ರೆ
ದುಸರೀಯೋರ್ದು ತ್ರುಪ್ತಿ
ಪೈಲಾದೋರ್ಗೆ ಉಸರಾಡ್ಸೋದೂ
ದುಸರೀಯೋರ್ದು ತ್ರುಪ್ತಿ !

ದುಸರಿ ಜೊತ್ಗೆ ಪೈಲಾದೋರ್ದು
ತ್ರುಪ್ತಿ ಮಿಲಾಯ್ಸೋದ್ರೆ—
ಬೂಮಿಾಗ್ ಇರೋರ್ಗ್-ಯಾಕ್ ಬೇಕಣ್ಣ
ಸೊರ್ಗಗಿರ್ಗದ್ ತೊಂದ್ರೆ

೧೯೫/ಜಿ. ಪಿ. ರಾಜರತ್ನಂ

ಯೆಂಡದ್ ಮುನ್ಯ ನೀರ್ ಗೀರ್ ಬೆರಸಿ
ಮೋಸ ಮಾಡೌನ್ ನೆಮ್ಸಿ
ಅದಕೇ ಈವೊತ್ ಕನ್ನಡ್ ಪದಕೆ
ಬೆರಕ್ಯಾಗೈತೆ ಕ್ಸಮ್ಸಿ !

# ನಾಡಿನ್ ಬಡವ ಸರ್ಕಸ್ ಸಿವ್ಮ

ನಾಡಿನ ಬಡವ ಸರ್ಕಸ್ನ ಸಿವ್ಮ !
ಕವ್ಚಿಯಿಡಿದೋನ್ ಬೆಪ್ಪ ನನ್ ತಮ್ಮ !
ಔನ್ಗೆ ಯೆದರಿ ಬಾಲಾ ಮುದರಿ
ಮೂಲ್ಯಾಗ್ ಮುದರ್ಕೋಬೇಕ ?
ಕವ್ಚಿ ಯಿಡಿದೋನ್ ಕೈಲ್ ಏನ್ ಆಗ್ತೈತೆ ?
ಔನ್ಗೆ ಯೆದರ್ಕೋಬೇಕ !

ನಿನ್ಗೇ ಗೊತ್ತಿಲ್ಲಾ ನಿನ್ನ ಸಕ್ತಿ !
ಯೋಳಾಕ್ ಬಂದ್ರೆ ಸಿರ್ರಂತ್ ರೇಗ್ತಿ !
ಕೂಕ್ಕೊಂಡ್ ಕಚ್ಕೊಳ್ರ್ ಮೇಲೆ ಆರ್ಬರ್ತಿ !
ಏನ್ ಏಳಾನೆ ಸಿವ್ಮ !
ಮಕ್ಕಳ್ನ ಇಡಿದಂಗೆ ಇಡಿದೈತ್ ನಿನ್ನ
ಕವ್ಚಿ ಯಿಡಿಯೋ ಗುಮ್ಮ

ದುಡಿಯೋನ್ ನೀನು ! ಪಡೆಯೋನ್ ಔನು !
ಬೋನ್ ನಿನಗಾದ್ರೆ ಔನ್ಗೆ ಗೌನು !
ದುಡ್ಡೀದುಡ್ಡೀ ದುಡ್ಡಿನ್ ಬೆಟ್ಟ
ನೀ ಮಾಡಾಕು ! ಪೇಸ್ರು !
ನಿನ್ ದುಡ್ನಲ್ಲಿ ತಕ್ಕೋಂತ್ ಒಂದು ಕಾಸ್
ನಿಂಗ್ ಔನ್ ಎಸದ್ರೆ ಸೈಸ್ರು

ಮೈ ನಿಂಗ್ ಐತೆ ಮನಸ್ ನಿಂಗ್ ಇಲ್ಲ ?
ಮನಸೂ ಐತೊ ! ನೀನ್ ನೋಡಾಲ್ಲ !
ಸಕ್ತಿ ಅದೆ ! ಉಕ್ತಾ ಅದೆ !
ನಿಂಗೆ ಎಲ್ಲಾ ಅದೆ !
ಸರಪ್ಣಿ ಬಿಕ್ಕೊಂಡ್ ಸುಂಕ್ ಯಾಕ್ ಇರಬೇಕ್
ಎತ್ತಿ ಅದನ್ ಆಚೇಗ್ ಒದೆ !

ಬೂಮಿಾಲ್ ಮನ್ಸ ನೀರಲ್ ವಿಾನು
ಮೇಲ್ ನಕ್ಸತ್ರ ಎಲ್ಕ್ಕ ನೀನು
ಪರಪಂಚ್ಕೆಲ್ಲ ಒಡೆಯು ನೀನು !
ಏನ್ ಏಳಾನೆ ನಿನ್ಗೆ !
ಗುಡಿಸೊ ಪೊರಕೆ ಆಗೋದ್ನಲ್ಲ
ಎಜಮಾನ್ನೇನೆ ಮನ್ಗೆ !

ಕಮ್ಚಿಗಾ ನೀನ್ ಎದುಕೊರ್ಬೇಕು ?
'ಹ್ಜೂ' ಅಂತ್ ಒದರಿ ಗರ್ಜಿಸ್ ಸಾಕು !
ಮೈನಾಗ್ ಕೂದ್ಲು ಶಠಂ ಅಂತ್ ಇರ್ಲಿ !
ಬಾಲದ್ ಬಾವ್ಟ ಏರ್ಲಿ !
ಕಮ್ಚಿ ಇಡಕೊಂಡ್ ಯಾವ್ರೋನ್ ಬಂದಾನ್
ನೋಡ್ಜೌ ಬರೋನ್ ಬರ್ಲಿ

# ಪೇಜಾವರ ಸದಾಶಿವರಾಯ

## ಕಮ್ಮಾರ

ನೀನಾರು ಕಮ್ಮಾರ ? ಮೌನಿಯಾಗೇಕಿರುವೆ
ಕುದಿಯುತಿಹ ಕುಲುಮೆಯಲಿ ಏನ ಕಾಸುತಿಹೆ ?
ಕಾದಿರುವ ಕಬ್ಬಿಣದ ಅಡಿಗಲ್ಲ ಮೇಲಿಟ್ಟು
ಸುತ್ತಿಗೆಯ ಹೊಡೆತದಿಂದೇನ ಮಾಡುತಿಹೆ ?
"ಧನಿಯಂತೆ ತಲೆ ಎತ್ತಲನುವಾದ ದಾಸನನು
ಬಂಧಿಸಲು ಶೃಂಖಲೆಯ ಮಾಡತೊಡಗಿಹೆನು"

ಕುಲುಮೆಯಲಿ ಈಗೇನ ಕಾಸುತಿಹೆ ಕಮ್ಮಾರ
ನಿನ್ನ ಚಮ್ಮಟಿದನಿಯು ಕೇಳುತಿದೆ ದೂರ
ಚಿಲುಮೆಯಗ್ನಿಯ ಪ್ರಭೆಯು ಕಣ್ಣ ಕುಕ್ಕಿಸುತಿಹುದು
ಮೊದಲ ಸಂಕಲೆಗಿಂತ ಈಗಿನದು ಭಾರ ?
"ಬಡತನದ ಸೋದರಗೆ ಆಳ್ತನದ ಬೇಡಿಯನು
ತೊಡಿಸಿರುವ ಯಜಮಾನಗಿದ ಮಾಡುತಿಹೆನು"

# ಅಮ್ಮೆಂಬಳ ಶಂಕರನಾರಾಯಣ ನಾವಡ

## ಜಾತಿಯ ಭೂತ

ಮಾನವರೆ ವಿರಚಿಸಿದ ಜಾತಿಯ ಭೂತ ಬೃಹದಾಕಾರದೆ
ಬಾನು-ಬುವಿಯನು ಮೀರಿನಿಂತಿದೆ ಯಾರ ಕೈಗೂ ನಿಲುಕದೆ
ಸ್ವಾರ್ಥ ಜಿಹ್ವೆಯ ಚಾಚಿ ವಿಲಯದ ನಾಟ್ಯ ನಲಿಯಲು ತೊಡಗಿದೆ
ರಕ್ತನದಿಯನು ಹರಿಸಿ, ನರತೆಯ ದಿವ್ಯತೆಗೆ ಮುಸಿಹಚ್ಚಿದೆ.

ಎಂದಿಗಿದಕಳಿಗಾಲ ಬರುವುದು ?
ನಲುಮೆ-ಗೆಳೆತನ ಬಳೆವುದು ?

ಒಂದೆ ನೆಲತಾಯ್ ಬಸಿರಿನಿಂದಲಿ ಬಂದರೂ ನರರೆಲ್ಲರು
ಅಣ್ಣ-ತಮ್ಮದಿರಂತೆ ಬಂಧುತೆಯಿಂದ ಬಳವಿಯನೊಲ್ಲರು
ಹಿಂದುವಾದರೇನು ? ಮುಸ್ಲಿಮರಾದರೇಂ ? ಮಾನವ ತನು
ಭಿನ್ನರೀತಿಯನಾಂತು ಕಾಂಬುದೆ ? ಸುಮ್ಮನೇ ಹಗೆತನವನು

ಬೆಳೆಸಿ ಒಬ್ಬರನೊಬ್ಬರಿರಿವರು
ನರಕವನು ತಂದಿಡುವರು

ಸತ್ಯ ಸೌಂದರ್ಯದಲಿ ಮಿಂಚುವ ನೇಹದಾಗರ ತಿರೆಯಲಿ
ಶಾಂತಿ-ಸುಖ-ಸಂತೋಷ ಸುಧೆಯನು ಹೀರುವುದನುಳಿಯುತ್ತಲಿ
ಕ್ರೋಧ ವಿಷವಹ್ನಿಯಲಿ ದಯೆಯನು ಹೋಮಿಸುತ, ಕಟು ಕ್ರೌರ್ಯದ
ರೂಕ್ಷ ರಾಕ್ಷಸತನದಿ ಕೊಲ್ಲುವ ಕೊಲ್ಲಿಸುವ ಖಲ ದುರ್ಮದ

ಮುಂದೆಗೆಂದೂ ಹೆಡೆಯನೆತ್ತದೆ
ಇರಲಿ ಸಾಗರದಾಳದೆ

ನರರು ಭೂಮಿಯೊಳೊಗೆದು ಶತ ಶತಮಾನಗಳು ಸಂದಿರುವುವು
ದಿವಸ ದಿವಸಕೆ ಬುದ್ಧಿ ಬಳೆಯುತ, ಮನುಜ ಸಂಸ್ಕೃತಿ ಸತ್ವವು
ಉತ್ತಮತೆಯನು ಪಡೆದು, ದಿವ್ಯತೆಯನ್ನು ಗಳಿಪುದು ಧ್ಯೇಯವು
ಗುರಿಯು ಸಾಧಿಸದಿಂತು ಗರ್ವದಿ ಪತನವಿದು ದುರದೃಷ್ಟವು

ಹಿಂದು–ಮುಸ್ಲಿಮರೊಂದೆ ಬಟ್ಟಲಿ–
ನಲ್ಲಿ ನೇಹವನೀಂಟಲಿ

ವಿಶ್ವಕೊಬ್ಬನೆ ಸಾಕು ದೇವರು ನಾಮರೂಪಗಳಿಲ್ಲದ
ಜಾತಿಯೊಂದೇ ಸಾಕು ನರರದು ಹೆಣ್ಣು ಗಂಡಿನ ಭೇದದ
ಆಯುತ್ತೈಲವು ಬತ್ತುವನಕವು ಜೀವದೀಪವು ಬೆಳಗಲಿ
ಮಧ್ಯದಲಿ ನಂದಿಸುವ ಘಾತುಕತನದ ಕತ್ತಲೆ ಕಳೆಯಲಿ

ಕಟುಕತನದ ಮೋಡಗಳು ಬಿರಿಯಲಿ !
ಶಾಂತಿಚಂದ್ರಿಕೆ ಮಿರುಗಲಿ !!

# ರೈತರ ಹಾಡು

ನಾಡಿನ ಜನರಿಗೆ ನಾವ್ ಬೆನ್ನೆಲುಬು
ಅನ್ನವ ದುಡಿವುದೆ ನಮ್ಮಯ ಕಸುಬು
ಆದರೆ ಏನೆಂದೊರೆಯಲಿ ನಾವು ?
ಪಾಲಿಗೆ ಬರುವುದು ಬರಿ ಮಳಲು.

ಮಳೆಯಲಿ ಚಳಿಯಲಿ ನಡುನಡುಗುತ್ತ,
ಬಿಸಿಲಿನ ಬೆವರಲಿ ಕುದಿಕುದಿಯುತ್ತ,
ಪಾಪದ ಪಶುಗಳ ಎದೆಯುರಿಸುತ್ತ
ಕೋಲಿಂ ಬಡಿಯುತ ಉಳುವೆವು ಸುತ್ತ

ಧನಿಗಳ ಸ್ವಾರ್ಥಕ್ಕೆ
ನಮ್ಮ ಪರಾರ್ಥಕ್ಕೆ

ನೇಸರು ಮೂಡುವ ಮೊದಲಿಂ ಹಿಡಿದು
ಸಂಜೆಯ ನೆರ್ಳಿನ ಮಬ್ಬಿನವರೆಗು
ಕರ್ಮ ಕ್ಷೇತ್ರದ ಹೊಲ–ನೆಲದಲ್ಲಿ
ಒಲವನು ಗಣಿಸದೆ
ಮಮತೆಯನೆಣಿಸದೆ
ಬಿರುಮಾತಿನ ವಿಷ ಹಾಲಾಹಲದಿ
ಹೆಂಡತಿ–ಮಕ್ಕಳ ಗೆಯ್ಸುವೆವು ;
ಗೇದೂ ಗೇದೂ ಸೋಲುವೆವು

ಬೆಳೆಬರುವಾಗ ಧನಿಗಳು ಬೇಗ
ಬರುವರು, ಕೊಂಡೊಯ್ವರು ಮನೆಗೆ
'ಉಂಡಿರೊ ನೀವು, ತಿಂದಿರೊ ನೀವು ?'
ಎಂಬಾ ಪ್ರಶ್ನೆ ದಿಗಂತದ ಹೊರಗೆ.

ನಮ್ಮರಿಯ ಹಸಿವೆಯ ಗಣಿಸುವರಿಲ್ಲ
ಸುಖ-ದುಃಖದ ನೆಲೆ ತಿಳಿಯುವರಿಲ್ಲ
ಎಂದೊ ಜಮೀನಿಗೆ ತೆತ್ತಿಹ ಹಣಕೆ
ನಮ್ಮ ಗೆಯ್ಮೆಯ ಫಲ ಬೇಕೆ?

ಎಲ್ಲಾ ದಿನದಲಿ ನಮಗರೆಹೊಟ್ಟೆ ?
ಬರೆ ತೆಳಿನೀರಲಿ ದುಡಿವುದೆ ರಟ್ಟೆ ?
ಉಡುವುದು ಮಣ್ಣಿನ ಚಿಂದೀ ಬಟ್ಟೆ
ಹೀಗಾದರೆ ದಿನಗಳೆವುದು ಹೇಗೆ ?
ಎಲ್ಲಿದೆ ತೃಪ್ತಿಯ ಹುರುಪು-ನಗೆ ?

ಹೊಟ್ಟೆಗೆ ಹಿಟ್ಟಿಗೆ ಬೇಕಾದಷ್ಟು
ಬಟ್ಟೆಯು ಮಟ್ಟಿಗೆ ಸಾಕಾದಷ್ಟು
ಉಳಿದರೆ ನಾವ್ ಮಾತಾಡೆವು ಮತ್ತು ;
ಅಷ್ಟಕೆ ಬಂದಿದೆ ನಮಗೆ ವಿಪತ್ತು.

ನಮ್ಮೀ ಬೆವರು ಬಿಸಿ ಕಣ್ಣೀರು
ಸುಯ್ಯುವ ಸಿಟ್ಟುಸಿರು
ನಿಮ್ಮ ವಿಲಾಸಕೆ ಸುಖ-ಸಂಪತ್ತಿಗೆ
ಶಾಂತಿಗೆ ಕೊಡದೇಂ ಹೊಗೆ-ಬೇಗೆ ?

ಬೇಸಾಯವ ನಾವ್ ಹಿರಿದಾಗಿಸಿದರೆ
ಕಷ್ಟದಿ ಬೆಳೆಯನು ಹೇಗೋ ಪಡೆದರೆ,
ನೀರನ್ನೆಳೆದು, ಕೊಳಕೆಯ ಬೆಳೆದರೆ,
ಗುಡ್ಡವನಗೆದು ಹೊಸ ಹೊಲಗೈದರೆ,
ಏರುವುದದೊ ಮರುವರ್ಷಕೆ ಗೇಣಿ
ಧನಿಗೀಯಲೆ ಬೇಕಾಗಿದೆ ಕಾಣಿ

ನಮ್ಮೀ ಹೊಟ್ಟೆಯ ಉರಿಸಿದರಿಂತು
ಕಣ್ಣೀರಿನ ಹೊಳೆ ಹರಿಸಿದರಿಂತು

೧೬೭/ಅಮ್ಮೆಂಬಳ ಶಂಕರನಾರಾಯಣ ನಾವಡ

ಒಂದೇ ಸಾರಿಗೆ ಎಲ್ಲರು ನಾವು
ಕೃಷಿ ಸನ್ಯಾಸವ ನಾನುವೆವು

ದುಡಿತಕೆ ದಿಟವಾಗಿರುವ ಜಲೆ.
ಪಡೆವೆವು ಅದುವೇ ನಮ್ಮ ನೆಲೆ.

ಎಂದಾಗುವುದೋ ರಾಷ್ಟ್ರೋತ್ಕ್ರಾಂತಿ
ಎಂದಿಗೆ ಬರುವುದೊ ಸಮತಾ ಶಾಂತಿ,
ಅಂದೇ ನಮ್ಮೀ ನಾಡಿಗೆ ಬೆಳಕು
ಬಂದೇ ಬರುವುದು ಹೊಸ ಥಳುಕು
ಅಷ್ಟರವರೆಗೆ ಸುತ್ತಲು ಮುತ್ತಲು
ಸುತ್ತಿದೆ ಮುತ್ತಿದೆ ಬರಿ ಕಗ್ಗತ್ತಲು.

# ಕಯ್ಯಾರ ಕಿಞ್ಞಣ್ಣ ರೈ

## ಹೊಸ ಹಾಡು

1

ನವಭಾವ–ನವಜೀವ–ನವಶಕ್ತಿ ತುಂಬಿಸುವ
ಹಾಡೊಮ್ಮೆ ಹಾಡಬೇಕು ;
ತೀವ್ರತರ ಗಂಭೀರ ಭಾವನೆಯ ತೆರೆ ಮಸಗಿ
ವೀರಧ್ವನಿಯೇರಬೇಕು ;
ಜಾತಿ–ಕುಲ–ಮತ–ಧರ್ಮ ಪಾಶಗಳ ಕಡಿದೊಗೆದು
ಎದೆಹಿಗ್ಗಿ ಹಾಡಬೇಕು ;
ಯುಗಯುಗಗಳಾಚೆಯಲಿ ಲೋಕಲೋಕಾಂತದಲಿ
ಆ ಹಾಡು ಗುಡುಗಬೇಕು ;

2

ಉನ್ನತೋನ್ನತ ಘನಹಿಮಾದ್ರಿ ಶಿಖರವನೇರಿ
ಹಾಡಲ್ಲಿ ಹಾಡಬೇಕು ;
ಹಾಡು ನುಡಿಗುಂಡುಗಳು ಹಾರಿ ದಶದಿಕ್ಕಿನಲ್ಲಿ
ಭಯವ ಬೆನ್ನಟ್ಟಬೇಕು ;
ಗಂಡೆದೆಯ ಗರ್ಜನೆಗೆ ಮೂಹತ್ತು ಮೂರ್ಕೋಟಿ
ಕಲಕಂಠ ಬೆರೆಸಬೇಕು ;
ಭೂವ್ಯಂತರಾಳದಲಿ ನಭಚಕ್ರಗೋಳದಲಿ–
ಮಾರ್ದನಿಗಳೇಳಬೇಕು

3

ಜಡನಿದ್ರೆ ಸಿಡಿದೆದ್ದ ವೀರಾಟ್ಟಹಾಸದಲಿ
ಬಾನುಭುವಿ ಬೆಳಗಬೇಕು ;
ನಡೆನುಡಿಗಳೆಡೆಯಲ್ಲಿ, ಪದತಾಳಗತಿಯಲ್ಲಿ
ಕ್ರಾಂತಿಕಿಡಿ ಕೆರಳಬೇಕು ;
ಅಳಿದುಳಿದ ಭವ್ಯತೆಯ ರುದ್ರಶಿಖಿಯುಜ್ವಲಿಸೆ
ಹಾಡು ತಿದಿಯೊತ್ತಬೇಕು ;
ದಿವಸ ದಿವಸಗಳಿಂದ ಮನದಿ ಮರುಗುತಲಿದ್ದೆ
ಹಾಡಿಂತು ಹಾಡಬೇಕು

4

ಎನ್ನ ಪಾಡಿಗೆ ದುಃಖ ತಾಯಿಗಿದು ಹಿರಿಮರುಕ
ನಾನಿದನು ಸಹಿಸಲೆಂತು ?
ಎನ್ನ ಕೃತಿಯಪಮಾನ ದೇವಿಗಿದೆ ದುಮ್ಮಾನ
ನಾನಿದನು ನೋಡಲೆಂತು ?
ಜಯ ಜನನಿ ! ಶಿರವೆತ್ತಿ ವೀರಭರವಸೆಯಿಂದ
ಹೊಸ ಹಾಡ ಕೇಳಿನೋಡು !
ಇದೊ ಮೊದಲು, ಮುನ್ನಿಲ್ಲ—ಮುಗಿದುದಂದಿನ ಪಾಡು
ಹೊಸತಿಂದು ಹೊಸತು ಹಾಡು !

# ಉಪವಾಸ

1

ಉಪವಾಸ
ಉಪವಾಸ
ವಿಶ್ವತೋಮುಖವಾಗಿ
ದಹಿಸುತಿದೆ
ಸಹಿಸದಿದೆ
ತಪ್ತ ಜೀವನದಲ್ಲಿ
ತುತ್ತನ್ನ ಸಿಗದಲ್ಲಿ
ನಿತ್ಯ ನರಳುವೆನಿಂದು ;
ಮೃತ್ಯುಗೌತಣ ಮುಂದು.

2

ಕರಗಿದೆವು
ಮರುಗಿದೆವು
ಅನ್ನದೇವರ ಕೂಗಿ
ಕೊರಗಿದೆವು
ಸೊರಗಿದೆವು
ಬಳಿಯು ಸೇರದ ಸಾವು
ತಿಳಿಯಬಾರದೆ ನೋವು ?
ಕಳೆಯಲಾರದ ಜೀವ
ತಳೆಯಲಾರದ ನೋವ !

3

ಹೊಟ್ಟೆಯಲಿ
ಬಟ್ಟೆಯಲಿ
ಸರ್ವ ಸಾಮಸ್ತ್ಯದಲಿ
ಶೂನ್ಯತೆಗೆ
ಮಾನ್ಯತೆಯು :

ಕಯ್ಯಾರ ಕಿಞ್ಞಣ್ಣ ರೈ/೧೭೧

ಕತ್ತನೆತ್ತುತ ಜಗವ
ಸುತ್ತು ನೋಡಿದ ಸಮಯ
ವಿತ್ತು ; ಇಂದಪಮಾನ
ಮುತ್ತಿ ಬತ್ತಿಹುದು ಮನ.

4

ತೊಳಲಿದೆವು
ಬಳಲಿದೆವು
  ಉಪವಾಸ ಸಾಗರದಿ
ಮುಳುಗಿದೆವು
ಮುಳುಗಿದೆವು
    ಮರಣವೊಂದೇ ನಮಗೆ
    ಶರಣು ಎಂದೇ ಧರೆಗೆ
    ಶಿರಬಾಗಿ ಕಾದಿಹೆವು
    ಬರಬಾರದೇ ಸಾವು ?

5

ಶಾಂತಿಯನೊ
ಕ್ರಾಂತಿಯನೊ
  ಉಪವಾಸ ರಾಜ್ಯದಲಿ
ಸಾರದಿರಿ
ದೂರವಿರಿ ;
    ಮಿದು ಕರುಳು ಹೃದಯಗಳು
    ಕುದಿಯುತಿವೆ ಬೆಂಕಿಯಲಿ !
    ಎದೆಯಿಲ್ಲವೇ ನಿಮಗೆ
    ಬದುಕುವುತ್ತರ ಹೇಳಿ.

# ಬಿ. ಎಚ್. ಶ್ರೀಧರ

---

## ಉಪವಾಸ

ಬಂದಿತೋ ಬಂದಿತುಪವಾಸ
ಬಡವರಿಗೆ ತ್ರಾಸ
ಮಾಡಲುಪಹಾಸ
ಯಮನಿಗುಲ್ಲಾಸ || ಪಲ್ಲ ||

ಉಪವಾಸ ಬಂತು ವನವಾಸ ಬಂತು–ಬಂತು ;
ಮಿಡುಕಾಡ ಹತ್ತಿತೀ ಜಗದ ಜೀವತಂತು ;
ಅನ್ನಕ್ಕೆ ಬಂತು ಬ್ರಹ್ಮತ್ವವೆಂಬುದಿಂತು ;
ಬೇಕಾದ ವಸ್ತು ಬೆಲೆಯೇರಿ ದೂರ ಸಂತು !

ಸಾವಿಂಗೆ ಸರಸ ಬಂತು,
ನಕ್ಕೊಮ್ಮೆ ಹೇಳಿತಿಂತು :
"ಕೊಡಿರಿಂದು ನನ್ನ ಕಂತು"
ಎಂದೆದ್ದು ಕಳುಹಲಿಂತು–

ಕೈಲಾಸಗಿರಿಯನಿತ್ತಿತ್ತ ಬೀಸಿ ಬಂದಿತ್ತು
ಹಾಸಿ ಬಂದಿತ್ತು, ಒತ್ತಿ ಬಂದಿತ್ತು, ಮುತ್ತಿ ಬಂದಿತ್ತು
ಮುನಿದು ಬಂದಿತ್ತು–ಬಂದಿತುಪವಾಸ,
ಕಣ್ಣು ಬೆಳ್ಪುಗೂಡಿತ್ತು, ಮೋರೆ ಬಾಡಿತ್ತು
ಕಾಲು ಕುಸಿದಿತ್ತು, ಕರುಳು ಹೊಸೆದಿತ್ತು
ಕ್ಷುದ್ಬಾಧೆ ಜೀವ ಹಿಸುಕಿತ್ತೋ, ಜೀವ ಹಿಸುಕಿತ್ತು !

ವಂಗಕ್ಕೆ ಬಂತು ಅಂಗಕ್ಕೆ ಬಂತು,
ಅಂಗಾಂಗಕ್ಕೆ ಬಂತು,
ನರನರಗೆ ಬಂತು, ನರನರಕೆ ಬಂತು
ಬಸಿರಾಳ ಕಂಡು ಬಂತೋ—
ಬಂದಿತುಪವಾಸ.

ಉಪವಾಸ ಬಂತು ವನವಾಸ ಬಂತು–ಬಂತು,
ಮಿಡುಕಾಡ ಹತ್ತಿತೀ ಜಗದ ಜೀವ ತಂತು !
ಉಳಿಗಾಲ ಸಂತು ಅಳಿಗಾಲ ಬಂತು ಅಕಟಾ,
ಮೃತ್ಯುವಿನ ಮೋರೆ ಕಾಣಿಸಿತು ಉಗ್ರವಿಕಟಾ !

ಪ್ರಾಣವನು ಮಿಡು ಮಿಡುಕಿಸುತ್ತ ಬಂತು,
ತ್ರಾಣವನು ತುಡು ತುಡುಕಿ ಬಂತು,
ಚಿತ್ತಾಪತಂತು, ಹೃತ್ತಾಪತಂತು
ಸಂತಾಪರಾಶಿ ತಂತು !
ಜ್ವರ ತಾಪ ತಂತು, ಹರಶಾಪ ತಂತು
ಯಮುಚಾಪವೆತ್ತಿ ತಿಂತು !
ಹಸಿವ ಹಚ್ಚಿ ಹೊಟ್ಟೆಂಬ ಲಂಕೆಯನು
ಸುಟ್ಟೀ ಬಂತು !
ಹಸುಳೆಯೆಂದು ಬಿಡದೊಂದು ಜೀವವನು
ತಿಂದೇ ತಿಂತು !
ಕೆಂಡಕೆಂಡ ಕಾರುತ್ತ ಬಂತು, ಹೋರುತ್ತ ಬಂತು
ಬಂತೋ ಬಂತು !
ಕಂಡ ಕಂಡವರ ಹಿಂಡಿ ಹಿಂಡಿ ಹೀರುತ್ತ ಬಂತು
ಬಂತೋ ಬಂತು
ಬಂದಿತುಪವಾಸ !
ಉಪವಾಸ ಬಂತು, ವನವಾಸ ಬಂತು–ಬಂತು
ಮಿಡುಕಾಡಹತ್ತಿತ್ತೀ ಜಗದ ಜೀವತಂತು !

ಹೊರೆವವರು ಹೊರಗೆ ನಿಂತದ್ದು ಆಯ್ತು ಪ್ರಕಟಾ ;
ದಾಸ್ಯಕ್ಕೆ ದೊರೆಯು ಪೈಶುನ್ಯ ವಜ್ರಮುಕುಟಾ !

ಪ್ರೀತಿಯನು ಕೊಂದು ಭೀತಿಯನು ತಂದು
ನೀತಿಯನು ಬಿಟ್ಟು ಖ್ಯಾತಿಯನು ತೊಟ್ಟು
ಮುದುಕರನು ಮುರಿದು, ಹುಡುಗರನು ತರಿದು
ಹೆಂಗಳೆಯರನ್ನು ಹಿಳಿದು—
ಮಕ್ಕಳನು ಮುಗಿಸಿ, ಮಾರಿಯನು ನಗಿಸಿ,
ರಣಹದ್ದಿನಂತೆ ಸುಳಿದು—
ಧನದರ್ಪವಾಜಿಯನು ಹತ್ತಿ, ಹೆಣವ ಮುಂದೊತ್ತಿ
ಬಡವರನು ಮುತ್ತಿ ರೋಗ ರುಜೆಬಿತ್ತಿ
ದೇಶವನು ಸುತ್ತಿ—ಬಂದಿತುಪವಾಸ !

ಕೋಟ್ಯಧಿಕ ಮಾನವರ ಸುಟ್ಟು, ಕೆರಳಿ ಕಣ್ಬಿಟ್ಟು
ಭಸಿತದುಡೆಯುಟ್ಟು, ಭರದಿನಡಿಯುಟ್ಟು
ದಯೆಯ ದೂರಿಟ್ಟು—ಬಂದಿತುಪವಾಸ !
ಅಕೋ ಅಲ್ಲಿ ಬಂತು, ಇಕೊ ಇಲ್ಲಿ ಬಂತು, ಮಲಬಾರಿನಲ್ಲಿ ಬಂತು !
ವೃಕವಾಗಿ ಬಂತು, ಬಕವಾಗಿ ಬಂತು, ಬಂದಲ್ಲಿ ಬಂತು—ಬಂತೋ
ಬಂದಿತುಪವಾಸ !

೧೭೫/ಬಿ. ಎಚ್. ಶ್ರೀಧರ

# ಎಂ. ವಿ. ಸೀತಾರಾಮಯ್ಯ

## ಬಡವನ ಕೊಡಲಿ

ಕಡಿದೂ ಕಡಿದೂ ಸೌದೆಯ ಕಡಿದು
ದುಡಿದೂ ದುಡಿದೂ ದಿನವೂ ದುಡಿದು
ಇಂದಿನವರೆಗೂ ಹೊಟ್ಟೆಯ ಹೊರೆದು
ಹೆಂಡತಿ ಮಕ್ಕಳನೆಲ್ಲರ ಪೊರೆದು
ಬಾಳುತಿರುವ ನೀ ನರಕದ ಬದುಕ
ನೋಡದೋ, ಸೌದೆಯ ಕಡಿಯುವ ಮುದುಕ.

ಕಡಿದೂ ಕಡಿದೂ ಸೌದೆಯನು
ತೇಯುತಲಿಹನು ದೇಹವನು
ಹಾಳು ಬಾಳಿಗೆ, ಒಪ್ಪಿಡಿ ಕೂಳಿಗೆ
ತೇದ ದೇಹವನು ಮಾರುವನು.

ಹಲವರು ನೆಳಲಲಿ ಸೊಗದಿಂದಿರಲು
ಬಿಸಿಲಲಿ ಸೌದೆಯ ಕಡಿಯುವನು ;
ಹಲವರು ಬೆಚ್ಚಗೆ ಮನೆಯೊಳಗಿರಲು
ಮಳೆಯಲಿ ಸುಮ್ಮನೆ ದುಡಿಯುವನು.

ಹಿಂದವನೇನೋ ಗಟ್ಟಿಯ ಆಳು
ಇಂದವನಿಗೆ ಗತಿಯೇನು, ಹೇಳು
ಬೇರೆಯು ಗತಿ ಇನ್ನೇನಿಹುದು ?
ಸಂಜೆಯವರೆಗೂ ದುಡಿಯುವುದು
ಕುಗ್ಗಿ ಮಡಿಯುವುದು

ಏನನ್ಯಾಯ ಏನನ್ಯಾಯ !
ಹಿಡಿಕೂಳಿಗೆ ದೇಹದ ಬೆಲೆಯೆ ?

ಅವನ ಶರೀರವ ಸ್ವಲ್ಪ ನೋಡು
ರಸವೊಣಗಿದ ಬರಿ ಎಲುಬಿನ ಗೂಡು
ಮೌನದ, ದುಃಖದತೃಪ್ತಿಯ ಬೀಡು ;
ಅವನ ಮೌನವೇ ಎಲ್ಲರನೆಬ್ಬಿಸಿ
ತಾಂಡವವಾಡುವ ಕೊನೆ ಹಾಡು.

ದಿನವೂ ದುಡಿದರೆ ನಾಲ್ಕಾಣೆ
ಹೊಟ್ಟೆ ತುಂಬುವುದೆ—ನಾ ಕಾಣೆ
ಎಷ್ಟು ದುಡಿದರೂ ಹೊರೆಯದು ಹೊಟ್ಟೆ
ಕಷ್ಟ ಪಟ್ಟರೂ ಹರಕಲು ಬಟ್ಟೆ
ಮನೆಮನೆಗಲೆಯುತ ನಿತ್ಯವು ದುಡಿದರೆ
ತನ್ನಯ ಬಾಳನು ಬಲಿಗೊಟ್ಟು
ಸಿರಿವಂತರ ಸಿರಿಗಡಲಿಂದವನಿಗೆ
ಸಿಕ್ಕುವುದೊಂದೇ ಒಂದು ತೊಟ್ಟು !

ಜಿಗಣೆಯ ತೆರದಿ ಕುಬೇರನ ಕುವರರು
ಬಡಬಗ್ಗರ ಎದೆ ರಕ್ತವ ಹೀರಿ
ಆಳ ಆಳದಲಿ ಬಲು ಬೇರೂರಿ
ಯುಗ ಯುಗವಾಯ್ತು, ಬೆಳೆಯುತಲಿಹರು,
ದೊಡ್ಡ ಕಾಡಾಗಿ
ಅಧರ್ಮದ ಬೀಡಾಗಿ.
ಸುಮ್ಮನೆ ಬಿಡುವುದೆ ಈ ಕಾಡನ್ನು
ಬಡವನ ಬಡಕೊಡಲಿಯ ಪೆಟ್ಟು ?
ಮಲಗಿಹ ಅವನದೆ ಕೋಪದ ಕಿಚ್ಚು
ನೆಲಸಮ ಮಾಡದೆ ಕೊನೆಗದ ಸುಟ್ಟು ?
ದಿನವೂ ದಿನವೂ ದುಡಿಯುವವನು
ಸೌದೆಯ ಕಡಿಯುವವನು
ಅವನಿಗೆ ಕೊಡಲಿಯೆ ಸರ್ವಶಕ್ತಿ
ಅದರಿಂದಲೆ ಬಡವರ ಮುಕ್ತಿ !

## ಎಚ್ಚರಿಕೆ

ಮೃಷ್ಟಾನ್ನ ಭೋಜನವ
ಹೊಟ್ಟೆ ತುಂಬಿಯು ಮೇಲೆ
ಕಟ್ಟರೆಯೆ ಬರುವಂತೆ
ಮೆದ್ದು ನಿಂತಿಹರು !
ಹೇಳುಳಿದುದಿನ್ನೇನು ?
ಎಲೆಯುಡಕೆಯುಗಿಯುತ್ತ
ಹೊಟ್ಟೆ ಜುಟ್ಟನು ನೀವಿ
ಪವಡಿಸುವುದು !

ಅಯ್ಯೊ ! ಏನನ್ಯಾಯ !
ಕಣ್ಣು ಕಾಣದೆ ನಿಮಗೆ ?
ನೀವೇನ ಮಾಡುವಿರಿ
ತಿಂದು ತಿಂದಂಥತನ.

ನಿದ್ದೆಗಣ್ಣನು ತೆರೆದು
ಅತ್ತ ನೋಡಿರೊ, ಅಗೋ
ಸತ್ತು ಜೀವಿತವುಂದಿ
ಸಾಯದೆಯೆ ಬದುಕಿಹರು !
ಜೋಲು ಮೊಗದೊಡನೆಂತು
ಸಾಲಾಗಿ ಕುಳಿತಿಹರು :
ಮಿತ್ತುವಿನ ನೆರಳುಗಳು,
ಮತ್ತರಾದೆಮ್ಮನ್ನು
ಬಿಡದೆ ಜೊತೆಗೆಳೆದುಯ್ವ
ಜವನಾಳ್ಗಳು !

ಹಸಿವು ಬೇನೆಗೆ ನೊಂದು
ಬಿಸಿಲು ಬೇಗೆಗೆ ಬೆಂದು
ಎಂಜಲನು ಭುಂಜಿಸಲು
ನಾವುಂಡು ಮಿಕ್ಕುದನು

ತಾವುಂಡು ಬದುಕಿರಲು
ಎನಿತೆನಿತೊ ದೂರದಿಂ
ಬಂದು ಕಾಯ್ದಿಹರಿಲ್ಲಿ—
ಕಾಗೆಗಳ ಕೆಳೆಯರು
ನಾಯ್ಗಳೊಡನಾಡಿಗಳು
ನರನಾಯ್ಗಳು.

ಧರ್ಮಶಾಸ್ತ್ರದ ಕಟ್ಟು
ವೇದಾಂತವೆಷ್ಟೆಷ್ಟು
ಎಲ್ಲವನು ಸುಡಿರೊ !
ಹೊಟ್ಟೆ ತುಂಬಿದ ಜಗಕೆ
ನಿಮ್ಮ ಸವಿಯೌತಣ
ಹಸಿದು ನರಳುವ ಜನರು
ಮೃತ್ಯುವಿಗೆ ಔತಣ !
ಹಸಿದ ಹೊಟ್ಟೆಯು ಮುಂದೆ
ತಿಂದು ತೇಗುವುದೇನು
ಸಾವು ನೋವಿನ ಮುಂದೆ
ಸಂಗೀತವೇನು !

ಇದುವೆ ನಿಮ್ಮಯ ದಾನ,
ಇದುವೆ ನಿಮ್ಮಯ ಜ್ಞಾನ
ಎಚ್ಚರಿಕೆ ಎಚ್ಚರಿಕೆ
ನರ ನಾಯ್ಗಳಿವಕಿಂದು
ಹಿಡಿಗೂಳನಿಕ್ಕದಿರೆ
ಹಸಿವ ಕಳೆಯದಿರೆ
ಜವನ ನಾಯ್ಗಳೆ ಆಗಿ
ಆವನೆಡೆಗೆ ನಿಮ್ಮನ್ನು
ಒಯ್ದಾವು ತಿಂದಾವು
ಯಮಧರ್ಮನೆದುರಿನಲಿ
ನ್ಯಾಯವನು ಪಡೆದಾವು
ಎಚ್ಚರಿಕೆ,
ಎಚ್ಚರಿಕೆ !

೧೬೯/ಎಂ. ವಿ. ಸೀತಾರಾಮಯ್ಯ

# ಜಿ. ವರದರಾಜರಾವ್

## ಜ್ವಾಲಾಮುಖಿ

ಹತ್ತಿರಕೆ ಸಾರದಿರು, ಕೆಣಕದಿರು
ನೊಂದಿರುವ ಮನುಜನನು ನೀನು.
ಚಿತ್ತ ನಿಶ್ಚಲವೆಂದು ಬಗೆಯದಿರು,
ನಿರ್ಬಲನು ಎಂದರಿವೆಯೇನು ?
ಕಣ್ಣಿನಾಳದ ಹೊಳಪು ಮಾಸಿಹುದು,
ಬಾಯ್ತೆರೆದು ತಾ ನುಡಿಯನಿವನು,
ರೂಪವೋ ಬಾಡಿ ಬಡವಾಗಿಹುದು
ಮಳೆ ಬಿಸಿಲ, ಲೆಕ್ಕಿಸನು ಜಡನು !
ಯಾವ ದುಃಖದ ಕಿಡಿಯೊ ಸಿಡಿದು
ಸುಡುತಿಹುದು ನೊಂದೆದೆಯ ಮಿಡಿದು
ಮೇಲುಗಡೆ ಶಾಂತಿಯನು ಹೊದ್ದು
ಎಂದೋ ಸಿಡಿಯುವುದು ಸಿಡಿಮದ್ದು.

# ಕ್ರಾಂತಿಪಲ್ಲವಿ

ಸುತ್ತಮುತ್ತಲು ಕ್ರಾಂತಿ ಪಲ್ಲವಿ
ಕೇಳಿಬರುತಿದೆ ಕೇಳಿರಿ !
ದಾಸ್ಯ ಶೃಂಖಲೆ ಕಳಚಿ ಬೀಳಲು
ಘೋಷವೆದ್ದಿದೆ ಕೇಳಿರಿ !
ಹಳೆಯ ಬಾಳಿನ ಜಾಡ್ಯ ಕಳೆಯುವ ಕಾಲವಿಂದಿದೊ ಬಂದಿದೆ.

ದೀನ, ಬಡಜನ ಅಲ್ಪರೆನ್ನುವ
ಮಾತು ಈ ದಿನ ಸಲ್ಲದು
ಎಲ್ಲರೆದೆಯನು ಹೊಕ್ಕಿ ನೋಡುವ
ಕಾಲವಿಂದಿದೊ ಬಂದುದು
ಸದ್ದುಗದ್ದಲವಿಲ್ಲದೆದೆಯಲಿ ತುಮುಲವೆದ್ದಿದೆ ಗುಡುಗುತ.

ಆಳ್ವ ಚಪಲವೊ ಅಟ್ಟಹಾಸವೊ
ದರ್ಪ ದಬ್ಬಾಳಿಕೆಗಳೊ
ಮೇಲು ಕೀಳುಗಳೆಂಬ ಭೇದವೊ
ಅರ್ಥವಿಲ್ಲದ ನಡೆಗಳೊ
ತುತ್ತ ತುದಿಯನು ಕಾಂಬ ಗಳಿಗೆಯು ಇಂದು ಹತ್ತಿರ ಬಂದಿದೆ.

ಹೊಟ್ಟೆಗಿಲ್ಲದೆ ಸುಡುವ ಬಡತನ
ಭಗ್ಗನೆದ್ದಿರೆ ಕೆರಳಿಸಿ
ಒಟ್ಟುಗೂಡುವ ದಿಟ್ಟತನದಲಿ
ಹಿಡಿದ ಹಟವನು ಸಾಧಿಸಿ
ನಡೆವಮಲ್ಲರ ಜಯದ ಭೇರಿಯ ಸದ್ದು ತುಂಬಿದೆ ನಾಡಲಿ.

ತ್ಯಾಗಸೇವೆಯಗೈದ ಧೀರರು
ರಾಜ್ಯಸೂತ್ರವ ಹಿಡಿದರು
ಬೆಪ್ಪು ಬಡಿದೊಲು ತೆಪ್ಪಗಾದರು

ಬರಿಯ ಮಾತಿನ ಮಲ್ಲರು
ನವಪ್ರಪಂಚದ ಗಾಳಿ ಬೀಸಲು ಹುರುಪು ಹುಮ್ಮಸು ಮೂಡಿದೆ.

ತಂಡಗೂಡುತ ಬರುತಲಿರುವರು
ಬಿಸಿಯ ರಕ್ತದ ಯುವಜನ
ತಮ್ಮ ಹಕ್ಕಿಗೆ ಹೆಣಗುತಿರುವರು
ದುಡಿದು ಬದುಕುವ ಬಡಜನ
ಕ್ರಾಂತಿಕಾಲದ ಇಂಥ ಚಿತ್ರವ ಕಾಂಬ ಜನಗಳೆ ಧನ್ಯರು.

ಆತ್ಮಗೌರವ ಕುಂದಲಾಗದು
ಇಂದಿನೀ ಸಮಯುಗದಲಿ
ಜನರ ಮೌಢ್ಯವ ಸಹಿಸಲಾಗದು
ಪ್ರಗತಿದಾಯಕ ಜಗದಲಿ
ಮುಂದೆ ನುಗ್ಗಲು ಹೆದರಿ ಉಳಿಯುವ ಹೇಡಿ ಇರುವನೆ ಈ ದಿನ ?

ಕ್ರಾಂತಿಪಲ್ಲವಿ ಮಿಡಿಯುತಿರುವುದು
ನುಡಿಯುತಿರುವುದು ಮೊಳಗುತ
ದೇಶದೇಶವೆ ತವಕಗೊಂಡಿದೆ
ಏಳ್ಗೆದಾರಿಯ ಬಯಸುತ
ಜಯಪತಾಕೆಯ ಹಿಡಿದು ಸಾರುವ ಬನ್ನಿ ಗುರಿಯನು ಸಾಧಿಸೆ.

# ಸಿದ್ಧಯ್ಯ ಪುರಾಣಿಕ

## ಬರುತಿದೆ ಬಡವರ ಯುಗ

ಬರುತಿದೆ ಬಡವರ ಯುಗ ನೆನಪಿಡು ಓ ಧನಿಕ !
ತರುತಿದೆ ನಿನಗೇ ಕ್ಷಯ ನಿನ್ನಯ ಧನಕನಕ !

ಮಾನವ್ಯದ ನೆಲೆಬೆಲೆಗಳ ಬಾಳಿನ ಸವಿ ಹುರುಳ
ಆತ್ಮದ ಔನ್ನತ್ಯದ ದಯೆ ಕರುಣೆಯ ಕರುಳ
ಸಂಸ್ಕೃತಿ ಸುಜ್ಞಾನದ ಕಲೆ ವಿದ್ಯೆಯ ತಿರುಳ
ಮಾರಿದೆ ಧನಲಾಭಕೆ ಏನೆನ್ನಲಿ ಮರುಳ ?

ನಿರ್ಜೀವಕೆ ಜೀವದ ಬಲಿ ಇದು ಎಲ್ಲಿಯ ನ್ಯಾಯ ?
ಮಾನವ್ಯವೆ ಮೃತವಾದರೆ ಯಾರಿಗೆ ಈ ಆಯ ?

ಧನಧಾನ್ಯವು ಸಿರಿಸೌಖ್ಯವು ಜನ ಜೀವನಕಾಗಿ
ಜನತೆಗೆ ಬೇಡಾದುದ ಹುಟ್ಟಿಸುವವನಾಗಿ
ಬಾಳಿಗೆ ಬೇಕಾದುದ ಹುಟ್ಟಿಸದೇ ಹೋಗಿ
ದಹಿಸುತಲಿದೆ ದಾರಿದ್ರ್ಯವು ದಾವಾನಲವಾಗಿ

ಬಾಳಿಗೆ ಬೇಕಾಗದ ಸಂಪತ್ತು ವಿಪತ್ತು
ಅದು ಮಾರಿಯು, ಅದು ಮೃತ್ಯುವು, ಅದುವೇ ಕುತ್ತು !

ಸಿರಿವಂತರ ಸಿರಿ ಹೆಚ್ಚಲಿ ದಿನಗಳೆದಂತೆ
ಬಡ ಹೊಟ್ಟೆಯ ಉರಿ ಹೆಚ್ಚಲಿ ದುಡಿದುಡಿದಂತೆ
ಜಡ ವಸ್ತುಗಳನೆ ನೀ ಸಂಗ್ರಹಿಸುತ ನಿಂತೆ
ಬಡ ಬಾಯಿಗೆ ಕೊಡೆ ಕಲ್ಲನು ಏನಾಯಿತು ಸಂತೆ ?

ಪ್ರಳಯಾಗ್ನಿಯು ಜಡೆ ಬಿಚ್ಚಿದೆ, ಯಾರದು ಈ ತಪ್ಪು ?
ನಿನ್ನಾಶೆಯು, ಲಾಭದ ಲೋಭವು, ಇನ್ನಾದರೂ ಒಪ್ಪು !

ದುಡಿವಾಸೆಯ ಬಡಜನತೆಗೆ ದುಡಿತವು ಸಿಗಬೇಕು
ದುಡಿದುದರೊಳು ದುಡಿವವರಿಗೆ ಸಮಪಾಲದು ಬೇಕು
ಕೃಷಿ, ಯಂತ್ರವು, ವಾಣಿಜ್ಯವು, ಬಾಳಿಗೆ ಬಾಗಲೆಬೇಕು
ಜನತೆಗೆ ಬೇಕಾದುದೆ ಹುಟ್ಟುತಲಿರಬೇಕು.

ಹೆಚ್ಚಿನ ಧನ ಹೆಚ್ಚಿನ ಹಣ ರಾಷ್ಟ್ರದ ಆಸ್ತಿ
ಹೀಗಾಗದೆ ಸುಖಶಾಂತಿಯು ಸ್ವಾತಂತ್ರ್ಯವು ನಾಸ್ತಿ !

ಇಂದಿನತನ ಬಂಧನದಲಿ ಕೊಳೆತಿದೆ ಜನಜೀವ
ಮುಂದಿನ ಹೋರಾಟದಿ ತಡೆಯುವನದನಾವ ?

ಇನ್ನಾದರೂ ಎಚ್ಚರ, ಬಹು ಎಚ್ಚರ ಓ ಧನಿಕ
ತರುತಿದೆ ನಿನಗೇ ಕ್ಷಯ ನಿನಗೇ ನಿನ್ನಯ ಧನಕನಕ !

ಹೊಸ ಲೋಕವ ಕಟ್ಟುವ ಹೊಣೆ ಇಂದಿನ ಬಡವನದು
ಹೊಸ ಬಾಳನು ರಚಿಸುವ ಹೊಣೆ ನಾಳಿನ ದುಡಿವನದು.

# ಕೆ. ಎಸ್. ನರಸಿಂಹಸ್ವಾಮಿ

## ಕೇಳುವರಿಲ್ಲದ ಮಗು

ಕಂಡ ಬೀದಿಯಲಿ ಕಪ್ಪಗೆ ನಿಂತಿದೆ ಕೇಳುವರಿಲ್ಲದ ಮಗುವೊಂದು
ಬಿಸಿಲು ತೆರೆದ ಹೂಗಣ್ಣಿಗೆ ಬಿದ್ದಿದೆ ಕತ್ತಲೆ ತೂರಿದ ಹನಿಯೊಂದು.
ಕಣಿವೆಯ ಕೆಳಗಿಂದಿಲ್ಲಿಗೆ ಬಂದಿದೆ, ಅಷ್ಟು ತಂಪು ನಮ್ಮೂರಿನ ಬೇಸಿಗೆ
ಈ ನೆಲ ಕೆಂಪು, ಹಕ್ಕಿಗಳಿಂಪು, ಹೂಗಳ ಕಂಪೇ ಕಂಪು !
ಹೊನ್ನೊಂದಿದ್ದರೆ ಇಲ್ಲಿ, ಸಕಲ ತಂಪು ಸೊಂಪು !
ನಗರ ಜೀವನದ ಕಾಮನಬಿಲ್ಲಿನ ಮುರಿದ ಸೇತುವೆಯ ಕೆಳಗೆ
ಭಾಗ್ಯನಿಲಯಗಳ ಮುಚ್ಚಿದ ಬಾಗಿಲ ಕ್ಷೇಮ ಶಾಂತಿಗಳ ಹೊರಗೆ
ಹುಡುಕಿದರಿಲ್ಲವೆ ಸಣ್ಣ ಸಂಬಳದ ಕುಗ್ಗಿದ ಮನೆಗಳ ಒಡಾವಣೆ ?
        ಬಾನಿಗೇರಿಲ್ಲ ಪೇಟೆಯ ಧಾರಣೆ ?
        ಕಟ್ಟೆಯೊಡೆದಿಲ್ಲ ಬಡವರ ಸೈರಣೆ ?
        ಯುಕ್ತಿ ಗೆಲ್ಲುವುದೆ ? ನಾಳೆ ವಿಚಾರಣೆ ;
        ಎತ್ತ ತೂಗುವುದೋ ಕಾಲದ ಕರುಣೆ ?
        ಕಿವಿಗೆ ಕರ್ಕಶವೆ ಜೀವಧಾರಣೆಯ ಶಿಲಾವಾದ್ಯಗಳ ಬಜಾವಣೆ ?
ಇಲ್ಲಿ ಸಲ್ಲುವುದೆ ಘನದರ್ಶನಗಳ ಚಿನ್ನದ ಹೆಜ್ಜೆಗಳನುಸರಣೆ !
ಇಂದಿನ ಒಂದೇ ಗುಟುಕಿಗೆ ಸಾಲದು ಗತ ವೈಭವಗಳ ಪ್ರಾತಃಸ್ಮರಣೆ,
        ಬಡವರ ಬೀದಿಗೆ ಬಡಮಗು ಬಂತು
                ‘ಕಾಸು ಬೇಕು ಕಾಸು’
        ಮುಗಿಯದ ಪಲ್ಲವಿ ಬದುಕುವುದೆಂತು ?
                ಮೌನವಾದರೂ ಲೇಸು.
ಬದುಕುವ ಆಸೆಗೆ ಆಸರೆಯಾಗಿದೆ ನೀರಿಲ್ಲದ ಕಾಡು ;
ಕಣ್ಣೊಳು ಸಣ್ಣಗೆ ಕವಡೆಯ ಬಿರುಕು, ಎಣ್ಣೆಯಿರದ ನೆತ್ತಿ ;

ಅರೆಬೆತ್ತಲೆ ಮೈ ಬೂದಿಯನುಟ್ಟಿದೆ ಆರು ಬೀದಿಗಳ ಸುತ್ತಿ
ಟಿಕೆಟ್ಟಿಲ್ಲದ ರೈಲ್ ಪ್ರಯಾಣದ ಭಾವಚಿತ್ರವಿದೆ ಕೆನ್ನೆಯಲಿ
ಒಡಲಿನ ಚಿಂತೆಯು ಮನೆ ಹಾಳಾಗಿದೆ ಒತ್ತಿದ ತುಟಿಗಳ ಸೊನ್ನೆಯಲಿ
ಹಸಿವಿನ ಹಾಡಿಗೆ ಹುತ್ತವಾಗಿದೆ ಪಾಪಿ ನಿರಕ್ಷರ ಕುಕ್ಷಿ ;
ನವರಸಭರಿತವಾಗಿದೆ ಸಾವಿರ ಜನ ತುಳಿದ ದ್ರಾಕ್ಷಿ !
ಇದಕಂಡು ಬೆರಗಾಗಬಹುದು ಯಾರು ?
ಒಂದೊಂದು ಪೇಟೆಗೂ ಇಂಥವಿವೆ ನೂರು.
ಕಂಬನಿಯ ದಾರಿಯಲಿ ಒಂದೆರಡು ಸಾರಿ
ಮುಗಿಸಿತ್ತು ಇದರ ಕಥೆಯನು ಕುರುಡು ಲಾರಿ.

ಊರೊಳಗೆ ಉಸಿರಾಡಿ ಊರಲೆಕ್ಕದೊಳಿಲ್ಲ
ಬಳಿಗೆ ಕರೆದವರಿಲ್ಲ, ಬಿತ್ತು ಎತ್ತುವರಿಲ್ಲ
''of what use is my weeping''
ನಗರ ಜೀವನದ ನಿಮಿಷಗಳು ಕಳೆದಂತೆಲ್ಲ
ನಾಳೆಗೇನೋ ಎನುವ ಪ್ರಶ್ನೆ ಉಳಿದವರಿಗೆಲ್ಲ
ಇದರ ಗತಿಯೇನು ?
ಏನಾದರೇನು ?
ಸೃಷ್ಟಿಸಾಗರದಲ್ಲಿ ಆಲದೆಲೆಯ ಮೇಲೆ ತೇಲುವಂತಿಲ್ಲ
ಮುಳುಗಲಿ ಬಿಡು.
ತೆರೆದ ಬಾಯೊಳಗೆ ಹದಿನಾಲ್ಕು ಲೋಕಗಳಿಲ್ಲ ಬೆಳ್ದಿಂಗಳಿಲ್ಲ
ಇಳಿದು ನೋಡು.
ಬಿನ್ನಹದ ಸಿಡಿಲಾಗಿ ಅರಮನೆಯ ಕಂಬವನು ಸೀಳಲಿಲ್ಲ —
ಇದರ ಮೊರೆ.
ಕುಂತಿ ಗಂಗಾನದಿಗೆ ಗುಟ್ಟಾಗಿ ಎಸೆದಳಲ್ಲ
ಆ ಮಗು ಬೇರೆ.
ಹಗಲೆಂತು ಇರುಳೆಂತು ಎನುವ ಭೀತಿಯ ಹೊತ್ತ
ಭೇತಾಳ ಇದರ ಕಾಲ ;
ನಡೆದಂತೆ ದಾರಿಯಲಿ ದೀಪಗಳನಳಿಸುತ್ತ
ತೀರುವುದು ನೆಲದ ಸಾಲ.
"ವಾಸಾಂಸಿಜೀರ್ಣಾನಿ ಯಥಾವಿಹಾಯ........"
ಅಷ್ಟು ಸುಲಭವಲ್ಲ ದೈವ ಸಹಾಯ !
ಹತ್ತು ಸಲ ಹದ್ದು ನೋಡಿದೆ ಇದರ ಕಡೆಗೆ ;
'ತಪ್ಪದೆಯೆ ಕೂಡುವೆನು ನಾ ನಿನ್ನ ಕಟ್ಟ ಕಡೆಗೆ ಬಿಡುಗಡೆಗೆ'

# ಬರಿಗೊಡಗಳಿಗೆ ಸಮಾಧಾನ

ಬರಿಗೊಡಗಳಿಗೆ ಸಮಾಧಾನ ಹೇಳುತಿದೆ ನೀರಿಲ್ಲದ ನಲ್ಲಿ
ಮಟ ಮಟ ಮಧ್ಯಾಹ್ನದಲ್ಲಿ.
ಬೀದಿಯೊಳಗಾಗಿ ಒಂದು ತಲೆಯಿಲ್ಲ ;
ಬಿಸಿಲೇ ಎಲ್ಲ !
ನಿರ್ಜೀವವಾಗಿದೆ ನಿರಂತರ ನಿರ್ಭಾಗ್ಯ ನೀಲಗಗನ
(ರಾತ್ರಿಯ ಮಾತು ರಾತ್ರಿಗಾಯಿತು ; ಈಗ ಹೇಳಿ !)
ಒಂದಾದರೂ ಬಿಳಿ ಮುಗಿಲೇ, ಶಾಂತಿಯೇ, ರಾಮ ರಾಮ !
ಹತ್ತು ಲಕ್ಷ ಜನದುಸಿರಾಚೆಗೆ, ಊರಾಚೆಗೆ
ಯಾರೋ ಪಾಳು ಹೊಲದೊಳಗೆ
ತಲೆಯ ತಗ್ಗಿಸಿ ಸುಟ್ಟ ಕೂಳೆಯನು ಮೇಯುತಿವೆ
ಊರ ದನ ಗುಂಪು ಗುಂಪಾಗಿ ; ನಿಮಿಷದ ಹಿಂದೆ
ಕೊರಳ ಗೆಜ್ಜೆಯ ಇಂಪು ಹರಿದಿತ್ತು ಬೇಲಿಗಳ ಮೇಲೆ
ಹೊಗೆಯ ಗೋಪುರವೇಳುತಿದೆ ಬಂಡೆಗಳ ಮುಂದೆ,
ತರಗೆಲೆ ರಾಶಿಗಾಗುತಿದೆ ನಿಷ್ಕಾಮ ದಹನ.
ಗುಡಿಯ ಬಾಗಿಲಲಿ ಬಿಸಿಲ್ಗುದುರೆಗಳ ನೀರವ ನಿರ್ಗಮನ–
ಮುತ್ತಿನ ಹಾರವಿಲ್ಲ, ಹತ್ತುವ ದೇವರಿಲ್ಲ,
ಕಚ್ಚುವುದಿಲ್ಲ, ಒದೆಯುವುದಿಲ್ಲ–ಹೆಸರಿಗೆ ಕುದುರೆ !
ಯಾರಿಗೆ ಬೇಕೀ ಗತವೈಭವಗಳ ಪರಂಪರೆ ?
ಬೋರೆಯಿಂದ ಬಳಲಿ ಬಂದ ಕುಂಟು ಗಾಳಿಗೆ
ಪರ್ವತವಾಗಿದೆ ಮಣ್ಣು ಮಾಳಿಗೆ.
ದೂರ ದಾರಿಯಲಿ ಎದ್ದ ದೂಳಿನಲಿ
ಉಸಿರೆಳೆಯುತ್ತಿದೆ ಲಾರಿ,
ಬಾಂದಳದ ವಿಮಾನ.
ಅದೆಷ್ಟು ನಿಧಾನ ?
ದಾರವಿಲ್ಲದ ಸೂಜಿ ನಾಟಿದೆ ನೀಲಿ ಬಟ್ಟೆಯಲ್ಲಿ
ತಲೆಗೆದರಿದ ಗಿಡಬಳ್ಳಿ ಬೆಂಡಾಗಿವೆ ಬಿಸಿಲಲ್ಲಿ.
ಮಣ್ಣಿನ ಬಣ್ಣ ಬಂದಿದೆ ಚೆಲುವಿನ ಕಣ್ಣಿಗೆ ;
ನೀರಡಿಕೆಯ ದೀಪವುರಿಯುತಿದೆ ;
ಕವಿತೆಯ ತುಟಿಯಲಿ ಸಣ್ಣಗೆ.

೧೯೭೭/ಕೆ. ಎಸ್. ನರಸಿಂಹಸ್ವಾಮಿ

'ಇದು ಹಸಿರಿಲ್ಲದ ಕೆಸರಿಲ್ಲದ ಉಸಿರಿಲ್ಲದ  ನರಕ
ಜಳ್ಳಾಗಿದೆ ಈ ಮುದಿ ಮರವನಕ ;
ಹಕ್ಕಿ ತಂಗುವುದಿಲ್ಲ ;
ಕೋತಿ ಜಗ್ಗುವುದಿಲ್ಲ—
ಏನಿದರ ಅಮರ ಭಾವ ?
ನೂರು ವಸಂತಗಳ ಹೀರಿ ಕಟ್ಟರೆಯಾಗಿದೆ ಇದರ ಜೀಹ.
ಹಾವಿನ ಸಂಸಾರದ ಪೊಟ್ಟರೆಯಾಗಿದೆ ಇದರ ದೇಹ
ಯಾರಿಗೆ ಬೇಕು ಇದರ ಸ್ನೇಹ ?
ಬಿರುಗಾಳಿಯಾದರೂ ಬೀಸಿ
ಇದು ಬಿದ್ದರೆ ವಾಸಿ !
ಯಾವ ಬಣ್ಣ ಬಂತಂತೆ ಚೆಲುವಿನ ಕಣ್ಣಿಗೆ ?
ಕವಿತೆಯ ತುಟಿಯಲಿ ಉರಿವುದೇನು ಸಣ್ಣಗೆ ?
ಹಳೆಯ ಪುಸ್ತಕದಲ್ಲಿ ಹಿಂದೆಯೇ ಬರೆದಿದೆ :
"ತುಂಬಿದ ಕೊಡ ತುಳುಕುವುದಿಲ್ಲ"
(ಭೇಷಾಗಿದೆ ಬರವಣಿಗೆ)
ಸಾವಿರ ಬೀದಿಗಳಲ್ಲಿ ನಾಳೆ ನಡೆಯಲಿದೆ
ಭಾಗೀರಥಿಯ ಮೆರವಣಿಗೆ
ಬರಿಗೊಡಗಳಿಗೆ ಸಮಾಧಾನ ಹೇಳಿದ್ದೂ ಹೇಳಿದ್ದೇ
ನೀರಿಲ್ಲದ ನಲ್ಲಿ
ಮೃದು ಸ್ವರದಲ್ಲಿ
"ತುಂಬಿದ ಕೊಡ ತುಳುಕುವುದಿಲ್ಲ".
ಬರಿಗೊಡವೂ ತುಳುಕುವುದಿಲ್ಲ
ತುಳುಕಿದರೂ ಚಿಂತೆಯಿಲ್ಲ
ಎಂದಿಗೆ ಬರುವುದು ನೀರು ?
ಉತ್ತರವೇ ಇಲ್ಲ.
ಬರಿಗೊಡಗಳಿಗೆ ಸಮಾಧಾನ ಹೇಳುತಿದೆ ನೀರಿಲ್ಲದ ನಲ್ಲಿ ;
"ತುಂಬಿದ ಕೊಡ ತುಳುಕುವುದಿಲ್ಲ".

# ಹೆಚ್. ಬಿ. ಕುಲಕರ್ಣಿ

## ಮಾತು—ಮೌನ

ಮಾತು :
ಮೌನಜಟೆಯೊಳಗವಿತು
ಧ್ಯಾನಸ್ಥವಾಗಿರಲು
ಕೂದಲೆಳೆಯೊಳಗಿಂದ
ಹೊಮ್ಮಿ ಹರಿವುದು ಶಬ್ದ
ಶುದ್ಧ ಗಂಗಾಸ್ರೋತ !

ಮಾತು :
ಮೌನವಾರಿಧಿಯಲ್ಲಿ
ಅಲದೆಲೆಯೊಳು ತೇಲಿ
ಬಂದು ನಿಂದಿರಲಾಗಿ
ಕೃಷ್ಣಯೋಗೇಶ್ವರನ
ಹಾಲು ತುಟಿಗರಳುವುದು
ಗೀತ—ಮುರಲಿಯ ಚೆಲುವು.

ಇಂದು :
ಮೌನ ಜಟೆಯನು ಕಿತ್ತು
ಬಿಸುಡಲಿಕೆ ಬಂದಿಹಳು
ಡೆಲಾಯಲಾ—ನಗರ ನಗರದ ವ್ಯಾಧಿ !
ಎತ್ತು, ಮಾನವ, ಕುದುರೆ
ನೊಗ ಹೊತ್ತು ನಡೆದವರ

ಕಂಠವನು ಬಿರಿದಿಹುದು
ಉದರಭರಣದ ಬೊಬ್ಬೆ !
ಮನೆಯ ಗೋಡೆಯ ಸೀಳಿ
ಬೀದಿ ಬೀದಿಯ ಹೂಳಿ
ಬಾನಿಗಪ್ಪಳಿಸಿಹುದು
ಬಾಳ ಹುಯಿಲಿನ ಧಾಳಿ !
ಹಾಳಾಯ್ತು ಶಂಕರನ
ಹಿಮಗಿರಿಯ ಶಾಂತಶ್ವೇತ ಸಮಾಧಿ !
ಮೌನವಾರಿಧಿಯನ್ನು
ಕುಡಿದು ತೇಗಿದನಿಂದು
ಅಗಸ್ತ್ಯ ಯಂತ್ರ ಋಷಿ !
ಎದೆಗಿಳಿದು ಉರಿಯಾಗಿ
ಒಡಲ ವಡವಾನಲವು
ಬೆಳೆಯೆ ನೆತ್ತರ ದಾಹ
ಮಾತಿಗಾವುದು ಬೆಲೆಯು ?
ಬಾಯೆ ಹೆಣೆದಿಹ ಮಾತು
ಮನವ ಮರೆಯಾಗಿಸುವ
ಬರಿಯ ಶಬ್ದದ ಜಾಲ !
ಮುಳ್ಳುಗಳ ಮರೆಸಲಿಕೆ
ಹೂತ ಜಾಲಿಯ ಶೂಲ !

# ನಾನು ಬೀದಿ ಬತ್ತಲೆ

ಬಸವಿಯಂತೆ ಬಿದ್ದಿರುವೆನು
ನಾನು ಬೀದಿ ಬತ್ತಲೆ
ವಿದ್ಯುತ್ತಿನ ಜಗಮಗದಲಿ
ನನ್ನೆದೆಯಿದೆ ಕತ್ತಲೆ !
ಮನೆಮನೆಗಳ ವ್ಯಥೆಕತೆಗಳು
ಈ ತೋಳಿನ ಸಂಕಲೆ.
ಬಾನಂಗಳ ಮೇಲ್ಗಡೆಯಲಿ
ಮುಗಿಲಾಳಿಯ ಕಹಳೆ !

"ಕುತ್ತಸ್ತ್ವಿ ಕಶ್ಮಲಮಿದಂ"—
ಡಾಂಬರದಲಿ ಮೈ ಮೆತ್ತಿದೆ
ನನ್ನ ನಾಡಿಗಳಲ್ಲಿ ಹರಿಯು
ತಿಹುದು ಜಗದ ಕಸದ ಕೊಳೆ !
ಬಸವಿಯಂತೆ ಬಿದ್ದಿರುವೆನು
ನಾನು ಬೀದಿ ಬತ್ತಲೆ !

ದಣಿದ ಕಾಲ ತುಳಿತ ಗೀತ
ಗಾಲಿಗಳ ಸಂಗೀತ
ನಡೆದಿಹುದು ಹಗಲಿರುಳು
ಕೊರೆಯುತ್ತ ಕಲ್ಲ ಕರುಳು !
ಕಥಕ್ಕಳಿಗೆ ತಾಳವಿಲ್ಲ
ಬಂದದ್ದು ಹೋದದ್ದು
ಭಾರತಕ್ಕೆ ಮೇಳವೆಲ್ಲ !
ಬಸವಿಯಂತೆ ಬಿದ್ದಿರುವೆನು
ನಾನು ಬೀದಿ ಬತ್ತಲೆ !

ಓದು ನನ್ನ ಹೃದಯದಲ್ಲಿ
ಕೋಟಿ ಜನರು ಕಾಲಿನಲ್ಲಿ
ಬರೆದರಿಲ್ಲಿ ಭಾರತ :
ಮೂಕವಾದ ಶೋಕಸುಖ

೧೯೧/ಹೆಚ್. ಬಿ. ಕುಲಕರ್ಣಿ

ಅಂಗಾಂಗದಿ ರೇಖಿತ
ಬಸವಿಯಂತೆ ಬಿದ್ದಿರುವೆನು
ನಾನು ಬೀದಿ ಬತ್ತಲೆ
ವಿದ್ಯುತ್ತಿನ ಜಗಮಗದಲಿ
ನನ್ನೆದೆಯಿದೆ ಕತ್ತಲೆ !

ನೋಡದೋ ನಿಂತಿಹನು !
ದೇವಪುತ್ರ ಮನುಜನು
ದೀಪವನ್ನು ಹೊತ್ತಿರುವ
ಕಬ್ಬಿಣದ ಕಂಬಕ್ಕೆ
ಸೋತು ಆತು ನಿಂತಿಹನು !
ಅವನ ಕಣ್ಣು ಕುಣಿಗಳಲ್ಲಿ
ಹಿರೋಶಿಮಾ ಧಗಧಗ
ಎದುರಿಗಿರುವ ಕಿಟಕಿಯಲ್ಲಿ
ಕಾಮರತಿಯ ಝಗ ಝಗ !
ಶಿಲುಬೆಗೇರಿದವನು ಕ್ರಿಸ್ತ
ನಿಂತಿಹನು ಆಪದ್ಗ್ರಸ್ತ
ಅವನ ರಕ್ತ
ಜನಜಿಹ್ವೆಯ ರುಚಿರಸ
ಕ್ಷುಧೆಯ ತಣಿಪ ಷಡ್ರಸ !
ಎದುರಿಗದೋ ಓಡುತಿಹುದು
"ಪಾಯಲೇಟ"ನ ಕಾರು
ಮೇಲುಗಡೆ ಹೊರಳಾಡುವ
ರೋಗಿಚಂದ್ರ ಚಾರು !
ಬಸವಿಯಂತೆ ಬಿದ್ದಿರುವೆನು
ನಾನು ಬೀದಿ ಬತ್ತಲೆ !
ವಿದ್ಯುತ್ತಿನ ಝಗಮಗದಲಿ
ನನ್ನೆದೆಯಿದೆ ಕತ್ತಲೆ !

ಅತ್ತ ಕಡೆ ಇತ್ತ ಕಡೆ
ಸೋತವರ ಕಾಲುನಡೆ
ಈವ್ನಿಂಗ ಇನ್ ಪ್ಯಾರೀಸ್ !

ತೋಳ ತೆಕ್ಕೆಯ ನಡುವೆ
ಕೊಂಡ ಕಾಮದ ಸರಸ
ನನ್ನೆದೆಯ ಒಳಗಡೆ
ಜಗದ ಜೀವದ ವಿರಸ !
ಬಸವಿಯಂತೆ ಬಿದ್ದಿರುವೆನು
ನಾನು ಬೀದಿ ಬತ್ತಲೆ
ವಿದ್ಯುತ್ತಿನ ಝಗಮಗದಲಿ
ನನ್ನೆದೆಯಿದೆ ಕತ್ತಲೆ !

# ಎಂ. ಗೋಪಾಲಕೃಷ್ಣ ಅಡಿಗ

## ಏಳುವುದೆಂದೀ ಜನಪದ ?

ಏಳುವುದೆಂದೀ ಜನಪದ ?
ಕ್ರಾಂತಿ ರೌದ್ರಕೆ ಬಹುದೆಂದಿಗೆ ಹದ ?
ಏಳುವುದೆಂದೀ ಜನಪದ ?
ಶತಮಾನದ ನಿದ್ರಾನೀರದ
ತೊಲಗಿ ತನ್ನ ತನದರಿವಿಂದರಳಿದ
ಭಾವಭಾವಗಳ ಕೃತಿ ಸಂಸ್ಕೃತಿಗಳ
ಸುಂದರ ಸೂಜ್ವಲ ತಾರಾಸಂಪದ
ಪಡೆಯುವುದೆಂದೀ ಹರಿಪದ ?
ಓ ಏಳುವುದೆಂದೀ ಜನಪದ ?
ಹೆಗ್ಗುರಿಗಳ ಕಡಲೆಲ್ಲೋ ಕಾದಿದೆ,
ಹರಿವುದನೇ ನದಿಯಕಟಾ ಮರೆತಿದೆ ;
ಸಮತೆಯ ದಿನವೋ ಬಾಗಿಲ ತೆರದಿದೆ.
ಹಕ್ಕಿ ತನ್ನ ರೆಕ್ಕೆಯನೇ ಮರೆತಿದೆ ;
ಕಳೆಯದೆ ನಮ್ಮಾ ದುಷ್ಪದ ?
ಏಳುವುದೆಂದೀ ಜನಪದ ?
ಅನ್ಯಾಯದ ಭೂತಾವಳಿ ನಲಿದುವು,
ಜನದ ಎದೆಯನೇ ಅರೆದುವು ಕೊರೆದವು ;
ಧನದಾಸನ ತಾಂಡವವೇ ನಡೆಯಿತು,
ಉದರದ ವೇದಿಕೆ ಒಡೆಯಿತು, ಸಿಡಿಯಿತು ;
ಸುಲಿಗೆಯ ಗಾಣವು ಹಿಂಡಿತು, ಹರಣವ ;
ಎಲುಬು ಗೂಡಿನಲ್ಲಿ

ನೇತಿದೆ ಜೋತಿದೆ ಪ್ರಾಣತಂತುಲವ ;
ಆದರು ಆದರು ಉರುಳದೆ ಹೊರಳದೆ,
ಮಲಗಿದೆ ನಸುವೂ ಕೆರಳದೆ ;
ಪಶುವಿಗೆ ಪಾಶವಾಯಿತೆ ನರಜೀವಿತ
ಮರಕೂ ಜಡ, ಹುಲ್ಲುಹುಲ್ಲಿಗೂ ಅವನತ
ಚಿರಕೂ ಮರೆಯಾಯಿತೆ ನಿಷ್ಕೃತಿಪಥ ?
ಮೋಚನವೆಂದೀ ಕರ್ಮದ ?
ಏಳುವುದೆಂದೀ ಜನಪದ ?
ಒಮ್ಮೆ ಒಮ್ಮೆ ಕಣ್ದೆರೆಯಲಿ ಸಾಕು ;
ಹೂಂಕಾರದ ರವ ಮೊಳಗಲಿ ಸಾಕು
ನೆತ್ತರ ಹೀರುವ ತಗಣಿಗಳೆಲ್ಲ
ಬಿಟ್ಟೋಡುವವೋ ದೂರಕೆ,
ತಮ್ಮನ್ಯಾಯದ ಭಾರಕೆ
ಕುಸಿಯಲಿಹುವು ಪಾತಾಳದಾಳಕೆ,
ಹೆಸರಿಲ್ಲದ ಉಸಿರಿಲ್ಲದ ಕಾಳಕೆ !
ಆದರು ಮಲಗಿದೆ ಕೋಟಿ ಕೋಟಿ ಜನಗಣದ ಅಹಂಕಾರ
ಜಗವನೆಲ್ಲ ಸುಟ್ಟುರಿಸಬಲ್ಲ ಬಗೆ ಬೆಂಕಿಯ ಫೂತ್ಕಾರ !
ಏಳುವುದೆಂದೀ ಜನಪದ ?
ಕ್ರಾಂತಿರೌದ್ರಕೆ ಬಹುದೆಂದಿಗೆ ಹದ ?
ಏಳುವುದೆಂದೀ ಜನಪದ ?

೧೯೫/ಎಂ. ಗೋಪಾಲಕೃಷ್ಣ ಅಡಿಗ

# ಇದು ಮೊದಲು

ಹಸಿದಿಹುದು ಹೊಟ್ಟೆ ; ಕೊಡು ಅನ್ನವನು. ನನ್ನ ತನು
ಕೋಡುತಿದೆ ಚಳಿಗೆ ; ಕೊಡು ಬಟ್ಟೆಗಳನು.
ಗಾಳಿ ಬೆಳಕಿನ ಗೋರಿಯಲಿ ಹೂತಿರುವೆನಿದೊ ;
ಕೊಡು ನನಗೆ ಸುವಿಶಾಲ ವಸತಿಗಳನು.
ಇದು ಮೊದಲು ಆಮೇಲೆ ಉಳಿದುದೆಲ್ಲ ;
ಅದುವರೆಗೆ ಉಳಿದೆಲ್ಲ ಮಾತು ಹೊಲ್ಲ !
ನನ್ನ ಬೆವರನು ಹೀರಿ ಹೀರಿ ಬೆಳೆದಿದೆ ಜಗದ
ಸಿರಿಯ ಸಸಿ ; ಅದರ ಫಲವೆಲ್ಲ ನಿನಗೆ !
ನಗುವ ತೋಟದ ಹೊರಗೆ ಕೊಳೆ ಚರಂಡಿಯ ಮರೆಗೆ
ಸಾರುವೆನು ನಾನು–ಕ್ರಿಮಿ ! ನಿನ್ನ ಜಗಕೆ.
ದಯೆಯ ಮಂಜನು ಸುರಿದು ನನ್ನ ಮನಕೆ
ನೀನೆ ತಲೆದೂಗುತಿಹೆ ನಿನ್ನ ಗುಣಕೆ !
ಧರ್ಮಶಾಸ್ತ್ರದ, ಕಲೆಯ ನೀತಿ ಧರ್ಮದ ಬಲೆಯ
ಹೆಣೆದು ಕರೆಯುವೆ ನನ್ನ ನಿನ್ನ ಬಳಿಗೆ ;
ನಿನ್ನ ಮಾತಿಗೆ ಮರುಳು ನೊಣ ನಾನು ಈವರೆಗೆ ;
ಬರುವ ಕಾಲವೆ ಬೇರೆ ನೋಡು ಹೊರಗೆ ;
ಜೇಡನನ್ನೂ ನೊಣೆವ ಅತಿ ಪ್ರಚಂಡ,
ಕಾಣದೇ ಅಲ್ಲಿ ಆ ತಂಡ, ತಂಡ ?

ಒಡೆಯುತಿರೆ ಹಣತೆ ಹೊಸ ಬತ್ತಿ ಹೊಸೆಯುವೆ ; ಬತ್ತಿ
ಹೋಗುತಿರೆ ಸೆಲೆ ಕಣ್ಣ ನೀರ ಕರೆವೆ !
ಉರಿವೊಲೆಯ ಮೇಲೆ ಹೂಮಾಲೆ ತೂಗುವೆ ; ಕಾಲು
ಕುಸಿವವಗೆ ಶಿಖರವನು ಹಾಡುತಿರುವೆ !
ನನ್ನ ಮನದೊಳದೇನ ಕಾಂಬೆ ನೀನು ?
ಹಸಿದ ಹುಲಿ ಹೂಂಕಾರ ಕೇಳದೇನು ?
ಹೊಟ್ಟೆಯಲ್ಲಿ ಹುಟ್ಟದೀ ಬೆಂಕಿ ವಿಲಯಾಗ್ನಿಸಮ
ಏರುತಿದೆ ಎದೆಗೆ, ಮನುಜತೆಯು ಚಿತೆಗೆ !
ಕಟ್ಟು ಕಟ್ಟಳೆಯಿಲ್ಲ ಇದಕೆ ಕಟ್ಟೆಗೆಯಾಗಿ
ಸುಟ್ಟೀತು ಮನುಕುಲವೆ ಇದರ ಹತಿಗೆ.

ನಿನ್ನ ನಂದನ ಬೂದಿಯಾಗದಂತೆ
ನನ್ನದನು ಕೊಡು ನಾನು ತಣಿಯುವಂತೆ
ನ್ಯಾಯ ಅನ್ಯಾಯಗಳ ಸತ್ಯಾಸತ್ಯಗಳ ಅರಿವು
ಸುಟ್ಟುಹೋಗಿದೆ, ನೋಡು, ಹಸಿವೆಯಲ್ಲಿ !
ನಾನು ಪಶು, ಶುದ್ಧ ಪಶು ! ಹೊಟ್ಟೆ ತುಂಬಲಿ ; ಬಳಿಕ
ಬಂದೇನು ನಾನೂನು ನಿನ್ನ ಕೂಡ
ನಿನ್ನ ಕನಸಿನ ನೂಲು ದಾರಿಯಲ್ಲಿ ;
ಏರೇನು ನಾ ಮುಗಿಲಿನೇಣಿಯಲ್ಲಿ !
ಸುತ್ತು ಮುತ್ತಲು ನನ್ನ ಬಳಸಿಹುವು ದೀನತೆಯ
ಹೀನತೆಯ ಗೋಡೆಗಳು ಬಾನೆತ್ತರ ;
ಅದರಾಚೆ ಚೆಲುವೊಲವು ರಸವು ಸಂಸ್ಕೃತಿ ಸಲವು
ನಲಿವುವೆಂದರೆ, ನೋಡು, ಇದೆ ಉತ್ತರ :—
ಒಡೆದು ಬೀಳಲಿ ಮೊದಲು ಆಮೇಲೆ ಉಳಿದುದೆಲ್ಲ !
ಅನ್ನವನು ಕೊಡು ಮೊದಲು ; ಬಟ್ಟೆಯನು ಕೊಡು ಉಡಲು
ಕಟ್ಟಿಕೊಡು ಮನೆಗಳನು ; ಬಳಿಕ ನೀನು
ಕವಿಯಾಗಿ ಬಾ, ನೀತಿವಿದನಾಗಿ ಬಾ, ಶಾಸ್ತ್ರಿ
ಯಾಗಿ ಧಾರ್ಮಿಕನಾಗಿ ಮನುಜತೆಯನು
ಕಲಿಸು ಬಾ ; ಇವನದನು ಕಲಿಯಬಲ್ಲ !
ಇದು ಮೊದಲು ಆಮೇಲೆ ಉಳಿದುದೆಲ್ಲ !

೧೯೭೭/ಎಂ. ಗೋಪಾಲಕೃಷ್ಣ ಅಡಿಗ

# ಸುಲಿಗೆಯೆಂಬ ಯಾಗ

1

ಸ್ವಾರ್ಥದ ವೇದಿಕೆಯಲ್ಲಿ ನಿರ್ದಯತೆಯ
ಯಜ್ಞಕುಂಡ ಹೂಡಿ
ವಿಷಯ ವಿಲಾಸದ ಬೆಂಕಿಯೊಟ್ಟಿದರು
ಭೋಗದಾಜ್ಯ ನೀಡಿ,
ಸುಲಿಗೆ ಯಾಗವನು ಯಜಿಸಿದರೀ ಭೂ
ಯಜ್ಞ ಶಾಲೆಯಲ್ಲಿ
ಗುರುಗಳು, ರಾಜರು, ವಣಿಜರು ; ದುರ್ಬಲ
ದೀನ ಮಾನಾವಳಿ
ಧರ್ಮಶಾಸ್ತ್ರಗಳ ಮದ್ಯ ಕುಡಿದು ಮೈ
ಮರೆಯಿತು ಪಶುವಾಗಿ ;
ಯೂಪಸ್ತಂಭವೆ ದೇವರ ಬಿಂಬವೆ
ಎಂದು ಭ್ರಮಿಸಿ ಬಾಗಿ ;
ಕೊರಲನಿರಿದರೂ ಕೆರಳಲಿಲ್ಲ ; ನೆ
ತ್ತರನೆ ಹೀರಿ ಹೀರಿ
ಊದಿಕೊಂಡರೂ ಒದೆಯಲಿಲ್ಲವೋ
ಧರ್ಮವಾಕ್ಯ ಮೀರಿ !

2

ವಿಧಿ ನಿಷೇಧಗಳ ಕಟ್ಟು ಕಟ್ಟಳೆಯ
ದೊಡ್ಡಿಯನ್ನು ತೆರೆದು ;
ಜಾತಿ ನೀತಿಗಳ ಮುಳ್ಳು ಬೇಲಿಯನು
ಸುತ್ತುಮುತ್ತು ಬಿಗಿದು.
ದೀನ ದಲಿತ ನರಪಶು ಸಂಘಾತವ
ಒಳಗೆ ಕೂಡಿಹಿಟ್ಟು,
ಅರಸುತನದ ಹಿರಿಗಾವಲಿಟ್ಟು ಕುಣಿ
ಕುಣಿದರು ಮೈಬಿಟ್ಟು !

ಕವಿ ಗಮಕಿ ವಾದಿ ವಾಗ್ಮಿಗಳು ಗಾಯಕರು
ಯಾಗ ಭೂಮಿಯಲ್ಲಿ
ನೆರೆದರು ಶಾಸ್ತ್ರ ಕೋವಿದರು, ಪಂಡಿತರು
ಸುಲಿಗೆ ಯಾಗದಲ್ಲಿ
ಮೆರೆದರು ಪಾಂಡಿತ್ಯವನು ಪ್ರತಿಭೆಯನು
ದೇವ ಧರ್ಮ ಕಲೆಯ
ಇಂದ್ರಜಾಲವನು ಹರಹಿ ಕರೆದರೋ
ದೇವ ದೇವತೆಗಳ
ಸುರರು ತಣಿದು ಕಳುಹಿಸಿದರು ನಂದನವ
ನೀ ನರಾಧಿಕರಿಗೆ ;
ನರಕವೊಂದನಣಿಗೊಳಿಸಿ ಕೊಟ್ಟರಾ
ನರವರಾಕಗಳಿಗೆ !

3

ಕಡಲಿನ ಮುಗಿಲಿನ ಅಂದವ ಚಂದವ
ಮಳೆಬಿಲ್ಲಿನ ಚೆಲುವ
ದೇವ ಮಾನವರ ಪ್ರಣಯೋಲ್ಲಾಸವ
ಕೋಗಿಲೆಯಿಂಚರವ
ಮಧು ಮಾಸದ ಮೃದು ಹಾಸ್ಯವ ಲಾಸ್ಯವ
ಋತುಗಳ ರಿಂಗಣವ
ಭಾವಭಾವಗಳ ತುಮುಲವ, ಕಾವ್ಯಕ
ಲಾವಳಿಗಳ ನಲವ,
ತತ್ವಜ್ಞಾನದ ಶಾಂತಿಯು, ಕಾಂತಿಯು,
ಸಂಸ್ಕೃತಿಗಿರಿ ಶಿರವ
ಪ್ರತಿಭೆಯ ಮಿಂಚನು, ಬುದ್ಧಿಯ ಹೊಂಚನು
ವಿಜ್ಞಾನದ ಬಲವ,
ಕಂಡು ಉಂಡವರು ಹತ್ತು ಮಂದಿ ; ಉಳಿ
ದವರು ಲಕ್ಷ ಲಕ್ಷ
ನರಕುರಿಗಳು, ಅರಸಿಕರು, ಕುತ್ಸಿತರು !
ಅವರ ಬಾಳ ಅಕ್ಷ

೧೯೪೫/ಎಂ. ಗೋಪಾಲಕೃಷ್ಣ ಅಡಿಗ

ಸುತ್ತುತಲಿದೆ ಕೊಳೆ ಕಸಗಳಲ್ಲಿ ಮನೆ
ಯೆಂಬ ಬಿಲಗಳಲ್ಲಿ ;
ಅಜ್ಞಾನದ ಕಾರ್ಗತ್ತಲಲ್ಲಿ ಬಾ
ಳೆಂಬ ಸಾವಿನಲ್ಲಿ ;
ನೈರಾಶ್ಯದ ಕಾಳ್ಗಿಚ್ಚಿನಲಿ ತಣಿ
ವಿರದ ದಣಿವಿನಲ್ಲಿ !
ಸುಖಗಿರಿ ಶೃಂಗ ಸ್ಥಿತಿಗೆ ನಲಿವವರ
ಕಣ್ಣು ಬಾನಿನತ್ತ,
ಕೆಳಗೆ ಅದರ ಹೊರೆ ಹೊತ್ತು ನಿಂತವರು
ಕೋಟಿ ಕೋಟಿ ಮಾತ್ರ !
ಮೂಕ ವೇದನೆಯ ಶೋಕ ತುಂಬಿ ತುಳು
ಕಿದರು ಜಗವೆಲ್ಲ,
ಸುಲಿಗೆಗಾರರದ ಕೇಳಲಿಲ್ಲ ; ಎದೆ
ಕರಗಲಿಲ್ಲ, ಇಲ್ಲ !
ಇಟ್ಟಿರುವ ದೊಡ್ಡಿ ಕೊಟ್ಟಿರುವ ಬೇಲಿಗಳು
ನಸುವು ಅಲುಗಲಿಲ್ಲ !

5

ಧರ್ಮದ ತೆರೆ ಮರೆಯಲ್ಲಿ ನಡೆದ ನರ
ಹಿಂಸೆ ಇನ್ನು ಸಾಕು ;
ಮನುಜ ಹೃದಯ ಅನ್ಯಾಯ ರಾಕ್ಷಸನ
ಗೆದ್ದು ಬದುಕಬೇಕು ;
ಅನ್ನವೆಲ್ಲ, ಚೆಲುವೆಲ್ಲ, ಎಲ್ಲ ಸುಖ,
ಎಲ್ಲ ಎಲ್ಲ ಬೆಳಕು
ಎಲ್ಲ ಜನಕು ತೆರವಾಗಬೇಕು ! ಮಿಗಿ
ಲುಂಟೆ ಗುರಿಯು ಇದಕು ?

6

ಒಂದೆ ಕೊರಲಿನಲಿ ಕೂಗಿರಣ್ಣ ; ಓ
ಸುಲಿಗೆಯಾಗ ಸಾಕು !

ಇದೊ ಅಣ್ಣತಮ್ಮ ; ಇಕೊ ಅಕ್ಕತಂಗಿ ; ಸಮ
ಭಾವ ಬೆಳೆಯಬೇಕು !
ಈ ನರಕ ಸಾಕು ; ಆ ನಾಕ ಬೇಕು : ಅದ
ಕಾಗಿ ದುಡಿಯಬೇಕು.
ಇಂದಲ್ಲ ನಾಳೆ ಅದು ಬಂದೆ ಬರುವುದದ
ಕಾಗಿ ಮಡಿಯಬೇಕು.

# ನಾವೆಲ್ಲರೂ ಒಂದೇ ಜಾತಿ

ನಾವೆಲ್ಲರು ಒಂದೆ ಜಾತಿ, ಒಂದೆ ಮತ, ಒಂದೇ ಕುಲ ;
ನಾವು ಮನುಜರು ;
ನರರ ನಡುವಿನಡ್ಡ ಗೋಡೆಗಳನು ಕುಟ್ಟಿ ಕೆಡಹುವೆವು
ನಾವು ವಿಲಯ ರುದ್ರರು !
ಹೊಸ ಬಾಳಿನ ಹೊಸ ಸಮತೆಯ ಸಮರಸವನು ಸಮೆವೆವು
ನಾವು ನವ ವಿಧಾತರು !
ಕ್ರಾಪು ತಲೆಯು ಈ ನವೀನ ಯುಗದ ಜಗದ ಕೇತನ ;
ಅದರ ಕೆಳಗೆ ತಿಂತಿಣಿಸಿದೆ ಯೋದ್ಧೃಗಣ ವಿನೂತನ ;
ಎಲ್ಲೆ ಕಟ್ಟನೆಲ್ಲ ಮೆಟ್ಟಿ ಮುಂದೋಡುವ ಯುವ ಜನ.
'ಎಲ್ಲ ಒಂದೆ' ಎಂಬುದೊಂದೆ ನಮ್ಮ ಯುದ್ಧಘೋಷಣ ;
ಹಳೆಯ ಕೊಳೆಯ ಕಳೆವೆವು
ನವವ ಶುಭವ ಬೆಳೆವೆವು
ದಿವವನಿಲ್ಲಿ ಈ ನೆಲಕೇ ಎಳೆದು ಸೆಳೆದು ತರುವೆವು
ನಾವು ಸದಾ ತರುಣರು !
ತೆರಬಾಗಿಲ ಹೊರ ನೋಟದ ಹೊರೆ ಹಸುರಿನ ಹಂದರ,
ನಮ್ಮ ಹೃದಯಮಂದಿರ ;
ಅಲ್ಲಿ ಎಲ್ಲ ಜನಕು ಇದೆ ಸ್ವಾಗತವು ನಿರಂತರ
ಚಿರ ಉದಾರ ಸುಂದರ !
ಬನ್ನಿರಣ್ಣ ಬನ್ನಿರೆಲ್ಲಬಣ್ಣ ದಣ್ಣ ತಮ್ಮರು
ನಡೆಯು ನುಡಿಯು ನೂರು ಗೋಡೆ ಗೋಡೆ ನಿಮಿರಿ ನಿಂತರೂ
ನಾವೆಲ್ಲಿರು ಒಂದೆ ತಾಯ ಎದೆಯಾಸೆಯ ಕುಡಿಗಳು :
ಒಂದೆ ಮಹಾ ಪ್ರೇಮಾಗ್ನಿಯ ಹೋಮಾಗ್ನಿಯ ಕಿಡಿಗಳು
ಭೂಮವಾವುದನ್ನೋ ಇಲ್ಲಿ ಬೆಳೆಯೆ ಬಂದ ಭೀಮರು,
ಪ್ರೇಮಸಿದ್ಧಿಗಾಗಿ ನೋಡುತಿರುವ ಸತ್ಯಕಾಮರು !
ಕೈಕೈಗಳ ಕುಲಕಿಸಿ
ಎದೆಗೆದೆಯನು ಹಾಯಿಸಿ,
ಭೇದವೆಲ್ಲ ಸುಟ್ಟುರಿವೊಲು ಎದೆಯೊಲವನು ಕೆರಳಿಸಿ,
ತೊಳತೊಳಗುವ ನರತೆಯೆಂಬ ಬಂಗಾರವನರಳಿಸಿ

ಯುವಜನವಿದೊ ನವಜನವಿದೊ ದುಡುಕುತಿಹುದು ಮುಂದಕೆ
ಪದಪದಕೂ ಯುಗ ಯುಗಗಳೆ ಸರಿಯುತಿರಲು ಹಿಂದಕೆ
ಒಮ್ಮತದೊಗ್ಗಟ್ಟಿನ ಒಬ್ಬಗೆ ಬಾಳಿನ ಚಂದಕೆ !
ಜಾತಿ ಮತದ ಗುಹೆಗಳಿಂದ ಹೊರಬನ್ನಿ ರಿ ಬಯಲಿಗೆ,
ಕೃತಕ ತಿಮಿರದಾಳದಿಂದ ವಿಸ್ತಾರದ ಬೆಳಕಿಗೆ
ಸೇರಿಕೊಳಿ, ಕೂಡಿಕೊಳಿ, ಮುನ್ನುಗ್ಗುವ ಸಾಲಿಗೆ
ಕತ್ತಲೊಡನೆ ಹೂಡಿದ ಈ ಉತ್ಸಾಹದ ದಾಳಿಗೆ
ಕೂಡಿಸಿರಿದೆ ಕೊರಲುಗಳನು ಹೊಸ ಬಾಳಿನ ಹಾಡಿಗೆ ;
ನಾವೆಲ್ಲರು ಒಂದೆ ಜಾತಿ, ಒಂದೆ ಮತ, ಒಂದೆ ಕುಲ ;
ನಾವು ಮನುಜರು !
ಹೊಸ ಬಾಳಿನ ಹೊಸ ಸಮತೆಯ ಸಮರಸವನು ಸಮೆವೆವು
ನಾವು ನವ ವಿಧಾತರು !

# ಕಟ್ಟುವೆವು ನಾವು

ಕಟ್ಟುವೆವು ನಾವು ಹೊಸ ನಾಡೊಂದನು—ರಸದ
ಬೀಡೊಂದನು.
ಹೊಸ ನೆತ್ತರುಕ್ಕುಕ್ಕಿ ಆರಿ ಹೋಗುವ ಮುನ್ನ,
ಹರೆಯದೀ ಮಾಂತ್ರಿಕನ ಮಾಟ ಮಸುಳುವ ಮುನ್ನ
ಉತ್ಸಾಹ ಸಾಹಸದ ಉತ್ತುಂಗ ವೀಚಿಗಳ
ಈ ಕ್ಷುಬ್ಧ ಸಾಗರವು ಬತ್ತಿ ಹೋಗುವ ಮುನ್ನ
ಕಟ್ಟುವೆವು ನಾವು ಹೊಸ ನಾಡೊಂದನು
ನಮ್ಮೆದೆಯ ಕನಸುಗಳ ಕಾಮಧೇನು
ಆದಾವು ಕರೆದಾವು ವಾಂಛಿತವನು ;
ಕರೆವ ಕೈಗಿಹುದಿದೋ ಕನಸುಗಳ ಹರಕೆ
ಗುರಿ ತಪ್ಪದೊಮ್ಮುಖದ ಜಯಕೆ ಬೆಂಬಲಕೆ !
ಜಾತಿ ಮತ ಭೇದಗಳ ಕಂದಕವು ಸುತ್ತಲೂ
ದುರ್ಭೇದ್ಯವೆನೆ ಕೋಟೆ ಕೊತ್ತಲಗಳು ;
ರೂಢಿರಾಕ್ಷಸನರಸುಗೈಯುವನು, ತೋಳ್ತಟ್ಟಿ
ತೊಡೆತಟ್ಟಿ ಕರೆಯುವನು ಸಂಗ್ರಾಮಕೆ !
ನಾವು ಹಿಂದೆಗೆವೆವೇ ? ವೀರ ತರುಣರು ನಾವು !
ಒಂದೆ ನೆಗೆತಕೆ ನೆಗೆವೆವೋ ಕಂದಕವನು
ಕುಟ್ಟಿ ಪುಡಿ ಮಾಡುವೆವು ಕೋಟೆಗಳನು
ಎದೆಯ ಮೆಟ್ಟಿ ಮುರಿಯುವೆವಸುರರಟ್ಟೆಗಳನು !
ಕೋಟೆಗೋಡೆಗೆ ನಮ್ಮ ಹೆಣಗಳೇ ಮೆಟ್ಟಿಲು,
ನಮ್ಮ ಸಾವೇ ನೋವೆ ಹೊಸನಾಡ ತೊಟ್ಟಿಲು
ಆದಾವು ; ಅಂಜುವೆದೆ ನಮ್ಮದಲ್ಲ ;
ಸೋಲು ಬಗೆ ವೀರನಿಗೆ ಸಲ್ಲ ! ಹೊಲ್ಲ !
ಎಡರುಗಳ ಕಡಲುಗಳನೀಸಿ ಬರುವೆವು, ಘೋರ
ನೈರಾಶ್ಯದಗ್ನಿಮುಖದಲ್ಲು ಕೂಡ
ಹೊಕ್ಕು ಹೊರಡುವೆವೆಲ್ಲ ತೊಡಕುಗಳ ಒಡಕುಗಳ
ಬಿಡಿಸಿ ಇಡಿಗೊಳಿಸಿ ಕಟ್ಟುವೆವು ನಾಡ !
ಇಂದು ಬಾಳಿದು ಕೂಳೆ ಕಾಳೆಗವು ; ಹೊಟ್ಟೆಯೇ
ಕೇಂದ್ರವಾಗಿದೆ ನರನ ಜೀವಿತಕ್ಕೆ ;

ಅನ್ನದನ್ಯಾಯ ದಾವಾಗ್ನಿಯಲಿ ಕರಗುತ್ತಿದೆ
ನರತೆ, ಸಂಸ್ಕೃತಿ, ಪ್ರೀತಿ ದಿವದ ಬಯಕೆ !
ಇರುವೆಲ್ಲವನು ಎಲ್ಲ ಜನಕೆ ತೆರವಾಗಿಸುವ
ಸಮಬಗೆಯ ಸಮಸುಖದ ಸಮದುಃಖದ
ಸಾಮರಸ್ಯದ ಸಾಮಗಾನ ಲಹರಿಯ ಮೇಲೆ
ತೇಲಿ ಬರಲಿದೆ ನೋಡು, ನಮ್ಮ ನಾಡು !
ಇಲ್ಲಿ ಈ ಎಡೆಯಲ್ಲೆ, ನಮ್ಮ ಮುಂಗಡೆಯಲ್ಲೆ
ಅಳಲುಗಳ ಹೆಡೆಯಲ್ಲೆ
ಸೋಲುಗಳ ತೊಡೆಯಲ್ಲೆ
ಅರಳೀತು ನಮ್ಮ ನಾಡು ;
ನಮ್ಮೆದೆಯ ತುಂಬಿರುವ ಅದರ ನರುಗಂಪು ಹೊರ
ಹೊಮ್ಮುವುದೆ ಕಾದು ನೋಡು !
ಉತ್ಸಾಹ ಉದ್ವೇಗ ಉದ್ರೇಕಗಳ ವೀರ
ಯುವ ಜನದ ನಾಡ ಗುಡಿಯು,
ಅದರ ಹಾರಾಟಕ್ಕೆ ಬಾನೆ ಗಡಿಯು
ಬರಲು ಬಿಡೆವೆಂದಿಗೂ ಅದಕೆ ತಡೆಯು !
ತಡೆವವರು ಬನ್ನಿರೋ, ಹೊಡೆವವರು ಬನ್ನಿರೋ
ಕೆಡೆನುಡಿವ ಕೆಡೆಬಗೆವ ಕೆಡಕು ಜನರೇ ಬನ್ನಿ !
ಕೊಟ್ಟೆವಿದೋ ವೀಳೆಯವನು ;
ನಿಮ್ಮೆಲ್ಲರನು ತೊಡೆದು ನಿಮ್ಮ ಮಸಣದ ಮೇಲೆ
ಕಟ್ಟುವೆವು ನಾವು ಹೊಸ ನಾಡೊಂದನು—ಸುಖದ
        ಬೀಡೊಂದನು !

೨೦೫/ಎಂ. ಗೋಪಾಲಕೃಷ್ಣ ಅಡಿಗ

# ನಿನ್ನ ಗದ್ದೆಗೆ ನೀರು

1

ನಿನ್ನ ಗದ್ದೆಗೆ ನೀರು ತರುವ ನಾಲೆಗಳಿಲ್ಲ
ಬಂದು ಬೇಕಾದದ್ದು ಬೆಳೆದುಕೋ ಬಂಧು :
ಕಲೆ ಧರ್ಮ ನ್ಯಾಯ ಕಾನೂನು ಸ್ವಾತಂತ್ರ್ಯ ಇತ್ಯಾದಿ ಇತ್ಯಾದಿ ಮೂಲವ್ಯಾಧಿ
ನನ್ನ ಕುರ್ಚಿಗೆ ತಕ್ಕ ಗಾದಿ.
ಮುಖ್ಯವಾದ ಮಾತೆಂದರೆ ಓ ಭಾರತ ಸಂಸ್ಕೃತಿಯ ಮುಖ್ಯ ಪ್ರಾಣ,
ಬಾಲವಾಡಿಸಬಾರದು, ಹಲ್ಲು ಕಿರಿಯಬಾರದು,
ಹುಬ್ಬೇರಿಸುವುದಂತೂ ಬಹಳ ದೊಡ್ಡ ಗುನ್ನೆ
ಹಿಂದಿನ ಪಾಷಂಡನ, ಇಂದಿನ ಫ್ಯಾಸಿಸ್ಟನ ಚಿಹ್ನೆ ;
ತಾಳಲಯಕ್ಕೆ ಸರಿ ಲಾಗ ಹಾಕುವುದೆ ಲಾಗಾಯ್ತಿನ ಹಿರಿಮೆ.

2

ಬೆನ್ನೂಳೆ ಮುರಿದು ಬಳಿಕ ಬಡಕೊಳ್ಳುತ್ತೇನೆ ಬಾನುಲಿ ;
ಎರಡು ಕಾಲಿನ ಮೇಲೆ ನಿಲ್ಲಲೇಬೇಕೆಂಬ ತೊದಲುಲಿ
ಜನತಾ ವಿರೋಧಿ ದಳಗಳ ಫಿತೂರಿ
ಕಾನೂನು ಮನ್ನಿಸುವ ಜನ ನಾಲ್ಕೂ ಕಾಲಲ್ಲಿ ನಡೆದರೇ
ಚಂದ, ಬೀಳುವ ಪಾಯ ಕಮ್ಮಿ ;
ಸರ್ವದಾ ಸಾಷ್ಟಾಂಗ ಪ್ರಣಾಮದ್ದೆ ಭಂಗಿ.

3

ಹೇಳಿದ ಹಾಗೆ ಕೇಳಿ ಬಾಲ
ಮುದರಿ ಕುಳಿತರೇನೇ ಲಾಭ :
ಹೊಟ್ಟೆಗಷ್ಟು, ಜುಟ್ಟಿಗೆ ಪ್ಲಾಸ್ಟಿಕ್ ಮಲ್ಲಿಗೆ
ಸಿಗುತ್ತವೆ ಹೆದರಬೇಡಿ ನಾಳೆಗೆ.
ಅರ್ಜಿ ಹೋಗಿ ಸೇರುತ್ತದೆ ಖಂಡಿತಾ ಫೈಲಿಗೆ,
ಸ್ವಾತಂತ್ರ್ಯೋತ್ಸವಕ್ಕೆ ತಲಾ ಒಂದು ಬೂಂದಿ ಕಾಳಿಗೆ ;
ಸರ್ವಾರ್ಪಣ ಕಲಿಯುವುದೆ ಹೀಗೆ ತಾಯಿ ಮಹಾಂಕಾಳಿಗೆ

4

ಕೈಗಿಂತ ಲಾಠಿ ದೊಡ್ಡದು, ಲಾಠಿಗಿಂತ ಕತ್ತಿ
ಅದಕ್ಕಿಂತಲು ಬಿಲ್ಲು ಬಾಣ,
ಬಾಣಕ್ಕಿಂತಲೂ ದೊಡ್ಡದಲ್ಲವೇ ಜೋಡು ನಳಿಗೆ ಬಂದೂಕು,
ಅದನ್ನು ಕೊಳ್ಳುವ ತಾಕತ್ತು ?
ದುಡ್ಡೆಂದರೆ ಬಲ ಬಲವೆಂದರೆ ದುಡ್ಡು
ಈ ಎರಡೂ ಇದ್ದರೆ ಬಿಡು, ಸ್ವರ್ಗವ ಕಿತ್ತು ಬಿಸಾಡು,
ಆದರೂ ಇದನ್ನು ಮರೆವುದಪಾಯ.
ಬಲವೆಂದರೆ ಎಡ
ಎಡವೆಂದರೂ ಎಡ,
ಇದು ಈ ಕಾಲದ ಗೂಢ.
ಆ ಎರಡೂ ಇಲ್ಲದ ಕುರಿ
ತೋದಿದ ಬೀದಿ ಭಿಕಾರಿ,
ಮುಚ್ಚಿಕೊಂಡು ನೀ ಬಿದ್ದಿರು ಮೂಲೆ,
ಕಲಿ ತಟ್ಟಲು ಚಪ್ಪಾಳೆ.

5

ಡೊಂಬಿಗಲಾಟೆ ಚಳುವಳಿ ಹಿಂಸೆಗೆ
ಯೋಗ ಸಾಧನೆಯು ಮದ್ದು.
ಆಸನ ಹಾಕುವ ಆಚಾರ್ಯರಿಗೆ
ಕರೆ ಹೋಗಿದೆ ಖುದ್ದು.
'ಜನ ಸಾಮಾನ್ಯರೂ ಯೋಗಾಸನವೂ' ಎಂಬ ವಿಚಾರದ ಮೇಲೆ
ನಡೆಯಿತು ಹಿರಿ ಪರಿಷತ್ತು
ನಿರ್ಣಯವಾಯಿತು ಶವಾಸನವೇ ಸರಿ
ಸುಲಭ, ಸುಗಮ, ಹಿತಕಾರಿ
ತಡವೇತಕೆ ನಡೆಯಿರಿ ಕೈಕಾಲ
ಚಾಚಿ ಮಲಗಿರಿ ಅಂಗತ್ತು ;
ನರ ಮಂಡಲವ ಸಡಿಲಿಸಿ ಆರಾಮ
ಮುಚ್ಚಿ ಕಣ್ಣ ಕಿಂಚಿತ್ತು.
ಉಸಿರು ನಿಧಾನ ಮಾತ್ರ ಧ್ಯಾನ
ಜೀವನ್ಮೃತನ ವಿಧಾನ.

೨೦೭/ಎಂ. ಗೋಪಾಲಕೃಷ್ಣ ಅಡಿಗ

# ಮಹಾಪೂರ

ಅಮೃತವಾಹಿನಿಯೊಂದು ಹರಿಯುತಿದೆ ಮಾನವನ
ಎದೆಯಿಂದಲೆದೆಗೆ ಸತತ ;
ಗ್ರೀಷ್ಮಗಳು ನೂರಾರು ಉರಿಸಿದರು ಆರದಿದು ;
ಸುತ್ತಮುತ್ತಲು ಮರಳು, ಮೇಲೆ ಪಾಚಿ
ಮುತ್ತಿಕೊಂಡರು ಲುಪ್ತವಾಗದೀ ಅಮೃತ ಧುನಿ
ಕಿರಿದಾಗಿ, ಬರಿದಾಗಿ, ನೀರಗೆರೆಯಾಗಿ
ತಳದೊಳೆಲ್ಲೋ ತಳುವಿಗುಳು ಗುಳುಸುತಿದೆ ಸೆಲೆಯು,
ಏನನೋ ಕಾಯುತಿದೆ ಗುಪ್ತವಾಗಿ
ಇಂದೆಲ್ಲ ನಾಳೆ ಹೊಸಬಾನು ಬಗೆ ತೆರೆದೀತು
ಕರಗೀತು ಮುಗಿಲ ಬಳಗ ;
ಬಂದೀತು ಸೊದೆಯ ಮಳೆ, ತುಂಬೀತು ಎದೆಯ ಹೊಳೆ
ತೊಳದೀತು ಒಳಗ–ಹೊರಗ.
ಈ ಸೆಲೆಗೆ ಆ ಮಳೆಯು ಎದೆಗೆ ಎದೆ ಎದೆ ಎದೆ ಹೊಳೆಯು
ಸೇರದಿರೆ ಇಲ್ಲ ನಿಸ್ತಾರ ;
ಬಂದೆ ಬರಬೇಕಯ್ಯೋ, ಬಂದೆ ತೀರಲುಬೇಕು
ಈ ಭ್ರಾಳಿಗಾ ಆ ಮಹಾಪೂರ.

# ರಾಮಚಂದ್ರ ಕೊಟ್ಟಲಗಿ

## ರಾಜಪಿಂಡಕ್ಕಿನ್ನು ಕ್ಷೇಮವಿಲ್ಲ

1

ಜಾಗರವು ಬಂದಿತೋ ಪ್ರಳಯ ರೂಪವ ತಾಳಿ
ಸಾಸಿರಕ್ಷಿಗಳಿಂದ ಕಿಡಿಯ ತೂರಿ
ಒಕ್ಕೊರಲಿನಲಿ ಕೂಗಿ ಹೇಳಿತೋ ಜನಸ್ತೋಮ
ನಾವಲ್ಲ ಬಲಹೀನರೆಂದು ಸಾರಿ.

2

ದ್ವಾಪರವು ಸಂದರೂ ಕಲಿಯುಗವು ಬಂದರೂ
ತುಳಿವವರ ಕಾಲಡಿಯ ಹುಡಿಯದಾಗಿ
ಉಡದ ಹಿಡಿತಕೆ ಸಿಕ್ಕು ಆಜನ್ಮ ನರಳಿದೆವು
ಬಿಡುಗಡೆಯ ಆಶೆಯದು ಕುಡಿಯದಾಗಿ.

3

ಶಿಬಿದಿಲೀಪರು ಬಂದು ರಾಮಕೃಷ್ಣರು ಬಂದು
ಭೀಮ ತಾಂಡವ ತುಳಿತ ತಪ್ಪಿಸಿದರೆ ?
ಮೂರೇಳು ಸಲ ಪೃಥಿವಿ ನಿಃಕ್ಷತ್ರವಾದರೂ
ದಲಿತ ಮನುಕುಲವನ್ನು ಜಪ್ಪಿಸಿದರೇ ?

4

ಕೊಲೆ ಹಿಂಸೆ ರಕ್ತಾಭಿಶೇಚನದಿ ವ್ಯೆಯುಂಡು
ಉನ್ಮತ್ತರಂತಲಿವ ಪಾಂಗು ನೋಡಿ.
ಸುಪ್ತಮನುಕುಲದುರಗ ನುಂಗಲನುವಾಗುತಿದೆ
ಭೂವ್ಯೋಮ ಪಾತಾಳನೊಂದುಗೂಡಿ.

5

ನೃಪನಾಮದಭಿದಾನ ಹೊತ್ತು ಬಂದವರೆಂದು
ಸುಖಭೋಗದೈಸಿರಿಯು ದಾಸಿಯಾಗಿ
ಶ್ರೀಯು ಬಂಧಿತಳಾಗಿ ಶಾರದೆಯು ಊಳಿಗದಿ
ಪಡೆದರೇನರಮನೆಯದಾಸರಾಗಿ—

6

ಹೊನ್ನ ಹೊಗೆ ಹಾರಿತ್ತು, ಕ್ಷೀರ ವಾರಿಧಿಯಿತ್ತು
ಮಧು—ಸೋಮರಸಪಾನ ಪೂರ್ತಿಯಾಗಿ.
ಗಣಿಕೆಯರ ಉಡುಗಣವು ನೃತ್ಯಗಾಯನಕಿತ್ತು
ಸಗ್ಗ ಬೆಚ್ಚಿರಬೇಕು ಆರ್ತವಾಗಿ.

7

ರಕ್ತರಂಜಿತ ಸ್ವರ್ಣ ಮೌಕ್ತಿಕಾಭರಣಗಳ
ಒಟ್ಟಿ ದೇವರಿಗೊಂದು ಗೋರಿಕಟ್ಟಿ
ನಿಮ್ಮ ಹಿರಿಮೆಯ ಕೀರ್ತಿ ಮೂಲೋಕ ಮೊಳಗಿಸುವ
ಹೊಗಳು ಭಟ್ಟರದೊಂದು ಲಾಯ ಕಟ್ಟಿ.

8

ಮೆರೆದಿರೇ ನೀವಿಂತು ದೇವತೆಗಳೌರಸರೆ
ದೈವಿಕತೆ ಇಲ್ಲದಲೆ ಭೂಮಿಯಲ್ಲಿ
ಧರ್ಮ ದೇವರ ರಕ್ಷೆ ಅಭಯ ಹಸ್ತವನೆತ್ತಿ
ನೆರವ ನೀಡೀತೆಂಬ ಹೆಮ್ಮೆಯಲ್ಲಿ.

9

ಹೆಮ್ಮೆ ಹುಮ್ಮಸವಳಿದು ಭೂಭಾರವಿಳಿಯಲಿದೆ
ರಾಜಪಿಂಡಕ್ಕಿನ್ನು ಕ್ಷೇಮವಿಲ್ಲ.
ದೀನದಲಿತರ ಕೆಚ್ಚು ಕಿಚ್ಚೆದ್ದು ಹೊತ್ತುತಿದೆ
ಅದರ ಆಜ್ಯಾಹುತಿಗೆ ಕ್ಷಾಮವಿಲ್ಲ.

10

ಸಿಡಿಲೆರಗಿ ಬಂದೀತು ಗಗನ ಪಟಲವ ಸೀಳಿ
ಭೂಗರ್ಭದಿಂದಗ್ನಿರಸವು ಚಿಮ್ಮಿ
ಹತ್ತು ದಿಕ್ಕಿನ ಗಾಳಿ ಕೊಂಬು ಕಹಳೆಯನೂದಿ
ವಿಪ್ಲವಕೆ ಕೋರಿತು ಶುಭವ ಸಾರಿ.

11

ಎದ್ದೇಳುತಿಹರದೋ ಕೊಂಪೆಕುಂಡಗಳಿಂದ
ಅಸ್ತಿಪಂಜರದ ನರ–ಸಿಂಹರೆಲ್ಲ.
ಪ್ರಾಸಾದ ಹರ್ಮ್ಯ ಯಕ್ಷ ರಾಕ್ಷಸರನ್ನು
ಒಂದೆ ತುತ್ತಿಗೆ ಬಲಿಯ ಕೊಳುವವರೆಲ್ಲ.

12

ಮನೆ ಮನೆಗೆ ಮುಕ್ಕಣ್ಣ ವೀರಭದ್ರಾದಿಗಳ
ಸಂತಪ್ತ ಸಂತಾನ ಜಾಗರಿಸಿದೆ
ಬಾಳದೋ, ಬದುಕದೋ ಈ ಸನಾತನ ಭೂಮಿ
ಮೃತ್ಯು ಮುಂಬಾಗಿಲಿಗೆ ಆಗಮಿಸಿಳೆ.

# ಪುತ್ರೋऽಹಂ ಪೃಥಿವ್ಯಾಃ

ನಾವು ನೆಲದ ಮಕ್ಕಳೋ
ನಾವು ನೆಲದ ಮಕ್ಕಳೋ ।
ಅನಾದಿಕಾಲದೊಕ್ಕಲು
ಆದಿಮಾಯೆ ಭೂಮಿಗೆ
ನಾವೆ ಅಮೃತ ಪುತ್ರರು
ನಾವು ನೆಲದ ಮಕ್ಕಳು.

1

ಬೆವರನೀರ ಸುರಿದೆವು
ಜೀವ ಸಂಣಗೆರೆದೆವು
ಭೋಗಭಾಗ್ಯ ತೊರೆದೆವು
ಅನ್ನ ಕಣಜ ತೆರೆದೆವು
ಕಾಮಧೇನು ಕರೆದೆವು
ಹಸಿವನಷ್ಟೆ ಮರೆತೆವು
ನಾವು ಅಮೃತಪುತ್ರರು
ನಾವು ನೆಲದ ಮಕ್ಕಳು
ಅನಾದಿಕಾಲದೊಕ್ಕಲು

2

ವರುಣ ಗೀತ ನುಡಿದೆವು
ಅರುಣ ಗೀತ ಮಿಡಿದೆವು
ಹಳ್ಳ ಹೊಳೆಯ ತಡೆದೆವು
ಬೆಟ್ಟ ಗುಡ್ಡ ಕಡಿದೆವು
ಶಿಲಾಶಿಲ್ಪ ಕಡಿದೆವು
ದುಡಿದು ದಣಿದು ಮಡಿದೆವು
ನಾವು ಅಮೃತ ಪುತ್ರರು
ನಾವು ನೆಲದ ಮಕ್ಕಳು
ಅನಾದಿಕಾಲದೊಕ್ಕಲು

3

ನೇಗಿಲೆಮ್ಮ ಯೋಗವು
ನಿತ್ಯಕರ್ಮ ಯಾಗವು
ಮೇಟಿ ಮಂತ್ರ ರಾಗವು
ಅನ್ಯ ಭಾವ ಮಾಗವು
ರಾಗಿ ರೊಟ್ಟಿ ಭೋಗವು
ನಮ್ಮ ಹವಿರ್ಭಾಗವು
ನಾವು ಅಮೃತ ಪುತ್ರರು
ನಾವು ನೆಲದ ಮಕ್ಕಳು
ಅನಾದಿಕಾಲದೊಕ್ಕಲು

4

ಮುಗಿಲು ಮಳೆಯ ಕರೆದಿತು
ಭೂಮಿ ಎದೆಯು ನೆನೆದಿತು
ಬೆಳೆಯು ತೂಗಿ ತೊನೆದಿತು
ಹಾಲು ಜೇನು ಹರಿಯಿತು
ನಾಕ ಲೋಕಕಿಳಿಯಿತು
ನಮ್ಮನಷ್ಟೆ ಮರೆತಿತು
ನಾವು ಅಮೃತ ಪುತ್ರರು
ನಾವು ನೆಲದ ಮಕ್ಕಳು
ಅನಾದಿಕಾಲದೊಕ್ಕಲು.

5

ಭೂಮಿ ತಾಯಿ ಒಲಿದರು
ಇಲ್ಲ ಕನಲಿ ಮುನಿದರು
ಬಸಿರ ಬಯಕೆ ತೊರೆದರು
ಉಣುವ ತುತ್ತು ಕಸಿದರು
ಹಸಿವಿನಿಂದ ಕುಸಿದರು
ನಾವು ಸಾಯಲಿಲ್ಲವು
ನಾವು ಅಮೃತ ಪುತ್ರರು
ನಾವು ನೆಲದ ಮಕ್ಕಳು
ಅನಾದಿಕಾಲದೊಕ್ಕಲು.

೨೧೩/ರಾಮಚಂದ್ರ ಕೊಟ್ಟಲಗಿ

6

ಹಲಗೆ ಡೊಳ್ಳು ಬಡಿದಿತು
ರಣದ ಕಿಡಿಯು ಸಿಡಿದಿತು
ನಮ್ಮ ಪಡೆಯು ನಡೆದಿತು
ಸಾವಿಗೆಡೆಯ ನೀಡಿತು
ನಕ್ಕು ನಾಕ ನುಡಿದಿತು
"ಕುರಿಯ ಮಂದೆ ಮಡಿದಿತು"
ನಾವು ಅಮೃತ ಪುತ್ರರು
ನಾವು ನೆಲದ ಮಕ್ಕಳು
ಅನಾದಿಕಾಲದೊಕ್ಕಲು.

7

ಅಂದಿಗಿಂದಿಗೊಂದೆಯು
ನಾವು ಕುರಿಯ ಮಂದೆಯು
'ಬ್ಯಾ' ಎನಲು ಬಂದೆವು
ಕೊರಳು ಕೊಟ್ಟು ನಿಂದೆವು
ಮೂಕಬಲಿಯ ಸಂದೆವು
ಕೊಂದರೆಲ್ಲಿ ನೊಂದೆವು ?
ನಾವು ಅಮೃತ ಪುತ್ರರು
ನಾವು ನೆಲದ ಮಕ್ಕಳು
ಅನಾದಿಕಾಲದೊಕ್ಕಲು.

8

ನೀವು ಭೂಮಿಯೊಡೆಯರು
ನಿಮ್ಮನಾರು ತಡೆವರು
ಎಂದು ಯಾರೊ ನುಡಿದರು
ರುದ್ರ ವೀಣೆ ಮಿಡಿದರು
ಸುಪ್ತ ಕಿಚ್ಚು ಕಡೆದರು
ತಪ್ತ ಶಿವರ ಪಡೆದರು
ನಾವು ಅಮೃತ ಪುತ್ರರು

ನಾವು ನೆಲದ ಮಕ್ಕಳು
ಅನಾದಿಕಾಲದೊಕ್ಕಲು.

9

ನೀರಿನಂತೆ ನೆತ್ತರು
ಚೆಲ್ಲಿ ನಾವು ಸತ್ತರು
ತಲೆಯ ದಂಡ ತೆತ್ತರು
ಮಡದಿ ಮಕ್ಕಳತ್ತರು
ನಮ್ಮ ತಡೆವ ಶಕ್ತರು
ಇಲ್ಲ, ನಾವು ಮತ್ತರು
ನಾವು ಅಮೃತ ಪುತ್ರರು
ನಾವು ನೆಲದ ಮಕ್ಕಳು
ಅನಾದಿಕಾಲದೊಕ್ಕಲು.

10

ನೆಲವ ಬಗೆದು ಸಿಡಿದರು
ಹಲಾಯುಧರು ನಡೆದರು
ಹಲಗೆ ಡೊಳ್ಳು ಬಡೆದರು
ಪರಶುಧಾರೆ ಹಿಡಿದರು
ಅಸುರ ತೇಜ ಪಡೆದರು
ರಾಜಪಿಂಡ ಕಡಿದರು
ಇವರೆ ಅಮೃತ ಪುತ್ರರು
ಇವರೆ ನೆಲದ ಮಕ್ಕಳು
ಅನಾದಿಕಾಲದೊಕ್ಕಲು.

# ವಿ. ಜಿ. ಭಟ್ಟ

## ಆತ್ಮಶೋಧನೆ

ಹುಡುಕಿದೆ ಹಗಲೆಲ್ಲಾ
ಎಲ್ಲೂ ಸಿಗಲಿಲ್ಲ
ಹಳಬರು ಹೇಳಿದ ಆತ್ಮವು ನನಗೆ
ಎಲ್ಲೂ ಸಿಗಲಿಲ್ಲ.

ಗುಡಿಯಲಿ ಬರಿಕಲ್ಲು
ವೇದ ಪುರಾಣದ ಪೀಠದ ಮೇಲೆ
ಬೆಳೆದಿದೆ ಒಣಹುಲ್ಲು.

ಹುಡುಕಿದೆ ಮಗುವಿನ ಕಣ್ಣಿನಲಿ
ಮಸಣದ ಮಣ್ಣಿನಲಿ
ಸಿಗಲಿಲ್ಲ.
ಪರಿಕಿಸಿದೆನು ಚೆಲುವಿನ ಕೆನ್ನೆ
ಒಳಗಡೆ ಬರಿ ಸೊನ್ನೆ

ಹಾರಿದೆ ಕಣ್ಣೀರಿನ ತಳಕೆ
ಕೇಸುರಿಗಳ ಜೋಲೆಯ ಝಳಕೆ
ಅಲ್ಲಿ
ಹಣವೂ ಸಿಗಲಿಲ್ಲ
ಆತ್ಮದ ಕಣವೂ ಸಿಗಲಿಲ್ಲ.
ಮತ್ತೆಲ್ಲೆಲ್ಲೋ.....ಹುಡುಕೇ ಹುಡುಕಿದೆ
ಆತ್ಮವು ಸಿಗಲಿಲ್ಲ

ಪುಣ್ಯಕೆ
ಹುಚ್ಚಲೆದಾಡುವ ನನ್ನನು ನೋಡಿ
ಯಾರೂ ನಗಲಿಲ್ಲ !

ಬಳಲುತ ಬರುತಿರಲಾ ಸಂಜೆ
ಯತಿಯೊಬ್ಬನ ಕಂಡೆ
ಆತ್ಮದ ಶೋಧನೆ ಕತೆಯನು ಕೇಳಿ
ಯತಿ ಗಹಗಹಿಸಿದನು
ಹೇಳಿದ ಕೊನೆಗೆ
ನಡೆ ಮನೆಗೆ—
ಕಾಣುವ ಆತ್ಮನ ಮನೆಯಲ್ಲೇ
ಅನಿಸಿತು : ಅಲೆದಾಡಿದೆ ಸುಳ್ಳೇ

ಮನೆಯಲಿ ಮಂಚದ ಮೇಲೊರಗಿ
ಆತ್ಮವ ಕಾಣದೆಯೇ ಕೊರಗಿ
ಏನೂ ತಿಳಿಯದೆ ಕುಳಿತಿರಲಾರೋ
ಕರೆದರು. ನೋಡಿದೆ ಹಿಂತಿರುಗಿ
ಯಾರೂ ಇದ್ದಿಲ್ಲ
ನನ್ನುಸಿರಿನ ಸದ್ದಿಲ್ಲ

ಆ ಕರೆ ಬಂತು
ತಡೆಯುವದೆಂತು ?
ಕರೆಯನು ಹಿಂಬಾಲಿಸಿ ನಡೆದೆ
ದೊಡ್ಡ ಕಪಾಟಿನ ಬಳಿ ತಡೆದೆ
ಅದರೊಳಗಿಂದ "ಬಾ ಬಾ ಕಂದ"
ಎಂದೆನ್ನಾರೋ ಕರೆ ಕರೆಯೆ
ಗುರುತಿಸಿ ಆ ಹೊತ್ತಿಗೆ ತೆರೆಯೆ
ಅದರೊಳಗಿಂದ
"ಇದೋ ಇದೋ ಕಂದ
ನಾನಿಹೆನಿಲ್ಲಿ
ಹುಡುಕುವೆ ನೀನೆಲ್ಲಿ ?"

೨೧೭/ಎ. ಜಿ. ಭಟ್ಟ

ಸಿಕ್ಕಿತು !  ಸಿಕ್ಕಿತು !
ಆತ್ಮವು ನಕ್ಕಿತು
ಕಿಟ್ಟೆಲ ಕೋಶದ ನೂರಾಐವತ್
ಮೂರನೆ ಪುಟದಲ್ಲಿ

ಹರಿ ಓಂ ಹರಿ ಓಂ ಹರಿಹರ ಓಂಸತ್
ಆತ್ಮವು  ಇನ್ನೆಲ್ಲಿ ?
ಹಳಬರು ಹೇಳಿದ
ಆತ್ಮವು ಇನ್ನೆಲ್ಲಿ ?

# ಪ್ರೀತಿ ಸಾಲದು

ನಾವು ಕೂಡಿದೀ ಜೀವನ ಸಾಗಲು
ಸಾಲದು ಸಖಿ ಬರಿ ಪ್ರೀತಿ
ಬದುಕಿನ ಉಸಿರೇ ಇದು ಎನಲಾರೆನು
—ಅಸ್ತಿತ್ವದ ಘನ ನೀತಿ.

ಒಂದು ಖಂಡಿ ನಿಜಪ್ರೀತಿಯ ಕೊಟ್ಟರೆ
ಸಿಗುವುದೆ ವಾರದ 'ಸೀದಾ' ?
ಮನೆಯ ಮಾಲೀಕನ (ಅವನ ಮಗಳನೂ)
ಪ್ರೀತಿಸಿ ನೋಡಿದೆ ರಾಧಾ—

ಅವನು ಆದರೂ ಬಾಡಿಗೆ ಕೊಡಲೇ—
ಬೇಕೆಂಬನು ಪ್ರತಿ ಮಾಸ
ಪೇಟೆಯಲಂತೂ ಮಾಡರು ಯಾರೂ
ನಮ್ಮೊಲವಿನ ಖಾಯಾಸ.

ಕಣ್ಣಿದ್ದವರಿಗೆ ಬೆಳಕನು ನೀಡದು
ಇರುಳಲಿ ಪ್ರೀತಿಯ ಜ್ಯೋತಿ
ಚಿಮಣಿ ಎಣ್ಣೆ ಬೇಕದಕೆ ಹೆಣ್ಣೆ ಇರ—
ದಿದ್ದರೆ ಬತ್ತಿ ಫಜೀತಿ !

ಅನ್ನ ಬೇಯಿಸಲು ನಮ್ಮದೆ ಬೆಂಕಿಯು
ಸಾಲದು ಕಟ್ಟಿಗೆ ಬೇಕು
ಮುಸುಕು ಹಾಕಿ (ಬೇಕಾದರೆ ತೆಕ್ಕಿಸಿ)
ಮಲಗುವ ಮಟ್ಟಿಗೆ ಸಾಕು !

೨೧೯/ವಿ. ಜಿ. ಭಟ್ಟ

# ಅವತಾರ

"ಹತ್ತವತಾರದ ಹೇಡಿತನಕ್ಕೆ"
ಮನಗೊಣಗುಟ್ಟುತಿದೆ
ಪರಮಾತ್ಮನ ಕಿಡಿಗೇಡಿತನಕ್ಕೆ
ತಲೆ ರಣಗುಟ್ಟುತಿದೆ

ಯುಗಯುಗಕೂ ಹೊಸ—
ಹೊಸ ಅವತಾರ
ಕೀಳಲಿಕಾಗದೆ
ಕೀಳಿನ ಬೇರ ?
ಲೀಲೆಯ ಸೋಗೇ
ಜಗದುದ್ಧಾರ ?
ಒಂದೊಂದವತಾರದ ತಲೆಮೇಲೂ
ಅಣಬೆಯು ಹುಟ್ಟುತಿದೆ.

ವಿಶ್ವನಿಯಾಮಕಗೆಲ್ಲಿದೆ ಹೇತು ?
ಬರಿ ತಿರಿಕಿಟಧಿತ್ತ
ಆ ಹಗರಣಕೇ ಜೀವವು ಸೋತು
ಮಿಡುಕುವದತ್ತಿತ್ತ
ಎಲ್ಲಿಹುದವನಿಗೆ ಎರಗುವ ಕೇತು ?
ಅವನೆದೆ ಘನಚಿತ್ತ !

ಯಾತಕೆ ದೇವನು ಮಾತೆಯ ಅವತಾ—
ರವ ಮಾಡುವದಿಲ್ಲ ?
ಕತ್ತಲೆಯನು ಬೆಳಕಾಗಿಸುವಾ ಜೋ—
ಗುಳ ಹಾಡುವದಿಲ್ಲ ?
ಅವತಾರವೆ ಬೇಕಾಗದ ಬಗೆಯನು
ಅವ ನೋಡುವದಿಲ್ಲ ?

ಎಲ್ಲವ ಬಲ್ಲ
ಆಗುವದಿಲ್ಲ
ಯೆನ್ನುವದಿಲ್ಲ

ಆದರೂ ಹೀಗೇ ಬೀಳೇಳುತ ಬಾಳ್
ನಡೆಯುತಲಿರಬೇಕು
ಜೀವ ಜೀವಿಯೂ ಜೀ ಜೀ ಯೆಂದು
ತನ್ನಡೆ ಬರಬೇಕು
ಯೇನೋ ಮಹಾಮಾಡುವ ಹಾಗೆ ಯುಗ—
ಪುರುಷರ ಹೆರಬೇಕು !
ಎಂತಹ ಜಂಬ !
ಲೀಲೆಯು ಎಂಬ !
ಪರಮಾತ್ಮನ ಈ ಕಿಡಿಗೇಡಿತನಕೆ
ತಲೆ ರಣಗುಟ್ಟುತಿದೆ
ಒಂದೊಂದವತಾರದ ತಲೆ ಮೇಲೂ
ಅಣಬೆಯು ಹುಟ್ಟುತಿದೆ.

## ಕಸಬರಿಗೆ

ನೇಸರುಯೆಂದೂ ಮುಳುಗದ ರಾಜ್ಯದಿ
ಮುಳುಗಿದರೊಮ್ಮೆ ಮತ್ತೇಳ
ಅಂತಹದೊಂದು ಕೊನೆ ದಿನದಾ ಕತೆ
ಹೇಳುವೆ ನೀ ರೈತನೆ ಕೇಳಾ
ತೆರೆಗಿರೆಯೆದ್ದು
ಬಾನಿಗೆ ಬಿದ್ದು
ಸೂರ್ಯನ ಜಗ್ಗಿ
ಹಿರಿಹಿರಿ ಹಿಗ್ಗಿ
ನುಂಗಿತು ತೇಗಿತು ಕೆಂಪೇರಿ
ತಂಗಿತು ಕಡೆಗಿರುಳನು ಕಾರಿ
ತೀರದಿ ಮಾಂಸವು
ನೋಡಿತು ಯೆಲುಬಿನ
ಸಿಂಹಾಸನದಲಿ ಕಾಲೂರಿ
ಹಿಂಬದಿ ಬೀಸಿಯೆ
ಬೀಸಿತು ರಾಜಗೆ
ಚಾಮರವನು ಹಳೆಕಸಬರಿಗೆ
ಎಂತೋ ಮಿಂಚಿತು
ಬೇಕೆಂದೆನಿಸಿತು
ಇಂತಹ ಮಾತು ಹೊಸಬರಿಗೆ.

## ರೇಶನ್ನು

ಅನ್ನ ಸಮಸ್ಯೆಯು ಬಲು ಗಂಭೀರ
ಅಂತೆಯೇ ಜನರೇ ಪ್ರತಿ ಶನಿವಾರ
ಬಿಡಿರಿ ಭಕ್ತಿಯಲಿ ಒಂದೂಟ.

ಬಟ್ಟೆಯು ಪುರವಟಿ ಬಹಳೇ ಕಡಿಮೆ
ಅಂತೆಯೆ ರವಿವಾರದ ದಿನ ದುಡಿಮೆ
ಇರದ ಮುಹೂರ್ತದಿ ತಿರುಗಾಟ—
ಮಾಡಲು ಹೋಗದೆ ಗೋಡೆಯ ಮೊಳೆಗೆ
ವಸ್ತ್ರವ ತೂಗಿಸಿ ಕತ್ತಲೆಯೊಳಗೆ
ತೋರೆಯಿರಿ ಬಟ್ಟೆಯ ಈ ಕಾಟ.

ಸತ್ಯ ಅಹಿಂಸೆಯು ಗಾಂಧೀ ಕಣಜ
ಬರಿದಾಗುತ್ತಿದೆ ಅಂತೆಯೆ ಮನುಜಾ
ಅವುಗಳಿಗೂ ಇದೆ ರೇಶನ್ನು

ರಶಿಯ ಅಮೇರಿಕೆ ದೇಶಗಳಿಂದ
ಸದ್ಯವೆ ಸಿಗಲಿದೆ ಸಾಲವು ಕಂದಾ
ಸತ್ಯ ಅಹಿಂಸೆಯ ನೂರ್‍ಟನ್ನು.

೨೨೩/ವಿ. ಜಿ. ಭಟ್ಟ

## ಕ್ರಾಂತಿ

ಹರನೆ ನಿನ್ನ ಡಮರು ಬಡಿ
ವೀಣೆವೆಣ್ಣೆ ತಂತಿ ಹರಿ
ನೆಲವ ತರಿ ಬಾನ ಕಡಿ
ಕ್ರಾಂತಿ, ಮಿಂಚುಗತ್ತಿ ಹಿರಿ
ರಕ್ತ–ಪ್ರಳಯ ವೃಷ್ಟಿಸುರಿ
ಗೋಲ ಗೋಲಗಳನು ಥಿಕ್ಕಿ
ಹೊಡಿಸಿ ನುಚ್ಚುನೂರು ಗೈ
ಸತ್ಯವಿಂದು ಸೆರೆಗೆ ಸಿಕ್ಕಿ
ಸವೆಯುತಿರಲು ನಿನ್ನ ಕೈ
ರುಂಡವ ಚಂಡಾಡಲೈ

ಪಂಚಖಂಡ ಕಂಡ ಸೂಡು
ನರರ ತೊವಲ ದಟ್ಟಿಯುಡು
ಕುಣಿತ ಮುಗಿಯೆ ಮರಳಿ ಹೂಡು
ಕಣ್ಣ ತೇಜದಿಂದ ಸುಡು
ಬುವಿಯು, ಬೀಜ ಬಿತ್ತಲು
ಶಾಂತಿದೇವಿ ಹಡೆವ ಶಿಶುಗೆ
ಮುಂದೆ ತಲೆಯನೆತ್ತಲು
ಹರನೆ ನಿನ್ನ ಡಮರು ಬಡಿ.

# ಜೋಗಳೇಕರ ಪಾಂಡುರಂಗರಾಯ

## ಸಾಮಾಜಿಕ ಜೀವನ

ಕೋಟಿ ಬಡವರ ಮೆಟ್ಟಿ ಕೋಟಿವಂತನು ಶೆಟ್ಟಿ
ರೊಟ್ಟಿಗೇಡಿಗರೊಟ್ಟಾದೆಡೆ ಮೆರೆವನೇ
ಸೆಟ್ಟಿ ಸೆಟೆಸೆಟೆದು ಮುರ್ಮಜ್ಞ

ದುಡ್ಡಿನಾ ದೊಡ್ಡಪ್ಪ ಬೇಡವೇ ಬೇಡೆಮಗೆ
ಗೊಡ್ಡ ಬಡ್ಡಿಯ ಬಿಟ್ಟು ದುಡಿಮೆಯಿಂದುಣುವ
ದೊಡ್ಡಪ್ಪ ಬೇಕು, ಮುರ್ಮಜ್ಞ

ರಟ್ಟೆಯಿಂ ದುಡಿವರಾ ಹೊಟ್ಟೆ ತುಂಬಲು ಬೇಕು
ಹೊಟ್ಟೆ ಬಟ್ಟೆಯ ಚಿಂತೆ ತಪ್ಪಿದೆಡೆ ನಾಡು
ಗಟ್ಟಿ, ನೋಡೆಂದ, ಮುರ್ಮಜ್ಞ

ತಗ್ಗು ದಿನ್ನೆಗಳಯ್ಯ ಮುಗ್ಗಿಹೋಗಲು ಬೇಕು
ಹಿಗ್ಗು ಕುಗ್ಗುಗಳಡಗಿದಡೆ ನಾಡ ಸಿರಿಯ
ಸುಗ್ಗಿ ನೋಡೆಂದ, ಮುರ್ಮಜ್ಞ

ಎಣ್ಣೆ ಬಡವರ ಪಾಲು ಬೆಣ್ಣೆ ಧನಿಕರ ಪಾಲು
ಕಣ್ಣು ತೆರೆದೆಡೆ ನಾಡಿಗರೆಲ್ಲ ಬೆಣ್ಣೆ
ಕಾಣುವರು ನೋಡು, ಮುರ್ಮಜ್ಞ

# ಕೋ. ಚೆನ್ನಬಸಪ್ಪ

## ಓ ಏಳಿ! ಎದ್ದೇಳಿ! ಬನ್ನಿ ನೂಡುವ ದಾಳಿ

ಸಿರಿಲತೆಯು ನಿಡುಬೆಳೆಗೆ
ನಮ್ಮ ದುಃಖಾಶ್ರುಗಳ
ಸುರಿದು ಇಂಗಿದುದೆಮ್ಮ ಕಣ್ಣೀರಿನೊರತೆ !
ಕಣ್ಣುಗಳು ಗುಳಿ ಬಿದ್ದು
ಮಸಣದಿಂ ನಾವೆದ್ದು
ಬಂತು ನಿಂತಿರುವೆ·ವಾವ್ ಛಾಯೆಯಂತೆ ! !

ತಂಪಾಗಲಿಲಿನಿತು
ಸಿರಿಲತೆಯು ಹಿರಿಪಾತೆ
ನಮ್ಮ ರಕ್ತವನೆಲ್ಲ ಸುರಿಯಬೇಕಾಯ್ತು !
ಎಲುವು ತೊವಲೆರಡನ್ನು
ಬಿಟ್ಟು ಮಿಕ್ಕುದುದನ್ನು
ಸೆಳೆಯಿತೀ ಲತೆಗಾಗಿ ಸಾಯಬೇಕಾಯ್ತು !

ಮಾನಮರ್ಯಾದೆಯನು
ಲಜ್ಜೆ ನಯ ಶೀಲವನು
ಲೋಕದಭಿಮತವೆಲ್ಲ ಹುಟ್ಟು ಕುರುಡಾಗಿ
ಒಂದಿನಿತು ಲಕ್ಷಿಸದೆ
ಧನಿಕರೆನ್ನುವ ಹದ್ದು
ಆಸುವುಳ್ಳೊಡಂ ಕೂಡ ಕೂಡುತಿದೆ ಮೇಲೆರಗಿ

ಕಣ್ಣೀರು ಹರಿಹರಿದು—
ಕಣ್ಣುಗಳು ಗುಳಿಬಿದ್ದು
ಮಾಂಸರಕ್ತವನೆಲ್ಲ ನಿಮಗೆ ಬಲಿ ಮಾಡಿ
ಓಡಾಡಲಳವಿರದೆ
ಬಿದ್ದುಕೊಂಡಿರುವೊಡೆ
ಕೊಲ್ಲಲೆಂದೆರಗುವುದೆ ನರಮಾಂಸ ಭಕ್ಷಕರೆ ?

ಹಗಲಿರುಳು ದುಡಿದು ನಾವ್
ಹಿಡಿ ಅಶನ ಕಾಣದೆಯೆ
ಹುಡಿಯಾಗುತಿರುವಾಗ ನಮ್ಮದುರ್ದೆಶೆ ಕಂಡು
"ಇದಕ್ಕೆ ಪೂರ್ವದ ಕರ್ಮ !
ಕರ್ಮಕ್ಕೆ ತಕ್ಕ ಫಲ ! !
ಅನುಭವಿಸಬೇಕಾಯ್ತು" ನುಡಿದರೀ ಜಾಣರ್ ! !

ಸಾಕು ನಿಲ್ಲಿಸಿ ನಿಮ್ಮ
ನೀರಸಾಲಾಪಮಂ
ಸವಿಯೆಂದು ಸಕ್ಕರೆಯು ನಮ್ಮ ಎಲುವಿನ ಪುಡಿಯು
ಕಣ್ಣೀರ ತುಪ್ಪದಲಿ
ಸವಿದಿರಿಲ್ಲಿಯವರೆಗೆ
ಕಕ್ಕಿಸುವೆವಾವೀಗ ತಿಂದುದರ ನೂರ್ಮಡಿಯು !

ಬೇಡುಗೀಡುವುದೆಲ್ಲ
ನಮಗೀಗ ಬೇಕಿಲ್ಲ
ನಮ್ಮ ಹಸಿವೆಯ ಉರಿಯ ನಿಟ್ಟುಸಿರ ಗಾಳಿಯಿಂ
ಬೀಸಿ ನಿಮ್ಮಯ ಮನೆಗೆ
ಬೆಂಕಿಯಿಟ್ಟುರಿಸುವೆವು
ಮಡದಿ ಮಕ್ಕಳನೆಲ್ಲ ಒಂದೆ ಚಿತೆಯಲ್ಲಿ

# ಇಕ್ಕುವಂ ನಮ್ಮೊಡಲ ಕೊಳ್ಳಿ

ನೆರವೀಯರೆಮಗಿಲ್ಲಿ
ದಯೆತೋರರವರಲ್ಲಿ
ಧನಿಕರೊಲವಿನ ತೆರದಿ ಸಾಗುತಿದೆ ಎಲ್ಲ !
    ನಮ್ಮ ಗತಿ ನಮಗಾಗಿ
    ಮನದೊಳಗೆ ಮರುಮರುಗಿ
    ಅಳಿಯುವುದೆ ನಮಗೆಲ್ಲ ಬಂದುದೆಲ್ಲ ! !

ಬಲ್ಲವರು ದೊಡ್ಡವರು
ಬಲ್ಲಿದರು ಕೆಟ್ಟವರು
ನಾವೆಲ್ಲಿ ಬದುಕುವುದು ಸುಡುಗಾಡಿನಲ್ಲಿ !
    ಇಲ್ಲಿರುವ ಸ್ವಾಮಿಗಳು
    ಧನವಂತರಾಳುಗಳು
    ಅಲ್ಲಿರುವ ದೇವನನು ಕಾಣೆ ಕಣ್ಣಿಲ್ಲ !

ಹಿಡಿ ಅಶನ ಒಡಲಿಂಗೆ
ಇಲ್ಲದೆಯೆ ಕೂರಸಿಗೆ
ಸಿಕ್ಕು ಹುಡಿಯಾಗುತಿರೆ ನುಡಿಸುವವರಿಲ್ಲ
    ಎಲ್ಲರಿಗು ಕಾಣುವುದು
    ನೀರೊಳಗೆ ಮುಳುಗುವುದು
    ಅಯ್ಯೊ ಪಾಪ ಎಂದು ನುಡಿಸುವವರಿಲ್ಲ.

ನಾವು ಪಾಪಿಗಳಂತೆ
ಅದಕೆ ಈಗೋಳಂತೆ
ಇದಕೆಲ್ಲ ಕಾರಣವು ಕರ್ಮವಂತೆ
    ಮರ್ಮವನು ಬಲ್ಲವರು
    ಸುಲಿಗೆಯಲಿ ನುರಿತವರು
    ನಮ್ಮ ಹಸಿವಿಗೆ ಕೊಟ್ಟ ಮದ್ದಿದಲ್ತೆ ?

ಅದಕಾಗಿ ನಾವಿಂದು
ಒಂದೆಡೆಗೆ ನೆಲೆನಿಂದು
ಪಾಪಪುಣ್ಯಗಳೆಲ್ಲ ಒಂದೆಡೆಗೆ ತಳ್ಳಿ
ನೆರವೀಯದವರಿರಲಿ
ದಯೆತೋರದವರಿರಲಿ
ಎಲ್ಲರಿಗು ಇಕ್ಕುವಂ ನಮ್ಮೊಡಲ ಕೊಳ್ಳಿ !

ಕರ್ಮಗಿರ್ಮದ ಜಾಲ
ತಡೆಯಲಾರದ ಕಾಲ
ಬಡತನದ ಭೀಕರದ ಹೊನಲಿನಲ್ಲಿ !
ಶತಶತಾಬ್ದಗಳಿಂದ
ನಮ್ಮ ಕಣ್ಣುಗಳಿಂದ
ಬಿದ್ದ ನೀರ್ ಪರಿಯುತಿದೆ ಈ ರೂಪದಲ್ಲಿ !

ಪಾಪಿಗಳು ನಾವೆಂದು
ನೋಡಬಾರದು ಎಂದು
ತಾವಾಗಿ ಕಣ್ಣುಗಳನಿರಿದು ಕೊಂಡವರು
ಎಲ್ಲರೂ ಪ್ರಲಯದಲಿ
ಬಡ ಬಾಳಿನುರಿಯಲ್ಲಿ
ಸೀದು ಸ್ವರ್ಗವ ಸೇರಿ ಮುಕ್ತಿ ಹೊಂದುವರು !

೨೨೯/ಕೋ. ಚೆನ್ನಬಸಪ್ಪ

# ಗಂಗಾಧರ ಚಿತ್ತಾಲ

## ನೆಲದ ಮಗ

ಅಗೋ ನೋಡು ಒರಟುಮರ
ವಿಕಾರವಾಗಿ ನಿಂತಿದೆ
ಸುತ್ತಲೆಲ್ಲ ಒರಟುನೆಲ
ಹಾಳುಗನಸಿನಂತಿದೆ
ಈ ಬಂಜೆ ತಾಳಿನಲ್ಲಿ
ಹೇಗೊ ಬಿತ್ತಿ ಹೇಗೋ ಬೆಳಸಿ
ಹಸಿವೆಯೆಂಬ ಶಾಪವನ್ನು
ಹುಟ್ಟಿ ಬಂದ ಪಾಪವನ್ನು
ತೊಡೆಯಲೆಂದು ತೊಳಲಿ ಸೋತು ನಿಂತ ನೆಲದ ಮಗನೆಂದೋ

ಶತಮಾನಂಗಳು ಸವೆದೂ
ಹಡೆದುದೇನು ಪಡೆದುದೇನು
ಈ ಆಕೃತಿ ಈ ವಿಕೃತಿ
ಈಸುಕಾಲ ನಡೆದುದೇನು ?
ಯುಗಯುಗಗಳ ಶೂನ್ಯವೇ ಇವನ ಕಣ್ಣೊಳಿಳಿದಿದೆ
ಯುಗದ ಭಾರ ಜಗದ ಭಾರ ಬೆನ್ನು ಮೂಳೆ ಮುರಿದು ಬೆಳೆದಿದೆ
ಆಸೆ ಎಂದೋ ಸತ್ತಿದೆ
ಬೆಳಕು ಎಂದೋ ಬತ್ತಿದೆ
ಹಸಿವೆಯಿನ್ನೂ ಜೀವತಿನ್ನುತಿಹುದು ಎಂಬ ಕಾಟಕೆ
ಈ ಬಂಜೆ ಮಣ್ಣು ಅನ್ನವೀವೆ ಎಂದು ಕರೆವ ಮಾಟಕೆ

ಜೊತೆಯದನಕೆ ಅಣ್ಣನಾಗಿ
ನೊಗವ ಹೊತ್ತು ಸುತ್ತುತಿಹನು
ನವೆದು ನಿರ್ವಿಣ್ಣನಾಗಿ
ಹಾಳು ನೆಲವ ಬಿತ್ತುತಿಹನು
ದುಡಿದು ಸೋತ ನೆಲದ ಮಗನು
ಗಾಳಿ ಬೆಳಕ ನೀರನೆಲವ ಆಳಲೆಂದು ಬಂದ ಚೆಲುವ
ದೇವಾಂಶನು ಇವನೆ ಏನು ?
ಚಿಕ್ಕಿಬಳಗ ತುಳಿವ ಹಾದಿ ಹಿಡಿದು ಬಾನಬಯಲ ಬೀದಿ
ಯಲ್ಲಿ ಬಲವನರಸೆ ಬಂದ
ದೇವಸಂಭೂತನೇನು ?
ಅನಂತದೊಂದು ಉಸಿರಸೋಂಕಿಗಾಗಿ ಬಯಸಿ ಹಸಿದು ತೇಂಕಿ
ಬಂದ ಜೀವನಿವನೆ ಏನು ?
ಈ ವಿರೂಪ ಕಂಡರಯ್ಯೊ ಎದೆಯು ನಡುಗಿ ಝಲ್ಲೆನುವುದು
ಇದನು ಸುಲಿದ ಇದನು ತುಳಿದ ನರನೆದೆ ಕಲ್‌ಕಲ್ಲೆನುವುದು
ಈ ಗಾಣದೆತ್ತಿಗೇನು
ನಿಮ್ಮ ವೇದ, ಉಪನಿಷತ್ತು, ವಿಜ್ಞಾನದರ್ಶನ
ಗಾನಲಹರಿ, ಚಿತ್ರಲಿಖಿತ ಸತ್ಯದಮೃತ ದರ್ಶನ
ಒಂದೆ ಒಂದೆ ಒಂದೆ
ಜಗದ ಕುರುಡು ಸ್ವಾರ್ಥವೊಂದೆ
ಇವನ ಮೈಯನುಂಡಿತು, ಇವನ ಜೀವ ಹಿಂಡಿತು
ಅದನೆ ಅದನೆ ನೆನೆದು ಶಪಿಸಿ ಇವನ ಮೌನ ಕೂಗುತಿದೆ
ಇಳೆಯನಾಳ್ವ ಬಲವಂತರ ಕೈವಾಡಕೆ ರೇಗುತಿದೆ
ನೊಗವನೆತ್ತಿ ಒಗೆವೆನೆಂಬ ಹೊಂಚಿನಲ್ಲಿ ಕೂಗುತಿದೆ.
ಏಳಲಿಹುದು ಏಳಲಿಹುದು
ಒಂದು ದಿನದಲೇಳಲಿಹುದು
ಈ ಹಸಿದ ಮೈಯೂ, ಕುಸಿದ ಕೈಯೂ ಕನಲಿ ಕೆರಳಿ ಏಳಲಿಹುದು
ಬಿರುಗಾಳಿಯ ಕೂಗಿನಿಂದ
ಮೂಜಗವನೆ ನಡುಗಿಸುತ್ತ
ನೆಲದೊಡೆಯರ ಕೇಳಲಿಹುದು
ತನ್ನ ತುಳಿದ ಸುಲಿದ ಕತೆಗೆ ಒಂದುತ್ತರ ಕೇಳಲಿಹುದು.

# ಸುಲಿಗೆಗಾರ

ಶತಮಾನಂಗಳ ಬಸಿರೂ
　　ಬಂಜೇ ಬಂಜೇ !
ಅದ ಹಾಳಾಗಿಸಿದನ ಉಸಿರೂ
　　ನಂಜೇ ನಂಜೇ
ಇವ ಮಾನವನೋ ದಾನವನೋ
　　ಅರಿವನಾರಿವನು—
ತನ್ನಾಸೆಗೆ ಯುಗ ಗರ್ಭವನೇ
　　ಹುಡಿಗೂಡಿಸಿದವನು !
ದೇವರ ಮಕ್ಕಳೆ ಈ ಹಿಂಡು
　　ಮಣ್ಣನು ಮೇಯುತಿದೆ ;
ಮುಗಿಲ ಜೇನ ಹೀರಲು ಬಂದು
　　ಹುಲ್ಲಿಗು ಸಾಯುತಿದೆ !
ಹುಟ್ಟ ತಂದ ಆ ಬೆಳಕೆಲ್ಲೋ
　　ನೋಯುತೆ ತೇಯುತಿದೆ !
ನರನ ದುರಾಸೆಯು ಎಲ್ಲೆಲ್ಲಿ
　　ಹುಟ್ಟಿತೊ ಅಲ್ಲಲ್ಲಿ
ಆಳಲು ಸಾವಿರ ಬಾಳುಗಳ
　　ಆಗಿಸಿ ತಾಳುಗಳ !
ತಾಯ್‌ನೆಲವ ಮಲತಾಯನಾಗಿಸಿತು
　　ಶಿಶುಕೋಟಿಯ ಕೂಗಿಸಿತು
ಬಿರಿದು ಈ ವಸುಂಧರೆಯನ್ನೇ
　　ಅದೊಂದು ಒರೆ ಎನ್ನೆ
ಸೆಳೆಯಿತು ನೂರಾರ್ ಮಿಂಚುಗಳ
　　ಹೂಡುತ ಸಂಚುಗಳ !
ಬೆಂಕಿಗೈಯ ಮುಂದಕೆ ಚಾಚಿ
　　ನಾಲ್ದೆಸೆ ಬಾಚಿ
ಬುವಿ ಬೂದಿಯುಗೈದೂ ಆರದಿದೆ
　　ಇನ್ನೂ ಆರದಿದೆ

ನರನಾಸೆಯು ಆರದಿದೆ !
ಯುಗ ಯುಗಗಳ ಗತಿ ಬಂತೆಲ್ಲಿ
      ವಿಲಯದ ಹೊಂಚೆಲ್ಲಿ
ಬಾನೊಡಲು ಬರಸಿಡಿಲೇ ತುಂಬಿಹುದು
      ಎರಗುವೆನೆಂದಿಹುದು
ಹಾ ಮಾನವ್ಯದ ರಥವನ್ನೇ
      ನುಂಗುತ ಭಂಗಿಸಿತೇ—
ನರನಾಸೆಯು ಬಾಯ್ತೆರೆದಿಂದು
      ಹಸಿವೆಯ ಹಿಂಗಿಸಿತೇ
ಶತಶತಮಾನಂಗಳ ಬಸಿರೂ
ಬಂಜೇ ! ಬಂಜೇ !
ಹಗಲೇರುವ ಮೊದಲೇ ಬಂತೇ
      ಸಂಜೆ ಸಂಜೆ !

# ಎಲ್. ಆರ್. ಹೆಗಡೆ

## ರಂಪಣಿ ದೋಣಿ

ಬಡ್ತನ್ದಲ್ಲೇ ಹುಟ್ಟಿಬಿಳ್ದೋರು
ಬಡ್ತನ್ದಲ್ಲೇ ಸಾಯ್ವೋರಾದ್ರೂ
ಬಡ್ತನದ ಸಂಗ್ತೀ ಹೊಡ್ದಾಡ್ಕಂಡು
ದುಡ್ಯೋರ್ನಾವು
ನಮ್ದು ರಂಪ್ಣೀ ದೋಣೀ ||

ಕಡ್ಲಾಗೈಷ್ಟು ಮೀನಿದ್ರೇನು ?
ದುಡೀದೆ ಬಂದ್ ಬಂದ್ ಬೀಳ್ತದ್ಯೇನು ?
ಹಿಡಿಬೇಕೆಂತ ಏಷ್ಟಾದ್ರೂನು
ಹೊರ್ಟೀವ್ನಾವು
ನಮ್ದು ರಂಪ್ಣಿ ದೋಣೀ ||

ಅಶ್ವೀಮರಗೊಳ ನೆರಳಿದ್ದಂತೆ
ದೊಡ ದೊಡ ಬಲೆಗಳ ನೆಯ್ದಿಟ್ಕೊಂತ
ಮಾರಿಬಲೆಗಳ ಮಾಡ್ಕೊಂಡವ್ರ
ಸಣ್ಮನ್ಸ್ನಗ್ಲಿಂತ
ನಮ್ದು ರಂಪ್ಣಿ ದೋಣೀ ||

ಮೀನ್ಗೊಳ್ ನೀರಲ್ ಕಪ್ಕಪ್ಪಾಗಿ
ಗುಂಪಾಗ್ ಕಂಡಾಗ್ ಹೊಗ್ತೇವ್ಬೇಗ

ಗಂಜೀ ಬೊಡ್ನೆ ತುಂಬಿಟ್ಕಂಡು
ದೋಣೀ ಬಿಟ್ಕಂಡು
ನಮ್ದು ರಂಪ್ಣಿ ದೋಣೀ ||

ವಬ್ರಿಗ್ ಕಮ್ಮಿ ವಬ್ರಿಗ್ ಹೆಚ್ಚು
ಪರ್ಪಂಚೆಲ್ದಿ ಸಮ್ನಾಗ್ ಹಚ್ಚು
ತತ್ವಾ ಇಟ್ಕಂಡ್ ಬಲೆ ಚಾಚು
ಕೆಲ್ಸ ಮಾಡ್ವವ್ರು
ನಮ್ದು ರಂಪ್ಣಿ ದೋಣೀ ||

ರಾತ್ರಿ ಹಗ್ಲುಯೆಂಬೂದಿಲ್ಲ
ಥಂಡಿ ಬಿಸ್ಲು ತಾಗೂದಿಲ್ಲ
ದೋಣಿ ಮನೆ ಒಂದೆಯೆಲ್ಲಾ
ಸಮುದ್ರದ್ ಸಂಸಾರ
ನಮ್ದು ರಂಪ್ಣಿ ದೋಣೀ ||

ಕೋಳಿ ಬಲಿಕೊಟ್ರೆ ಜಾಸ್ತಿ
ಜಟ್ಗಾ ಬಿಟ್ಗಾ ದೆವ್ವ ಮಾಸ್ತಿ
ಮಾಡ್ತವೆ ನಮ್ಗೆ ಬಲೆಸೂಸ್ತಿ
ಸಂದ್ರದ ನೀರ್ನಲ್ಲಿ
ನಮ್ದು ರಂಪ್ಣಿ ದೋಣೀ ||

ಪಾಪಪುಣ್ಯ ಅಂಬೂದ್ಯೆಲ್ಲ
ಬ್ರಾಂಬ್ರೀಗಿರ್ಲಿ ನಮ್ಗ್ಯೇನಿಲ್ಲ
ಕೊಂದಬಂದ ಪಾಪ ತಿಂಬೂದಿಲ್ಲ
ಸುಮ್ಮಂಗ್ ಮನ್ಗವ್ರೋರು
ನಮ್ದು ರಂಪ್ಣಿ ದೋಣೀ ||

೨೩೫/ಎಲ್. ಆರ್. ಹೆಗಡೆ

ಹೆಂಡ ಕುಡ್ಯೋದ್ ಬಿಡಬೇಕಂತ
ಬ್ರಾಂಬ್ರೀಗುಪದೇಸ ಮಾಡ್ಬೇಕಿಂಥ
ಥಂಡೀ ನೀರ್ನಲ್ ಕೆಲ್ಸ ಗೈತ
ಹೆಂಡ ಕುಡಿಬೇಕು
ನಮ್ದು ರಂಪ್ಣಿ ದೋಣೀ ||

# ಸು. ರಂ. ಎಕ್ಕುಂಡಿ

## ಮೀನು ಪೇಟೆ

ಕೊಳೆತು ನಾರುತಿರುವುದಿಲ್ಲಿ
ಹಳಸಿ ಹೋದ ಮೀನವು
ಕುಳಿತು ಮಾರುತಿರುವದಿಲ್ಲಿ
ಜೀವ ದುಃಖ ಮ್ಲಾನವು
ದೈನ್ಯ ಸಾರುತಿರುವುದಿಲ್ಲಿ
ಬಂಡವಲನ ಬುಟ್ಟಿಯಲ್ಲಿ
ಜೀತವಾಗಿ ಹುಟ್ಟಿದಲ್ಲಿ
ಬದುಕು ನಿತ್ಯದೀನವು.
ಬೆಳಗು ಬಂತು
ಸಂಜೆ ಬಂತು
ವರುಷ ವರುಷ ಕಳೆದರೂ
ಹರೆಯ ಮುಪ್ಪು ಕಳೆದರೂ
ತೆಂಗಿನ ಸಸಿ ಬೆಳೆದರೂ
ಬುಟ್ಟಿ ಮೀನ ಕೊಳೆತರೂ
ಹರುಷಗಿರುಷ ದೊರೆಯಲಿಲ್ಲ
ಇವರ ಬಾಳ ಹಂತಕೆ
ಈ ಬದುಕಿನ ಪಂಥಕೆ
ಇಲ್ಲಿ ಸಾಲು ಕುಳಿತ ಹೆಣ್ಣು
ಎಲ್ಲೊ ಮುಗಿಲಿನತ್ತ ಕಣ್ಣು
ಕುಳಿತರಿಲ್ಲಿ ಮತ್ಸ್ಯಗಂಧಿ
ಉಟ್ಟುಕೊಂಡು ಹರಕುಚಿಂದಿ

ನೊಂದ ಜೀವ ನೂಲುತಿತ್ತು
ಸುಖಸ್ವಪ್ನ ದರ್ಶನ
ಬಯಸಿತದರ ಸ್ಪರ್ಶನ
ಕಡಲಿನಾಚೆ ತೇಲುತಿತ್ತು
ಮಳೆವೆ! ಹಾಯ ಹಿಗ್ಗಿಸಿ
ಹರೆಯ ಮುಪ್ಪು ತಗ್ಗಿಸಿ
ರಂಪಿಣಿ ಬಲೆ ಬೀಸಿದಲ್ಲಿ
ಒಡಲಿನನ್ನ ಕರೆಯಿತು
ಗಾಳಿ ಕಡಲಿನೀಸಿದಲ್ಲಿ
ದುಃಖಲಿಪಿಯ ಬರೆಯಿತು
ಬಡವಲಿನ ಬುಟ್ಟಿಯಲ್ಲಿ
ಜೀತವಾಗಿ ಹುಟ್ಟಿದಲ್ಲಿ
ಬಲೆಗೆ ಬಿದ್ದ ಮೀನದಂತೆ
ವಿಲಿ ವಿಲಿ ಮಣಿದಾಡಿದೆ
ಕೊಳೆತ ಬದುಕು ಬಾಡಿದೆ
ತಂದ ಮೀನ ಕೊಳೆತರೂ
ಬಾಲ್ಯ ಹರೆಯ ತಳೆದರೂ
ಹರುಷಗಿರುಷ ದೊರೆಯಲಿಲ್ಲ
ಇವರ ಬಾಳ ಹಂತಕೆ
ಈ ಬದುಕಿನ ಪಂಥಕೆ.

# ಎಂ. ಅಕಬರ ಅಲಿ

## ಬಂತಣ್ಣ ಬಂತು ಹೊಸ ಹಗಲು

1

ಭೀಮಗರ್ಜನೆಯೊಡನೆ ಚಪಗೊಡಲಿ ಬೀಸಿ
ದಾಸವಾಳ ತಲೆ ಕತ್ತರಿಸಿ
ನೆತ್ತರಿನ ಅತ್ತರನ್ನಾಲಂಗಿಸಿ
ಗರಿ ಹೂವು–ರೆಕ್ಕೆ ಬಿಡಿಸಿ
ಫಡ ಫಡಿಸಿ
ಬಂತಣ್ಣ ಬಂತು ! ಹೊಸ ಹಗಲು !

2

ಶತಮಾನ–ಶತಮಾನದಿಂದ ಮೊನ್ನೆಯವರೆಗು
ಒದ್ದಾಡುತಿದ್ದೆ ನಾ ಇಲಿ ಇಲೀ
ನೆಲದಾಳ ಗವಿಯಲ್ಲಿ............
ಗೆದ್ದವನಹಂಕಾರ–ಮತ್ತು–ಅಧಿಕಾರ—
ಬಿಗಿದ ಬೇಡಿಯ ಭಾರ
ಕೊರಳ ಗುದ್ದಿ
ಮೈ ಮನವ ಮಾಡಿತ್ತು ಮುದ್ದಿ ಮುದ್ದಿ
ಕಣ್ಣ ಪಟ್ಟಿಯ ಕಟ್ಟಿ
ಬಾರುಕೋಲನ್ನೆತ್ತಿ
ಎದೆ ಮೇಲೆ ನಿಂತಿದ್ದ ದುಷ್ಟ ಗಾಣಿಗ
ಏಣಾಂಕಧರನನ್ನೂ ಗಾಣವಾಡಿಸದೆ ಬಿಡದಂಥ

ಕಟುಕ !
ತಲೆ ತಗ್ಗಿ
ತೊತ್ತಾಗಿ
ಮೂಕ ಎತ್ತಾಗಿ
ಜಗ್ಗಲಾರದೆ ಜಗ್ಗಿ
ತಿರು–ತಿರುಗಿಸೀ ಭಾರೀ ಗಾಣ
ಆದನಯ್ಯೋ ಸೋತು ಸೋತು ಸುಣ್ಣ–ಅಲ್ಲಲ್ಲ ಹೆಣ !

3

ಇದ್ದಕ್ಕಿದ್ದಂತೆ
ಗವಿಯೆದೆಯೆ ಒಡೆದಂತೆ
ಹೋಳಾಯ್ತು ಗವಿ ಬಾಯ ಬಂಡೆಗಲ್ಲು
ಒಸಗೆಯೊಡನೈತಂದಿತ್ತೈ ಹೊಚ್ಚ ಹೊಸ ಹಗಲು !
ಮಣ್ಣ ಮುದ್ದೆಯದಾದ ನನ್ನ ಉಸಿರನು ತುಂಬಿ
ನೆತ್ತರನು ನರ–ನಾಡಿಯಲಿ ಹರಿಸಿ
ಹುರಿಗೊಳಿಸಿ
ನೆರವಾಯಿತ್ತೈ ನನಗೆ ಎದ್ದು ನಿಲಲು ;
ಹೆಗಲಿಗೇ ಹೆಗಲು ಕೊಡಲು !

4

ಇನ್ನಿಲ್ಲ, ಇನ್ನಿಲ್ಲ—
ಬೆನ್ನು ಬಾಗಿ
ಪಶುವಿಗೂ ಪಶುವಾಗಿ
ಕ್ಷುದ್ರ ಜಂತುವೆ ಆಗಿ
ಕಾಲಕಸವಾಗಿ
ಬಿದ್ದಿರುವ ದುರವಸ್ಥೆ ದುರ್ ವ್ಯವಸ್ಥೆ !
ಇನ್ನು ನಾನೇ ನಾನು !
ನನ್ನೆದುರು ತೆರೆದಿಹುದು ಮುಗಿದಿರದ ಬುವಿ–ಭಾನು !
ಬೆಳಕಿನಾ ಮಡಿಲಲ್ಲಿ
ಗಾಳಿಯಾ ಕಡಲಲ್ಲಿ
ನನ್ನ ನೌಕೆಯನೇರಿ ಕಡೆಯುತಿಹ ಹೊಸ ಹುಟ್ಟು—
ಆಣೆ ಮುತ್ತನು ಸೂರೆ ಆಣೆ ತೊಟ್ಟು !

## ದುಡಿಮೆಗಾರರು

ನಾನಿಹೆನ್ನೈ ಕಬ್ಬಿಗ !
ಕುಂಬಾರರ, ಕಂಬಾರರ, ಬಡಿಗ, ಕೂಲಿಕಾರರ
ಗಿರಣಿ ಕಾಮಗಾರರ
ಸರ್ವದುಡಿಮೆಗಾರರ
ನಾನಿಹೆನ್ನೈ ಕಬ್ಬಿಗ !

ನಾ ಹಾಡುವೆ ಓ ಸೋದರ, ದುಡಿಮೆ–ಬೆವರ ಬಗೆಗೆ
ಅತಿಭೋಗದ ಸುಖ–ಸ್ವಪ್ನಕೆ ಸಮಯವಿಲ್ಲವೆನಗೆ
ನೋವೀಯುವ ನೇಗಿಲದೇ ಬಯಕೆ ಭೂಮಿಗೆ !
ಎದೆ ಸೀಳುವ, ಹಡಗದಡಿಯ ಹಲಿಗೆ ಬೇಕೋ ಕಡಲಿಗೆ
ಬುವಿಯ ಬಸಿರಿನಾಳದಲ್ಲಿ ಬಲೆ ಬಿದ್ದಿಹ ಅದುರು
ಕಂಬನಿ ಧಾರೆಯ ಸುರಿಸುತ ಕಾದಿಹುದಿದಿರು—
ಗಣಿಯೆದೆಯನೆ ತೋಡುವವನ ಕೈಯ ಬೈರಿಗೆ.

ಉಕ್ಕುಕ್ಕುವ ಉಗ್ರಹೊನಲ ಮೇಲಾಗಲಿ ಪೂಲ ;
ಇದುವೆ ಹೊಳೆಯ ಹಂಬಲು
ಸೃಷ್ಟಿರಮ್ಯ ರೂಪವನ್ನು ಬರಿದೆ ಕಾಣುತಿರಲಿಕೆ
ಸಮಯದೆನಗದೆಲ್ಲಿದೆ ?
ಮಣ್ಣು ಬಯಕೆ ತಣಿಸುವಂಥ ಕುಂಬಾರನ ತಿಗುರಿಗೆ
ನನ್ನ ಕಣ್ಣು ಹೊರಳಿಸುವೆ.
ಅಂತರಿಕ್ಷದಾಹ್ವಾನವ ಗಂಡುತನದಿ ಎದುರಿಸೆ
ರೆಕ್ಕೆ ರಚಿಸಿ ಹರಹುವೆ
ಬುವಿಯ ಗುಟ್ಟನಾಸೆ–ದಿಟ್ಟಬೆರಳ–ಬುರುಜನೆತ್ತುವೆ ;
ನೋಡ ಡಿಕ್ಕಿ ಹೊಡೆಯುವೆ.

ನೆರಳಿನೊಡನೆ ಚಂದ್ರಕಿರಣ ನಡೆಯಿಸಿಹುದು ಲೀಲೆ
ಜಾಲಾಂಧ್ರದ ಮೇಲೆ.



ಶಿಳಿಗಿ/ಎಂ. ಅಕಬರ ಅಲಿ

ಪ್ರೇಯಸಿಯುಡಿಯಲ್ಲೊರಗಿಹ ಸಾರಂಗವು ನರಳಿದೆ
ಇರುಳಿನಾಟ ಹೆಚ್ಚಿದೆ.
ದೀಪವಿರದ ಕೊಠಡಿಯಲಿ ಅರೆಗಣ್ಣಿನೆರಡು ಕಂಬನಿ
ಉದುರೆ, ಮನಕೆ ಮೋಹಿನಿ !
ಆದರೂನು, ಸಮಯವಿಲ್ಲ ಗಮನವೀಯಲೀ ಕಡೆ.
ಹಾಡು ನುಡಿಯೆ ಹೋಗಬೇಕು ಅದೋ ನನಗೆ ಆ ಕಡೆ,
ಸಾವಿರಗೈ ವಿಶ್ವಕರ್ಮ ಕಾರ್ಯನಿರತನಾದೆಡೆ.

ನಾನಿಹೆನೈ ಕಬ್ಬಿಗ !
ಕುಂಬಾರರ, ಕಂಬಾರರ, ಬಡಿಗ, ಕೂಲಿಕಾರರ
ಗಿರಣಿಕಾಮಗಾರರ
ಸರ್ವದುಡಿಮೆಗಾರರ
ನಾನಿಹೆನೈ ಕಬ್ಬಿಗ !

ಕಮ್ಮರನಡಿಗಲ್ ಮೇಲಪ್ಪಳಿಸುವೆನೈ ಸುತ್ತಿಗೆ,
ಹಿಡಿವೆ ಬಡಗಿ ಬೈರಿಗೆ.
ನಾನಿದುವರೆಗರಿಯದ ಹೊಳೆ-ಸೆಲೆವಿಗೆ ಇದುರಾಗಿ
ನನ್ನ ದೋಣಿ ಜಗ್ಗುವೆ.
ನಾವಿಕರ ನಕಾಶೆಗಳಲಿ ಕಾಣಸಿಗದ ಜಲಧಿಗಳಲಿ
ಹಾಯಿಪಟವನೇರಿಸುವೆ.
ಅತಿವಿಶಾಲ ಬಹುದೂರಾಗಿಹ ಸಾಗರದಲಿ
ನನ್ನ ಬಲೆಯ ಚೆಲ್ಲುವೆ.

ಬಹುದೂರದ ಬೆಟ್ಟಗಳಲಿ ಬಿಲಮಾರ್ಗವ ಕೊರೆಯುವೆ
ದಟ್ಟಡವಿಯ ಹುಟ್ಟಳಿಸಲು ಗಂಡುಗೊಡಲಿ ಬಳಸುವೆ
ಭೂಲೋಕದ ಭಾರವೆಲ್ಲ ನನ್ನ ಹೆಗಲ ಮೇಲಿದೆ
ಕಲ್ಲನೆಲ್ಲ ಕುಟ್ಟಿ ಕುಟ್ಟಿ ಪುಡಿಯ ಮಾಡುವೆ
ಆಳಗಲದ ಕಾಲುವೆಗಳ ನಾನು ತೋಡುವೆ
ಹರಿ-ಹರಿಯುವ ಹಾದಿ-ಬೀದಿಗಳನು ರಚಿಸುವೆ
ದಾರಿ ಕಾಯುತಿಹುದು ಬರಿದೆ ಸ್ವಪ್ನಮಯೀ ದೀವಿಗೆ
ಸಮಯದೆನಗದೆಲ್ಲಿದೆ ?

ನಾನಿಹೆನೈ ಕಬ್ಬಿಗ !
ಕುಂಬಾರರ, ಕಂಬಾರರ, ಬಡಿಗ, ಕೂಲಿಕಾರರ
ಗಿರಣಿ ಕಾಮುಗಾರರ
ಸರ್ವದುಡಿಮೆಗಾರರ
ನಾನಿಹೆನೈ ಕಬ್ಬಿಗ !

೨೪೩/ಎಂ. ಅಕಬರ ಅಲಿ

# ವೈ. ಎಸ್. ಲೂಯಿಸ್

## ನಾಡಯುವಕನಿಗೆ

ಬಡತನವು ಸಿರಿತನವು ಬ್ರಹ್ಮ ಬರೆದಿರುವಂತೆ
ಎಂಬ ಕಡುಮೂರ್ಖತನ ಬಿಟ್ಟು
ಎದ್ದು ನಿಜ ಪೌರುಷದಿ ಸಮತೆಯನು ಸಾಧಿಸೈ
ಕ್ರಾಂತಿಗಿದೊ ಕಂಕಣವ ತೊಟ್ಟು
ನೂರಾರು ವರುಷದಿಂ ನಾಡಿನಲಿ ಬೀಡು ಬಿ
ಟ್ಟಿರುವ ಈ ಭ್ರಾಂತಿಯನು ಸುಟ್ಟು.

ಹತ್ತಾರು ರೈತರನು ಒಬ್ಬ ಸಿರಿಕುಲದವನು
ದುಡಿಸಿ ಮೈ ಬೆಳೆಸುತಿಹ ಕಾಲ,
ನೂರಾರು ಸಾವಿರದ ಅಸಹಾಯ ಕಾರ್ಮಿಕರ
ತುಳಿದೊತ್ತಿ ಮೆರೆವವರ ಕಾಲ
ಕೋಟಿ ಪ್ರಜೆಗಳ ಸುಲಿದು ಸೌಧಗಳ ಮೋದದಲಿ
ಮೈಮರೆತು ಕೊಬ್ಬಿಹರ ಕಾಲ,
ಎಲ್ಲ ಪೋಗಲಿ ನಿನ್ನ ಸುಜ್ಞಾನ ಖಡ್ಗದಿಂ
ಕತ್ತರಿಸು ಒಡ್ಡಿರುವ ಜಾಲ.

ತೆಗೆದಿರಿಸು ಒತ್ತಡೆಗೆ ಮತಗಳಿಗೆ ಎಡೆಯಿಲ್ಲ
ಕನಸಿನಲು ಮನಸಿನಲು ಇಂದು
ಜಾತಿ ಕುಲಗಳ ಹೇಸಿಗೆಯ ವೇಷನು ತೊರೆದು
ದೇಶಭಕ್ತಿಯ ಜಲದಿ ಮಿಂದು,

ಒಡವ ಬಲ್ಲಿದರೆಲ್ಲರಿಗು ಕ್ರಾಂತಿಯಮೃತವನು
ಕುಡಿಸೇಳು ಶಕ್ತಿಯನು ತಂದು
ಯಾರೆ ನಾಯಕರಾಗಿ ನಡೆಸಬಂದರು ನಮ್ಮ
ಅರ್ಥದಲಿ ನಿಲ್ಲುವುದು ಬೇಡ !
ಹೊರಟಿರಲು ಜೈತ್ರಯಾತ್ರೆಯಲಿ ನಾವ್ ಎಚ್ಚೆತ್ತು,
ಕಿತ್ತೊಗೆವ ಬುಡಸಹಿತ ಕೇಡ !
ಓಡಿ ಬಾ, ಕಹಳೆಯನು ಕೂಗು, ಮೊಳಗಲಿ ದಿಕ್ಕು
ತೊಲಗಲೀ ಕವಿದಿರುವ ಕೇಡ.

೩೪೫/ವೈ. ಎಸ್. ಲೂಯಿಸ್

## ಬಿ. ಸಿ. ರಾಮಚಂದ್ರ ಶರ್ಮ

### ನೆತ್ತರಿಗೆ ಬೆಲೆಯಿಲ್ಲ

ಹಿಂದೆ ಬಲು ಹಿಂದೆ, ಅವನೆಂದ ನನಗೆ
ಇದು ವಿಧಿಯ ಚಕ್ಕಂದ !
ನೋಡವನೆ ಪರಸೊತ್ತು ಕಸಿದು ಬದುಕುವ ಜೀವಿ
ನೋಡವನ ಠೀವಿ !
ತನ್ನದಲ್ಲದ ನೆಲವ ಕದ್ದುದಲ್ಲದೆ ಮುಳ್ಳ
ಬೆಳೆವ ಎದೆಗಾರ ನೆಲಗಳ್ಳ, ಸುಳ್ಳ !
'ಬಾ' ಎಂದ,
'ದೂಡಿ ಕಳ್ಳನ ನಾವು ಕೂಡಿ ನೆಲ
ದಾಯ ಹೆರಳಿಗೆ ಅಮಲ
ಕುಸುಮವನು ಬೆಳೆಯೋಣ.
ನೆಲದಾಳದಿಂದಾವು
ಅನ್ನ ಚಿನ್ನವ ನೆಲಕೆ ಸೆಳೆಯೋಣ.
ನಾಡ ನಂದನವನವೋ ಎನ್ನುವಂತೆ ನಾವಿಲ್ಲಿ
ಹಣ್ಣು ಹೂಗಳ ಚೆಲುವ ಹೊಳೆಯೋಣ' !
ನಿಜಕು ಹೊಂಗನಸು !
ಅನ್ನ ಚಿನ್ನದ ಕನಸು, ಹಣ್ಣು ಹೂಗಳ ಕನಸು
ತಲೆಯ ತೂಗಿತು ಮನಸು
ನಾ ಕೃತಜ್ಞತೆಯೊಳೆಂದೆ,
'ಓ ಪರಂಜ್ಯೋತಿ, ನೀ ನರನಾಗಿ ಬಂದೆ,
ನನ್ನನುದ್ಧರಿಸಲೆಂದೆ' !
ದಿನವುರುಳಿ ದಿನಬಂತು.

ಮನಕಿರಲಿ ಹರುಷ,
ಎಣಿಸದೆಯೆ ಬಳಿನಿಂತು,
ಮರೆಯಾದ ವರುಷಗಳ
ನಾ ದುಡಿದೆ ಲೆಕ್ಕಿಸದೆ.
ಬರುವ ಸುಗ್ಗಿಯ ಕನಸ ನೆನೆನೆನೆದು ನಾ ದುಡಿದೆ,
ಸವೆದ ಯೌವನಕಿನಿತು ದುಃಖಿಸದೆ.
ನಾಡ ಹಬ್ಬದ ದಿನವೆ ಅವನ ಬಳಿಗೈತಂದೆ.
'ಎಲ್ಲಿ ಸಂಪದವೆಲ್ಲಿ ತೋರು, ತೋರೆಂದೆ'
ಅವನೆಂದ 'ಏನೆಂದೆ ?'
'ಕಣ್ಗೆ ಹಬ್ಬದ ಹುಚ್ಚು ಹಿಡಿದ ದಿನ ನಾ ಬಂದೆ ;
ತೋರು, ತೋರೆಂ'ದೆ.
'ನೋಡು ನಿಂತಿಹನಲ್ಲಿ ಬಿಳಿಯಂಗಿ ಧರಿಸಿ.
ನೀ ಬೆಳೆದ ಬೆಳೆಯೆಲ್ಲ ಅವನ ಬಳಿಯಿದೆ' ಎಂದ.
'ಅವನ ಬಳಿ ಏಕಿಟ್ಟೆ ನಾ ಬೆವರ್ಸುರಿಸಿ
ಬೆಳೆದ ಫಲವನು ?' ಎಂದೆ.
ಅವನೆಂದ,
'ನೀ ಸವೆದ ಹಾರೆ ಕುಡುಗೋಲು ಗುದ್ದಲಿಯೆಲ್ಲ
ಅವನದಲ್ಲವೆ ? ಬದಲು ನೀ ಕೊಡುವುದೇನು ?'
ನಾನೆಂದೆ, 'ನೆತ್ತರನು ಸುರಿದವನು ನಾನು'
ಅವನೆಂದ, 'ನೆತ್ತರಿಗೆ ಬೆಲೆಯಿಲ್ಲ ! !'

೨೪೬/ಬಿ. ಸಿ. ರಾಮಚಂದ್ರ ಶರ್ಮ

## ಎಂದಿಗೆ ?

1

ಎಂದಿಗಯ್ಯ, ಎಂದಿಗೆ ?  ಎಂದಿಗೋ ಎಂದಿಗೆ ?
ನನ್ನ ನಾಡ ಮಂದಿಗೆ,
ತಿಳಿವು ಹೊಳೆವುದೆಂದಿಗೆ ?
ನಾಡ ನೂರುಕೋಟಿ ಗಂಡು ಹೆಣ್ಣು ಕೂಸು ಕುನ್ನಿಗೆ,
ಹುಟ್ಟಿಗಂಟೆ ಬಂದ ಚಿತ್ತದಾಸ್ಯ ಕಳೆವುದೆಂದಿಗೆ ?

2

ನೆನ್ನೆ ವೈಭವದ ನೆನಹ ಭೂತ ಗಣವೆ ಕುಣಿದಿದೆ !
ಯುಗ ಯುಗಾಂತರದ ನಾಡ ಹಿರಿಮೆ ಕನಸ ಮತ್ತೆ ಕನಸಿ,
ನೆನಹ ಜೊಲ್ಲ ಬೆರೆಸಿ ತೊನೆಸಿ
ನಾಡು ತಣಿದಿದೆ !
ಮೆಲುಕು ಹಾಕಿ ಹಾಕಿ ಹಾಕಿ ದವಡೆ ದಣಿದಿದೆ
ಅಳಿದ ಸಿರಿಯ ಅಣಕವಾಡು ಒಂದೆ ಸಮನೆ ನಡೆದಿದೆ
ಅಂತ ಕಾಣದಾಗಿದೆ !
ಸೂಡಿನಿಂದೆದ್ದು ಬಂದ ಶವದ ಸುತ್ತ ಕುಳಿತ ಜನತೆ,
ಮೆಚ್ಚಿ ತಲೆಯ ತೂಗಿದೆ.
ನಿತ್ಯ ರುದ್ರ ನೃತ್ಯ ಹೃದಯರಂಗದಲ್ಲಿ ನಡೆದಿದೆ.
ಉನ್ಮತ್ತ ನಾಟ್ಯಕೆಂದೆ ನಾಡು ತಾಳ ಹೊಡೆದಿದೆ.
ಒಪ್ಪಿ ತೊಡೆಯ ಬಡಿದಿದೆ !

3

ಯಾವ ಜೀವದ ಯೋಗ ಬಲವೊ, ಉಗ್ರತಾಪಸಿಯರ ಮಹಿಮೆಯೋ,
ಅಂತು ಬಂದಿದೆ ಬಿಡುಗಡೆ !
ಸುರಿದ ನೆತ್ತರ ಕೆಂಪಸಿರಿಯೋ, ಮಣ್ಣಿಗೊದಗಿದ ತಣ್ಪು ಕರೆಯೋ
ಹಸುರ ಮೆರೆಯಿತು ಮರುಭರೆ !
ಕಡಲ ಕಡೆಗೋಲಿಟ್ಟು ಕಡೆಯಲು,

ಅಯ್ಯೋ ಬಂತೆ ವಿಷ ವಿಷ !
ನೆಚ್ಚಿ ಕಡೆಯಲು ಮೆಚ್ಚಿ ದುಡಿಯಲು
ಬಾರದಾಯಿತೆ ಅಮೃತ !
ಅಂತು ಬಂದಿತು ಬಂದೆ ಬಂದಿತು ಎಂಥ ಎಂಥಾ ಬಿಡುಗಡೆ
ಮೋಸ ಸುಳ್ಳಿಗೆ, ಲಂಚ ಸುಲಿಗೆಗೆ,
ಹೃದಯದಾಳದ ಕೊಚ್ಚೆ ಹರಿವಿಗೆ,
ಇನ್ನು ಇಲ್ಲವೆ ತಡೆಬಡೆ !

4

ಕಡಲುಗಳ್ಳರ ಕಾಟ ಕೊನೆಗಂಡರೇನಂತೆ ?
ಒಡಲುಗಳ್ಳರು ಇನ್ನು ಇಲ್ಲೆ ಇಹರೊ !
ರೈತ ಮಕ್ಕಳು ಬಯಸಿ ಬೆಳೆದ ಬೆಳಸನು ಸುಲಿದು
ಸುಖ ಪಡುವ ರಕ್ಕಸರು ನಡುವೆ ಇಹರೊ !
ನರನಸ್ಥಿಪಂಜರದ ಅಡಿಗಲ್ಲ ಮೇಲಿವರು
ಸುಸ್ಥಿರವು ಎನುವಂಥ ಭವನಗಳನು
ನಿರ್ಮಿಸುವ ಕ್ರೂರಜನ, ತೂಗಲೆಂದೇ ಬಂದು,
ಕೂಸ ಕೊರಳನ ಹಿಸುಕಲೆಳಸುತಿಹರು.
ಸುಡುಗಾಡ ನಡುವಲ್ಲೆ ಸುಖದ ಸುಪ್ಪತ್ತಿಗೆಯ
ಹಾಸಿ ಮಲಗುವ ಜನರು ನಾಡೊಳಿಹರು !

5

ಬೂಟುಕಾಲಿನೇಟು ಬಿದ್ದರಿನ್ನು ಸುಮ್ಮನಿರುವರೇ ?
ಕಿವಿಯ ತುಂಬ ಕಲ್ಲಿನೇಟು ತಿಂದ ಕುನ್ನಿ ಮರಿಯ ಕೂಗು !
ಕೇಳದಲ್ಲೋ ಗರ್ಜನೆ,
ಕಿವಿ ಬಿರಿಯುವ ಮೃಗರಾಜನ ತುಂಬುಕೊರಳ ಗರ್ಜನೆ.
ರಕ್ತಪಾನಮತ್ತ ಈ ರಾಕ್ಷಸಗಣ ಹತ್ಯಕೆ,
ಕ್ಷಾತ್ರ ವಧೆಗೆ ನಿಂತ ಜಮದಗ್ನಿಯಂತೆ ಕೆರಳಿನಿಂತು.
ಗುಂಡುಗೊಡಲಿಯುಟ್ಟು ಜನತೆ ಹೆಜ್ಜೆಯಿಡುವುದೆಂದಿಗೆ
ನಡೆವುದೆಂದು ಮುಂದಕೆ ?
(ಸಾಕು ಸಾಕು ನಿಲ್ಲಿಸವ್ವ ಷಂಡರ ಈ ಸುರಿಮಳೆ !
ಭತ್ತ ಬೆಳೆದ ಭೂಮಿ ತುಂಬ ಕಲ್ಲು ಮಣ್ಣು ಪುರುಚಲೆ ?

೨೪೯/ಬಿ. ಸಿ. ರಾಮಚಂದ್ರ ಶರ್ಮ

ಏನು ಬಸಿರ ತುಂಬ ಇಂಥ ಬರಿ ಕಂತರಿ ಬೀಜವೆ
ಸಾಕು ತಾಯಿ ಭರತಮಾತೆ ಷಂಡರ ಈ ಸುರಿಮಳೆ ! )

6

ಇರುಳ ಬಸಿರ ಬಗೆದು ಉದಯರಾಗ ಬರುವುದೆಂದಿಗೆ ?
ನನ್ನ ನಾಡ ಮಂದಿಗೆ ?
ನಾಡ ಮೂಲೆ ಮೂಲೆಗೆ, ರಾಜ ಬೀದಿ ಸಂದಿಗೆ,
ಕ್ರಾಂತಿ ಭಾನು ಹೊಳೆದು ಹೊಂಬೆಳಕು ಚೆಲ್ವುದೆಂದಿಗೆ ?
ಎಂದಿಗಯ್ಯ ಎಂದಿಗೆ ?
ಕಾವಳವಿದು ಕಳೆದು ಮತ್ತೆ ತಿಳಿವು ಹೊಳೆವುದೆಂದಿಗೆ,
ಹುಟ್ಟಿಗಂಟ ಬಂದ ಚಿತ್ತದಾಸ್ಯ ಕಳೆವುದೆಂದಿಗೆ !

# ಕ. ವೆಂ. ರಾಜಗೋಪಾಲ

## ಬುಲ್ ಡೋಜರು

ಎಮರ್ಜೆನ್ಸಿಯಲ್ಲಿ
ಒದಗಿದ ಈ
ಪರದೇಶಿ ಯಂತ್ರ
ನಮ್ಮ ಪ್ರಗತಿಯ ತಂತ್ರ :
ಅಧಿಕಾರದ ಇಚ್ಛೆಗೆ
ಶಿರಸಾವಹಿಸಿ
ದುಡಿಯುವ ಮದಗಜ
ಮುಂಡಿಗಳ ಮೇಲೆ ಬಾಗಿ
ದಂತದಿಂದ ಮೀಟಿ
ಸೊಂಡಿಲ ಸುತ್ತಿ
ಮಾವುತನ ಇಚ್ಛೆಗೆ
ಏನನ್ನಾದರೂ ಎತ್ತಿ
ಒಗೆಯುವ ಕಸರತ್ತಿನಲ್ಲಿ
ನಿಸ್ಸೀಮ ಇಸಮ್
ಅಧಿಕಾರದ ನುಗ್ಗುಲಾಮ
ಮರವೆಂದರೆ ಮರ
ದಿಮ್ಮಿ, ಮಣ್ಣಿನ ದಿಬ್ಬ
ಬಡವನ ಮನೆ
ಮತ್ತೊಂದು ಜಗ್ಗಿಸಿ
ನೆಲಸಮಗೊಳಿಸಿ
ನಿರಾತಂಕ ನಿಲ್ಲುವ

ಯಜಮಾನನ ಹೆಮ್ಮೆಗೆ
ಚನ್ನಾಗಿ ತಿಂದು ತೇಗಿ
ಮೈ ತೂಗಿ....ಕೂಗಿ
ದುಡಿಯುವ ಈ ಯಂತ್ರ
ಒಂದು ಆಧುನಿಕ ಗುಲಾಮ
ಬೆರಳೊತ್ತಿಗೆ ಕೂಗಿ
ಕಿವಿ ಹಿಂಡಿದರೆ ಬಾಗಿ
ಒಡೆದರೆ ನಡೆಸು
ಹೇಳಿದಷ್ಟು ಮಾಡಿ
ಸನ್ನೆಗಳ ಮನ್ನಿಸಿ
ಒಡೆತನದ ಗುಲಾಮ
ಪರದೇಶಿಗಳ ಕರುಣೆ
ಅಧಿಕಾರದ ಪ್ರತಿಮೆ
Work More
and talk less
ಎಂದೊಪ್ಪಿಸುವ
ಹೇಳಿದಷ್ಟು ಮಾಡುತ್ತಾ
ಅಧಿಕಾರವನ್ನುಳಿಸುವ
ದೌಲತ್ತಿನ ಕೈಗೊಂಬೆ
ದುಡಿಮೆಯ ಮಹಿಮೆ
ಇಹಪರ ಸಂವೇದಕ
ಮದಗಜವೆನ್ನಿ
ಭೂತವೆನ್ನಿ
ಒಡತನದ ಬಾಯಿಗೆ ಮಣ್ಣೆನ್ನಿ
ಸ್ವಾತಂತ್ರ್ಯಕೆ ಜೈ ಎನ್ನಿ
ಬುಲ್‌ಡೋಜರಿಗೂ ಜೈ ಎನ್ನಿ

# ಜಿ. ಎಸ್. ಶಿವರುದ್ರಪ್ಪ

## ಭೀಮಾಲಾಪ

ಸೀರೆ ಉಟ್ಟು, ಬಳೆ ತೊಟ್ಟು, ಕಾಲಿಗೆ
ಗೆಜ್ಜೆ ಕಟ್ಟಿದ್ದಾನೆ ಒಬ್ಬ ;
ಇನ್ನೊಬ್ಬ ಕಾವಿ ಉಟ್ಟು ಮೂಲೆಗೆ ಕೂತಿದ್ದಾನೆ
ದನದ ಕೊಟ್ಟಿಗೆಯಲ್ಲಿ ಒಬ್ಬ, ಕುದುರೆ ಲಾಯದಲ್ಲಿ ಮತ್ತೊಬ್ಬ
ಇದ್ದಾಳೆ ಇವಳು ಅವರಿವರ ತಲೆಯ
ಹೇನು ಹೆಕ್ಕುತ್ತಾ
ಆಗಾಗ ನಮ್ಮನ್ನೂ ಕುಕ್ಕುತ್ತಾ.
ನಾನೂ ಇದ್ದೇನೆ—ಅಡುಗೆ ಮನೆಯಲ್ಲಿ
ಉರಿವ ಸೌದೆಗಳ ಜೊತೆಗೆ
ಪಾತ್ರೆಗಳಲ್ಲಿ ಕೊತ ಕೊತ ಕುದಿದು
ಹಳೆಯ ನೆನಪುಗಳನ್ನು ರುಬ್ಬುತ್ತಾ.
ಕಣ್ಣೆದುರು ತೇಲಿಬರುತ್ತವೆ :—
ಕಂಡದ್ದು, ಕಲಿತದ್ದು ; ಬೆಂಕಿಗೆ ಬಿದ್ದು ಪಾರಾದದ್ದು ;
ಪಗಡೆದಾಳದ ಜೊತೆಗೆ ಉರುಳಿ ಬಿದ್ದದ್ದು ; ಬಾಚಿದ
ಜಡೆಯ ನೆರಳಿನ ಕೆಳಗೆ ಭುಸುಗುಟ್ಟಿ ನರಳಿದ್ದು ;
ಕಾಡು ಪಾಲಾಗಿ ಅಲೆದದ್ದು.
ನಿಟ್ಟುಸಿರಲ್ಲಿ ಪಟ ಬಿಚ್ಚಿ ತೇಲುತ್ತವೆ ; ಊರುಗಳು ;
ಮಹಾರಣ್ಯಗಳು ; ಋಷಿಗಳು ; ರಾಕ್ಷಸರು ;
ಬೆಳಗು ಬೈಗುಗಳು ; ಇನ್ನೂ ಏನೇನೋ
ಸುರುಳಿ ಬಿಚ್ಚುತ್ತವೆ
ಜೀವ ಹಿಂಡುತ್ತವೆ.

ಅಲ್ಲಿ ಊರಾಚೆ ಮಸಣದಲ್ಲಿ
ಇದ್ದ ಪೌರುಷವನ್ನು ದುಂಡಗೆ ಸುತ್ತಿ
ಹೆಣವಾಗಿ ಮಲಗಿಸಿದ್ದೇವೆ, ಮರದ
ಕೊಂಬೆಯ ಮೇಲೆ.
ನೋಡುತ್ತಿದ್ದೇನೆ, ಸುತ್ತಲೂ ಎಂತೆಂಥವೋ
ವಿಜೃಂಭಿಸಿ ಮೀಸೆ ತಿರುವುತ್ತವೆ.
ಏರಬಾರದ ಕಡೆಗೆ ಏರಿ, ಇಳಿಯಬಾರದ ಕಡೆಗೆ
ಇಳಿದು ಕೆಡಿಸಿ ಹೊಲಸೆಬ್ಬಿಸಿವೆ.
ಗೆರೆ ದಾಟಬಾರದ ನಾನು ಕಾಯುತ್ತಿದ್ದೇನೆ
ಉರಿವ ಸೌದೆಗಳ ಜೊತೆಗೆ
ಪಾತ್ರೆಗಳಲ್ಲಿ ಕೊತ ಕೊತ ಕುದಿದು ಕಾಯುತ್ತಿದ್ದೇನೆ.

# ಗುಲಾಮರು

ನಾವು ಗುಲಾಮರು : ನಮಗೆಂದಿಗೂ
ಬೇಕಾಗಿಲ್ಲ ಬಿಡುಗಡೆ, ನಾವು ಹುಟ್ಟು
ಗುಲಾಮರು, ನಮ್ಮದಲ್ಲದ ನೊಗವ
ಸದಾ ಹೆಗಲಲ್ಲಿ ಹೊತ್ತು ಮೆರೆಯುವವರು.
ಶತಮಾನಗಳ ಕಾಲ ಕೊರಳಪಟ್ಟಿಯಲ್ಲೇ
ಬೆಳೆದ ನಾಯಿಗಳು ನಾವು. ಬಿಚ್ಚಿದರೂ
ಮತ್ತೆ ಅಭ್ಯಾಸಬಲದಿಂದ ಅಲ್ಲೇ ನಿಂತು
ಟೇಬಲ್ಲಿನಿಂದುದುರುವೆಂಜಲಿಗಾಗಿ
ನಾಲಗೆ ಚಾಚಿ ನಿಂತ ಸೊಣಗಗಳು ನಾವು,
ಶುದ್ಧ ಗುಲಾಮರು.

ಇಲ್ಲ ನಮಗೆ ನಾಚಿಕೆಯಿಲ್ಲ ; ನಾಚಿಕೆ
ಯೆಂದರೇನೆಂದೂ ನಮಗೆ ಗೊತ್ತಿಲ್ಲ,
ಹೊತ್ತು ಹೊತ್ತಿಗೆ ಕತ್ತೆಯ ಕಾಲು ಹಿಡಿದು
ಬೆಲೆಯಿದ್ದದ್ದನ್ನೆಲ್ಲ ಕೊಲೆ ಮಾಡಿ ಬಡಿದು
ದೊಡ್ಡ ಮಾತುಗಳ ಹಲಗೆ ಹಿಡಿದು ಕುಣಿದಿದ್ದೇವೆ.
ನಮ್ಮತನವೆಲ್ಲವನ್ನೂ ಹರಾಜಿಗಿಟ್ಟು
ನಿಂತಿದ್ದೇವೆ ಸ್ವಾಮಿ, ನಾವು ಗುಲಾಮರು
ಬಿಡುಗಡೆ ಬಂತೆ ಈ ದೇಶಕ್ಕೆ ? ಬಿಡುಗಡೆಯ ಕೆಚ್ಚು
ನೂರಕ್ಕೆ ಐದರಷ್ಟಾದರೂ ಇದೆಯೆ ನಮ್ಮಲ್ಲಿ ?
ನಮಗೂ ಅಂತರಾಷ್ಟ್ರೀಯ ರೋಗ. ಇದರ
ಲಕ್ಷಣ–ಇಲ್ಲಿನದು ಏನೂ ದಕ್ಕುವುದಿಲ್ಲ.
ನಮ್ಮ ಹೆಂಗಸರನ್ನು ಸೌಂದರ್ಯ ಸ್ಪರ್ಧೆಗೆ
ಕಳಿಸಿ, ನ್ಯೂಯಾರ್ಕಿನಲ್ಲಿ ನ್ಯಾಯಮೂರ್ತಿಗಳೆದುರು
ಅರಬೆತ್ತಲೆಯಲ್ಲಿ ನಿಲ್ಲಿಸಲೂ ಹಿಂಜರಿವ
ಜನರಲ್ಲ ನಾವು, ಶುದ್ಧ ಗುಲಾಮರು.
ನಾವು ಸೆಂಟ್‌ಪರ್ಸೆಂಟ್ ಗುಲಾಮರು. ಪೂರ್ವದಿಂದ
ಪಶ್ಚಿಮಕ್ಕೆ ಆಗ್ಗದ ಭಟ್ಟಿಯ ಮಗ್ಗದಲ್ಲಿ ಸದಾ

ಲಾಳಿಯಾಡುವ ಮಂದಿ. ಇದ್ದ ಆತ್ಮವನು ಕುತ್ತಿಗೆ
ಹಿಸುಕಿ, ವಿಲಾಯಿತಿಯ ಹುಲ್ಲನು ತುರುಕಿ
ನಿಲ್ಲಿಸಿದ ಬೆದರು ಬೊಂಬೆಗಳು ನಾವು.
ಶುದ್ಧ ಗುಲಾಮರು, ನಾವು ಶುದ್ಧ ಗುಲಾಮರು

# ಸಾಕು ನಿಲ್ಲಿಸು ನಿನ್ನ ಸಾಮಗಾನ

ದೇಶದಾದ್ಯಂತ ಅಣೆಕಟ್ಟುಗಳ ಕಟ್ಟಿ ನಾವು
ಬೆಳೆದದ್ದೇನು ಬರೀ ಹಸಿವೆ?
ಹೊಲಗದ್ದೆಗಳ ತುಂಬ ತೆನೆಯೆತ್ತಿ ತೂಗುವುದೇನು ?
ಹಸಿರೆ ಅಥವಾ ನಿಟ್ಟುಸಿರೇ ?
ಯೋಜನೆಯಿಂದ ಯೋಚನೆಗಿಳಿದು
ತಳದ ಕೆಸರಲ್ಲಿ ಹೂತು ಹೋಗಿದೆ ಬುದ್ಧಿ.
ಇದ್ದಂಥ ಕಾಳು ಕಡಿಯೆಲ್ಲ
ಕಗ್ಗತ್ತಲಲ್ಲಿ ತಪಸ್ಸು
ಸಿದ್ಧಿ—ಚಿನ್ನದ ಕನಸು.
ತೆರೆದ ಅಂಗಡಿಯೆದರು ಬೆಳಗಿಂದ ಸಂಜೆಯ ತನಕ
ಒಂಟಿ ಕಾಲಿನ ಧ್ಯಾನ
ಹದ್ದುಗಣ್ಣಿನ ಕೆಳಗೆ ಏರಿಳಿವ ತಕ್ಕಡಿಯ ನೆರಳಿನ ಕೆಳಗೆ
ಹಸಿದ ಮೌನ.
ಬಂತೆ ದೀಪಾವಳಿ? ಇಷ್ಟೊಂದು ಹಣತೆಗಳಲ್ಲಿ
ಎಣ್ಣೆಯಿಲ್ಲ.
ಬರೀ ಮಾತುಗಳ ಕಡ್ಡಿ ಗೀಚುವೆಯಲ್ಲ
ನಿನಗೆ ನಾಚಿಕೆಯಿಲ್ಲ?

 ೨೫೭/ಜಿ. ಎಸ್. ಶಿವರುದ್ರಪ್ಪ

# ಬೆಂಗಾಡು

ಯಾವ ಬೀಜ ಮೊಳೆತೀತು ಇಲ್ಲಿ
ಈ ಬೆಂಗಾಡಿನಲ್ಲಿ
ಮಿದುವಿಲ್ಲದಲ್ಲಿ ಹದವಿಲ್ಲದಲ್ಲಿ
ಬಿಸಿಲ ರಣಹದ್ದೆರಗಿ ಸದಾ
ಬೋಳು ಬಂಡೆಯ ಮಂಡೆ ಕುಕ್ಕುವಲ್ಲಿ.
ಯಾವ ಬೀಜ ಮೊಳೆದೀತು ಇಲ್ಲಿ
ಈ ಬೆಂಗಾಡಿನಲ್ಲಿ
ಯಾವ ಬೀಜ ಮೊಳೆತೀತು ಇಲ್ಲಿ
ಈ ತೀರದಲ್ಲಿ,
ಉಪ್ಪು ಕಪ್ಪಾದ ಕಡಲಿನಲೆ
ದಡದ ಬಂಡೆಯ ಮೇಲೆ
ಭೀತಿ ಭೂತದ ಶಿಲ್ಪ ಕೊರೆಯುವಲ್ಲಿ
ಒಡೆದ ಹಡಗಿನ ತುಂಡು
ಹೊಳೆವ ಎಲುಬಿನ ಹಿಂಡು
ಬೆಂಕಿ–ಬಿಸಿಲಿನ ಕೆಳಗೆ ಬೇಯುವಲ್ಲಿ,
ಯಾವ ಬೀಜ ಮೊಳೆತೀತು–ಈ
ನಿರ್ಜನಾರಣ್ಯ ಭೂತೀರದಲ್ಲಿ.
ಯಾವ ಬೀಜ ಮೊಳೆತೀತು ಇಲ್ಲಿ
ಹಗಲೂ ಇರುಳು ಬಂಜರುಗಾಳಿ
ಬೀಸುವಲ್ಲಿ,
ದಿನವಿಡೀ ರೊಯ್ಯೋ ಎಂದು ಗೋಳುದನಿ ತೀಡುತ್ತ
ಧೂಳು–ತರಗೆಲೆ ದೆವ್ವ ಕುಣಿಯುವಲ್ಲಿ
ಒಂದಾದರೂ ಹೂವು ಮಂದಹಾಸವ ತೆರೆದು
ದುಂಬಿ ಮುತ್ತನು ಬಳಿಗೆ ಸೆಳೆಯದಲ್ಲಿ
ಎಂದಾದರೂ ಹಸಿರು ಹಬ್ಬಿ ದಿಬ್ಬಗಳೆದೆಯ
ತಬ್ಬದಲ್ಲಿ,
ಯಾವ ಬೀಜ ಮೊಳೆತೀತು ಇಲ್ಲಿ
ಈ ಬಂಜೆ ಭೂಮಿಯಲ್ಲಿ.

# ಸುಬ್ರಾಯ ಚೊಕ್ಕಾಡಿ

## ಹಸಿದವರು

ಮಧ್ಯಾಹ್ನ ದಾರಿಯಲ್ಲಿ ಮಾರ್ಗ
ದುದ್ದಕ್ಕೂ ಹಸಿದವರು
ಕಾರು ಸ್ಕೂಟರು ಆಟೋ
ಬಸ್ಸು ಸೈಕಲ್ಲು ಫುಟ್‌ಪಾತು
ಎಲ್ಲೆಂದರಲ್ಲಿ ಅವತರಿಸುತ್ತ
ಧಾವಿಸುವ
ಹಸಿದವರು.
ಇವರ ಗುರಿ :
ರೂಮು ಮನೆ ಹೋಟೆಲ್ಲು ಕ್ಲಬ್ಬು
ಬಾರು ಪಾರ್ಕು ಮೈದಾನ ಟಾಕೀಸು
ಆಫೀಸು ತುಂಬಿದ ಪರ್ಸು....
ಹೀಗೆ ಪಟ್ಟಿಯಾಗುತ್ತ
ಹರಿಯುತ್ತದೆ.
ಹಾದಿಯುದ್ದಕ್ಕೂ ನಡೆಯುವಾಗ
ಮೈಗೆ ಮೈ ಸವರುತ್ತ
ಕೈಯನೆತ್ತುತ್ತಾರೆ; ಹೊಟ್ಟೆ ಹೊಡೆಯುತ್ತಾ
ಲಬೊ ಲಬೊ ಬಡಕೊಳ್ಳುತ್ತಾರೆ; ಕಣ್ಣು ತಿರುವುತ್ತಾ
ಕುಣಿಸುತ್ತಾ ಕುಣಿಯುತ್ತಾ ಸಮೀಪವಾಗುತ್ತಾ ದೂರ ಸಿಡಿಯುತ್ತಾ
ಒಳಗೊಳ್ಳುತ್ತ ತಿಕ್ಕುತ್ತ ಕೈಗಳ
ಕಾಲದಾಚೆಗೆ ಚೆಲ್ಲಿ
ಹಸಿವಿನ ಕೇಂದ್ರವಾಗುತ್ತಾರೆ.

ಯುಗಚಕ್ರದಲ್ಲಿ ಇವರು
ನಡುವೆ ನಾನು.
ಮಧ್ಯಾಹ್ನದುರಿ
ಯಲ್ಲಿ ಮಾರ್ಗ
ದುದ್ದಕ್ಕೂ ಹಸಿದವರು.

## ಭಾರತಿಗೆ ಸುಪ್ರಭಾತ

ನನ್ನ ದೇಶವೆ ಏಳು, ಎದ್ದೇಳು
ನಿದ್ದೆ ಬಿಡು.
ನಿನಗಿನ್ನೂ ಮುಂಜಾವು ಹರಿದಿಲ್ಲ
ಹರೆಯದ ಕಣ್ಣಿನಲ್ಲಿ ಇನ್ನೂ ನಿದ್ದೆಯ ಜೊಂಪು
ರಾತ್ರೆಯಿಡೀ ಸುರಿದ ಗುಡುಗು ಸಿಡಿಲಿನ ಬಿರುಸು ಮಳೆಯಲ್ಲೂ
ನಿನಗೆ ಸುಂದರ ಕನಸು
ಬರುತ್ತಾನೊಬ್ಬ ರಾಜಕುಮಾರ
ಅಪ್ಪುತ್ತಾನೆ ರಾಜಕುಮಾರ
ಬದುಕಿಡೀ ಬೆಳ್ಳಗೆ ಬಿರಿದ ಮಲ್ಲಿಗೆ ಹೂವು. ಸುತ್ತ
ಹಾಲು ಜೇನಿನ ಮಳೆ.
ವಾಸ್ತವವಾಗಿ ಇಲ್ಲಿ ಬಿರುಗಾಳಿ ಝಾಡಿಸಿ ಒದೆದೆ
ನೆರೆಯುಬ್ಬರದಿ ತೇಲಿ ಹೋಗುವ ಮರ
ಜನಜೀವಗಳ ಜಾತ್ರೆ ; ದಡದಲ್ಲಿ
ನೆರೆಯನಡುವಲ್ಲಿ ಕೈಯೆತ್ತಿ ಆಸರೆ ಕೋರಿನಿಂತ
ಬೆನ್ನಾದ ಹೊಟ್ಟೆಗಳು ; ಧ್ವನಿಕಳಕೊಂಡ ಕಂಠಗಳು
ತಾಯೀ ಕಣ್ಣು ಬಿಡು ಕಾಣುತ್ತಿದೆಯೇ
ನಡು ಹಗಲಲ್ಲಿ ಕೋವಿಗಸ್ತಿನ ನಡುವೆ ಜೀಪುಗಳಲ್ಲಿ
ಸುಖವಾಗಿ ತಿರುಗುವ ಡೊಳ್ಳು ಹೊಟ್ಟೆಗಳು ;—
ನೆರೆ ಪರಿಹಾರ ನಿಧಿ ಕೂಡಿಸುವ ಢೋಂಗಿಗಳು
ವಿರೋಧ ಸ್ವರಗಳನ್ನೆಲ್ಲ ನೆರೆಪಾಲಾಗಿಸುವ ಹಸ್ತಗಳು
ಸಮತೆಯಾವೇಶದಲಿ ನೆಲಸಮವಾದ ಜೀವಗಳು........

ನಿದ್ರಿಸಿದ ರಾಜಪುತ್ರೀ, ನಿನ್ನ
ಹರೆಯವ್ವೊ ಇಲ್ಲಿ ಈ ವಿಷಮ ಸ್ಥಿತಿಯಲ್ಲಿ
ಗೋರಿಯಂಚಿನ ಹೂವು. ಬರಬಹುದು
ಮೂಸುವುದಕ್ಕೆ ಗೋರಿಯೊಳಗಿಂದ
ಪ್ರೇತಗಳು ಆ ಮುನ್ನವೇ
ನಿನ್ನ ಹರೆಯಕ್ಕೊಂದು ಅರ್ಥಕೊಡು, ನಮ್ಮನ್ನು

ಇಲ್ಲಿ ಇನ್ನೂ ಕೊಂಚ ಕಾಲ ಬದುಕಬಿಡು
ಈ ರಾಗ ಕೇಳಲಿಲ್ಲವೆ ನೀನು ?  ನಿದ್ರಿತ ನಿನಗೆ
ಇದು ಹೊಸದೆ ಇರಬಹುದು.  ಆದರೆ ನಮಗೆ
ನೂರೊಂದು ಸಲ ಉಲಿದ ಗ್ರಾಮಫೋನಿನ ಹಾಡು

ತಾಯೀ, ಸಾಕಿನ್ನು ನಿದ್ದೆ ಬಿಡು, ಏಳು
ಎದ್ದೇಳು, ಕಣ್ಣನು ಪೂರ್ತಿ ತೆರೆದು
ಬಾಹ್ಯದಲಿ ತೊಡಗು.

# ಚೆನ್ನವೀರ ಕಣವಿ

## ಕ್ರಾಂತಿಕಲಿ

ಮುಗಿಲ ಮರೆಗಿರುವ ಮಿಂಚಿನ ಬಳ್ಳಿ ಗಗನ ದಂ—
ಚಿಗೆ ತನ್ನ ಕುಡಿನಾಲಗೆಯ ಚಾಚಿ ಕತ್ತಲೆಯ
ತುತ್ತುವೊಲು ಸಾಮಾನ್ಯದಲ್ಲು ಅಸಮಾನತೆಯು
ಕಿಡಿಯೊಂದು ಅರಿಯದೊಲು ಅಡಗಿಹುದು ಕೃತುಬಲಂ !
ಜನಜೀವನದ ಉಗ್ರ ಜಾಗ್ರತಿಯು ಬಿರುಗಾಳಿ
ಬೀಸಲದೆ ಪ್ರಜ್ವಲಿಸಿ, ಕ್ರಾಂತಿ ಕಲಿಗಳ ಕೈಯ
ಪಂಜಿನೊಲು ಪರಿಸರವ ಪ್ರತಿನಿಧಿಸಿ ಹೆಗ್ಗುರಿಯು
ತೋರುವುದು ! ಭಾರತದ ಬಿಡುಗಡೆಯ ಬವರದಲಿ
ಕನ್ನಾಡ ವೀರ ವಾಲಿಯ ದಂಡು ಕಾಳೆಗದ
ಮುಖದಲಿ ಮುಸಗಿದುದು—ಕಣ್ಣೆವೆಯ ಮುಚ್ಚಿ ತೆರೆ
ವನಿತರೊಳೆ ಅಚ್ಚರಿಯ ಕೃತಿನೂರು ಬೆಟ್ಟದೊರೆ!
ಪಡಿವಳನಸೀಮ ಸಾಹಸ ನಾಡ ಬಾವುಟದ
ಹೆಮ್ಮೆ ; ಧೃತಿಗೆಡದ ಕೃತಿ ವೀರನೇಗಳು ಗೆಲ್ಗೆ !
ನಾಡ ಸೇವೆಯಲಿಂತುತ್ಸಾಹದಿಂ ಬಾಳ್ಗೆ !

# ಹೊಸ ಬಾಳು ನಮ್ಮದಿದೆ

ಹೊಸ ಜಗವು ರೂಪುಗೊಂಡಿಹುದೀಗ ;  ಹೊಸ ಬಾಳು
ನಮ್ಮದಿದೆ, ಹೊಸತೆಲ್ಲ ನಮ್ಮದಿನ್ನು
ಹಳೆಯ ಕಾಲದ ರೂಢಿ–ಜಡಮತೀಯರನೆಲ್ಲ
ಬಿಟ್ಟು ಬಿಡಿ ಅವರವರ ಪಾಡಿಗಿನ್ನು—

ಯುವ ಜನಾಂಗವೆ ಬನ್ನಿ ನವರಂಗಕೆ
ಹೊಸ ಪಾತ್ರಧಾರಿಗಳ ಹೊಸ ಕುಣಿತಕೆ ;
ಮೂಲೆಯಲ್ಲವಿತವಗೆ ಬರಿ ಕತ್ತಲು
ಸತ್ವತನು ಸಾಹಸಕೆ ಯಶವೆತ್ತಲು

ಹೊಸ ಮಳೆಯ ಧಾರೆಯಲಿ ಇಂದಿನೀ ಜೀವನಕೆ
ಬಂದಿದೆ ಮಹಾಪೂರ, ಬತ್ತದಿನ್ನು
ಹಳೆಕೊಳೆಯ ತತ್ತ್ವಗಳು ಸಂಕುಚಿತ ಭಾವಗಳು
ಕೊಚ್ಚಿ ಹೋಗಿವೆ, ತಿರುಗಿ ಬಾರವಿನ್ನು—

ಮುಂಬಾಳ ಮುಂಜಾವು ನಗೆಯು ಬೀರಿ
ಕೊರಳೆತ್ತಿ ಹಾಡುತಿದೆ ಜಯುವ ಕೋರಿ ;
ಮರೆತು ಬಿಡಿ ಹಿಂಗತೆಯ ಹೀನತೆಯನು
ಕೊಟ್ಟು ಬಿಡಿ ಆ ವ್ಯಥೆಗೆ ತರ್ಪಣವನು.

ಎಂದಿನಿಂದಲೊ ನಿಮ್ಮ ಎದೆಗಳಲಿ ಹುದುಗಿಹುದು
ಹೊಸ ಸಮಾಜದ ರೂಪ–ರೇಖೆ ಬಯಕೆ ;
ನಿಮ್ಮ ಹೊಂಗನಸುಗಳ ಕಂಡರಿಸಲೆಂದೀಗ
ಹದಗಾಲ ಬಂದಿರಲು ಮುದುರಲೇಕೆ ?

ಬಾಳವೃಕ್ಷದ ಜೀರ್ಣ ಪರ್ಣಂಗಳುದುರಿ
ಹೋಗುತಿವೆ ಚಿಗುರೆಲೆಗೆ ಹೊಗರು ಬೀರಿ,
ಜೋಲು ಮೊಗ ಯುವಕರಿಗೆ ಸಲ್ಲ ಹೊಲ್ಲ ;
ನಗುತ ಮುಂಬರಿಯುತಿರೆ ಬಹುದು ಗೆಲ್ಲ

ಬಡವ ಬಲ್ಲಿದರೆಂಬ ಜಾತಿಗೀತಿಗಳೆಂಬ
ವಿಷಮತೆಯ ನಂಟೇಕೆ ಹೊಸ ಬಾಳಿಗೆ ?
ಹೆಣ್ಣೆಂದು ಹೀಗಳೆವ ಕುನ್ನಿತನವಿನ್ನೇಕೆ ?
ಕಸವೇಕೆ ನಳನಳಿಪ ಹುಲುಸು ಬೆಳೆಗೆ ?

ಒಡಕು ಬಾಳಿನಲ್ಲಿಲ್ಲ ಚೆಲುವು ಮೋದ
ಒಡಕು ತಂಬೂರಿಯಲಿ ಒಡಕು ನಾದ ;
ಮಣ್ಣು ಮಣ್ಣೇ ಹೊನ್ನ ಬೆಳೆಯಬಹುದು
ನಮ್ಮ ದೃಢ ಮುಷ್ಟಿಯಲಿ ಸಗ್ಗವಿಹುದು.

ಮುಗಿದು ಹೋಯಿತು ಬಾಲ್ಯ, ಮುಂದೆ ಬಾರದು ಹರೆಯ
ಚಣಚಣಕು ಆಯುಷ್ಯ ಸವೆಯುತಿಹುದು ;
ಕಾಲಗತಿಯೊಡನೆ ಸಮರಸವಾಗಿ ಸಾಗುವದೆ
ಜೀವನ ಪ್ರವಾಹಕ್ಕೆ ದೊರೆತ ಗುರಿಯು.

ನಮ್ಮ ಅನುಭವಗಳೇ ನಮ್ಮ ಗಳಿಕೆ,
ಕಾಲದೊರೆಗಲ್ಲಿನಲಿ ನಿಂತ ಬಾಳ್ಕೆ ;
ನೊರೆಗೆ ಮರುಳಾಗುವದೆ ಹೇಡಿ ಬದುಕು
ಮುತ್ತು ಪಡೆವರೆ ಆಳ ಮುಳುಗಬೇಕು.

ನಿಮ್ಮೆದೆಯೊಳಿದೆ ಛಲವು ನಿಮ್ಮ ಕೈಗಿದೆ ಬಲವು
ಆದರೇತಕೊ ಹಿಂದೆ ಸರಿಯುತಿಹಿರಿ—
ಅವ್ಯಕ್ತ ತೇಜಗಳೆ ಅಮೃತಪುತ್ರರು ನೀವು
ಪ್ರತಿಗಾಮಿ ಶಕ್ತಿಗಳ ಸದೆಬಡೆಯಿರಿ.

ಜ್ಞಾನವೃದ್ಧರು ತಿಳಿವನೆರೆಯುತಿರಲಿ
ಬೇಡವೆಂದವರಾರು—ಅವರು ಬರಲಿ ;
ಹುಮ್ಮಸಕೆ ತಣ್ಣೀರನೆರೆಚದಿರಲಿ
ಹೊಸ ಸಮಾಜದ ಗುರಿಯು ನೇರವಿರಲಿ.

೨೬೫/ಚೆನ್ನವೀರ ಕಣವಿ

ಹೊಸ ಜಗವು ರೂಪುಗೊಂಡಿಹುದೀಗ ;   ಹೊಸ ಬಾಳು
ನಮ್ಮದಿದೆ, ಹೊಸತೆಲ್ಲ ನಮ್ಮದಿನ್ನು
ಹಳೆಯ ಕಾಲದ ರೂಢಿ ಜಡಮತೀಯರನೆಲ್ಲ
ಬಿಟ್ಟು ಬಿಡಿ ಅವರವರ ಪಾಡಿಗಿನ್ನು

ಹೊಸಬಾಳು ರಸಬಾಳನಪ್ಪುತಿಹುದು ;
ಸಮತೆ–ಸಾಮಾನ್ಯತೆಗೆ ಒಪ್ಪುತಿಹುದು ;
ಹೊಸ ಗಂಧ ತಂದಿಹನು ಮಂದಾನಿಲಂ
ಹೊಸ ಕಾಲದುದಯರವಿ–ಸುಸ್ವಾಗತಂ

# ಕೊನೆಯ ಎಚ್ಚರಿಕೆ

1

ಏಸು ಕ್ರಿಸ್ತ ಏಸು ಬುದ್ಧ
ಏಸು ಬಸವ ಬಂದರೂ,
ತಮ್ಮ ಅಂತರಂಗವನ್ನೇ
ಲೋಕದೆದುರು ತೆರೆದರೂ,
ನಶ್ವರದಲಿ ಈಶ್ವರನನು
ಕಂಡು ಜಗದ ಕಲ್ಯಾಣಕೆ
ಎದೆಯ ಪ್ರಣತಿ ಜ್ಯೋತಿಯಲ್ಲಿ
ದಯೆಯ ತೈಲವೆರೆದರೂ,
ಪುಣ್ಯಪುರುಷ ಗಾಂಧಿ ತಂದೆ
ನೆತ್ತರಲ್ಲಿ ನಾಂದರೂ

ನೀನು ಮಾತ್ರ ಬೋರ್ಕಲ್ಲೆದೆ ಪೆಡಂಭೂತನಂತಿಹೆ
ಮತ್ತೆ ಹೊಲಸು ಕೆಸರಿನಲ್ಲೆ ಮತ್ತನಂತೆ ಬಿದ್ದಿಹೆ ;
ತೊಳೆದು ಹೋಗಲಿಲ್ಲವಿನ್ನು ನಿನ್ನ ಮನದ ಮೈಲಿಗೆ
ಬರುವದಿಲ್ಲ ನಾಚಿಗೆ ?

ಮೇಲೆ ಆಹಾ ಥಳಕು ಬೆಳಕು
ಒಳಗಸಹ್ಯ ಕೊಳಚೆ ಕೊಳಕು
ದುರಾಚಾರ ದುರುದ್ದೇಶ
ದುರ್ನೀತಿಯ ಹೊಲೆಯಿದೆ ;
ಡಾಂಭಿಕತೆಯ ಮುಸುಗಿನಲ್ಲಿ
ಬೂಟಾಟಿಕೆಯಾಟವಲ್ಲಿ ;
ನೀತಿಯೆಂಬ ಹೆಸರಿನಲ್ಲಿ
ಹುಚ್ಚು ಹೊಳೆಯ ಹಸುರಿನಲ್ಲಿ
ಅಹಂಕಾರ ಹೂಂಕಾರವ—
ಗೈವ ದುರುಳ ಕರುಳಿನಲ್ಲಿ
ಮೋಸವಲ್ಲಿ ನೆಲಸಿದೆ

ಬಲ್ಮೆ ಸುಲಿಗೆ ನಡೆಸಿದೆ
ಗುಣವಿಹೀನ ನಿನ್ನ ರೂಪ
ಬಿಸಿಲ ತಾಪ ವಿಷದ ಕೂಪ
ರೊಚ್ಚಿಗೆದ್ದು ಕೊಡಲು ಶಾಲ
ಅಯ್ಯೊ ಪಾಪ ಎನಿಸಿದೆ.

ನಗುವ ಹೂವ ಹೊದರಿನಲ್ಲಿ ಹಾವು–ಹುತ್ತ ಕಟ್ಟಿದೆ
ವಿಷದ ಹೊಗೆಗೆ ದೀನ ಜನರ ಉಸುರು ಕಟ್ಟಿಬಿಟ್ಟಿದೆ
ಎತ್ತ ನೋಡಿದತ್ತ ಕುತ್ತು ಕಾಲು ಕೆದರಿ ನಿಂತಿದೆ
ಕರುಣೆಯೊಡಲು ಕುಸಿದು ಬಿದ್ದು ಜ್ವಾಲಾಮುಖಿಯಂತಿದೆ

2

ದೊಡ್ಡ ಜನರ ದೊಡ್ಡಸ್ಥಿಕೆ
ಹೊಗಳು ಭಟರ ಡಬಡ್ಡಳಿಕೆ
ಅನ್ಯಾಯದ ದಬ್ಬಾಳಿಕೆ
ಹೇಳು ಕ್ರೂರಿ ಏತಕೆ ?
(ಸ್ವಲ್ಪ ಜನರ ಸಂತೋಷಕೆ)
ನರಗೆ ನರನ ರಕ್ತ ರುಚಿಯೆ ?
ಶೋಷಣೆಯಿದು ನಿನಗೆ ಶುಚಿಯೆ ?
ಹೇ ಸಮಾಜಪಾತಕಿ !
ಕಪಟ ವೇಷ ನರ್ತಕಿ
ನಿನ್ನ ಲಾಸ್ಯ ಹಾಸ್ಯದಲ್ಲಿ
ಕುಡಿತ ಮೆರೆತ ಕೇಕೆಯಲ್ಲಿ
ಉದರಭರಣಕಾಗಿ ಹರಣ
ಕೊಡುವ ಈ ದುರಂತ ಮರಣ
ಚರಮ ಗೀತ ಕೇಳದೆ ?

ಅಂಜುಬುರುಕರೆಂದು ಕಪ್ಪೆ ಚಿಲ್ಲಿ ಮೋಜು ನೋಡುವೆ
ಮುಗ್ಧ ಕುಸುಮ ಕೋಮಲೆಯರ ರುಂಡಮಾಲೆ ಸೂಡುವೆ
ನಿಷ್ಕಲ್ಮಷ ಎದೆಗಳನ್ನೇ ಹತ್ತಿ ತುಳಿದು ಹಿಂಡುವೆ
ಧೀರರೆಂದು ಕಂಡುಬರುವ ಮೊದಲೆ ಜೀವ ಹೀರುವೆ

ಕೈಯ ತುತ್ತು ಕಸಿಯುವೆ
ಮತ್ತೆ ಹಲ್ಲು ಮಸೆಯುವೆ
ಪದೇ ಪದೇ ಅದೇ ರೀತಿ
ಅದೇ ನೀತಿ ಎನ್ನುವೆ,
ಹಳಸಿ ಹೋದ ತತ್ತ್ವಗಳನೆ
ಮೆದುಳಿನಲ್ಲಿ ತುರುಕುವೆ,
ಎಂದಿನಂತೆ ನಿನ್ನ ಭೂಮ
ಹೊಟ್ಟೆ ಹೊರೆದುಕೊಳ್ಳುವೆ

3

ಹಗಲು ಇರುಳು ಅರಳು—ಮರಳು
ಇದ್ದು ಬಿದ್ದ ಜೀವಕುರುಲು
ನಿನಗೆ ಹಿಡಿದ ಒಳರೋಗಕೆ
ಸೂಜಿ ಮದ್ದು ಸಾಲದು ;
ಬೇಕು ಅದಕೆ ಮಹಾಚಿಕಿತ್ಸೆ
ಒಲ್ಲೆನೆಂದರಾಗದು.

ಉಸ್ಸೆನ್ನುವ ಜನದುಸಿರಿಗೆ
ಬುಸ್ಸೆನ್ನುತ ಹೆಡೆಯನೆತ್ತಿ
ಕಚ್ಚಿ ವಿಷವ ಕಾರುವೆ
ಹಾಲನುಣಿಸಿ ಹಿತದ ಮಾತ
ಹೇಳಿದವರ ಮರೆಯುವೆ.
ಧರ್ಮಾಂಧರ ಹಣವಂತರ
ಬೆನ್ನು ಕಟ್ಟಿ, ಗುಣವಂತರ
ಬಡಿವ ಭೂತ ಬೆಂತರ
ರಕ್ತ ಕೋಡಿ ಹರಿಸಿದೆ,
ಮಂತ್ರದರ್ಥವರಿಯದಯ್ಯೊ
ಮೂಢ ಸಂತೆ ನೆರೆದಿದೆ
ಮಡಿಯ ಮಾಡಿ ಉಡುವೆನೆಂದು
ಬೊಗಸೆ ನೀರು ಸುರುವಿ ಕೊಳಕು
ಸಂಚಿ ತೊಳೆದ ಮಾತ್ರಕೆ

ಅಚ್ಚ ಹಸನುಗೊಳಿಸದಿರಲು
ಮನಕೆ ಶುಭ್ರವೆನಿಸದಿರಲು
ಮಡಿಯಾಯಿತೆ ಪೂಜೆಗೆ ?
ಅದರೊಳುಳಿದ ಜಿಡ್ಡಿನಂತೆ
ನೀನು ಕೊಡ ಮಡ್ಡನಂತೆ,
ತಿಳಿಯೊ ಮೊದಲು ತತ್ತ್ವವ
ಅದರ ಮೂಲ ಸತ್ತ್ವವ.

4

ಅಧಿಕಾರದ ಅಮಲಿನಲ್ಲಿ
ಮೂಢ ಜನರ ಬೆಂಬಲದಲಿ
ಹೆಸರು ಪಡೆವ ಹಂಬಲದಲಿ
ಅರಿಯದಂಥ ಕುನ್ನಿಗಳನು
ನುಂಗಿ ನೀರು ಕುಡಿದಿಹೆ
ತೀರಲಿಲ್ಲ ಆ ಪಿಪಾಸೆ
ಟೊಣೆಯುತಿರುವ ಈ ದುರಾಶೆ—
ವಿಶ್ವಪ್ರೇಮ ದಿವದ ಬಯಕೆ—
ಗೆಲ್ಲ ಕೀಲಿ ಜಡಿದಿಹೆ.
ನೊಂದರೂನು ಕರುಣೆ ಬಂದು
ಪರಿಪರಿಯಲಿ ಹೇಳುವೆ ;
ಕೇಳಲಾರೆಯಾದರಿನ್ನು
ಭೀಮಗದೆಯನೆತ್ತುವೆ !
ನೂರು ದೂರು ಕೇಳುತಿರುವೆ
ನಿತ್ಯ ನಾನೆ ನೋಡುತಿರುವೆ

ಇನ್ನು ಬರಿದೆ ತಾಳಬಹುದೆ ಇಂಥ ನರಕಯಾತನೆ ?
ಕಣ್ಣಮುಂದೆ ನಡೆಯುತಿರಲು ಋತದ ಶಿವದ ಭರ್ತ್ಸನೆ
ಎನಿಸು ಕಾಲ ನಡೆಸಬಹುದು ಘೋರ ಆತ್ಮವಂಚನೆ
ಅದಕೆ ಕೊಡುವೆನಿಂದು ಕೊನೆಯ ಎಚ್ಚರಿಕೆಯ ಸೂಚನೆ :

ಹರೆಯದೇರು ಗರುವದಲ್ಲಿ
ಉದ್ರೇಕದ ಮಬ್ಬಿನಲ್ಲಿ

ಕೈಲಾಗದ ಕನಸನುಂಡು
ಮೈಯನೆಲ್ಲ ಪರಚುತಿರುವ
ಕನಲಿ ಕೆಂಡವಾಗುತಿರುವ
ಅಪ್ರಬುದ್ಧ ಬುದ್ಧಿಹೀನ—
ನೆಂದು ಹಳಿಯಬಹುದು ತುಳಿಯಬಹುದು ಆದರೆ—
ಅರಿವು ಮರವೆಯಾದರೂ
ನಾವು ನೀವು ಅಳಿದರೂ
ಉಳಿದವೆಂದು ತಿಳಿದರೂ

ಸತ್ಯವೊಂದು ನಿತ್ಯವಾಗಿ ಗೆಲ್ಲುವದೋ ಬಾಳನು
ಪಂಜು ಹಿಡಿದು ಹೊರದೆಗೆವುದು ಕೆಟ್ಟ ಕೀಳು ಕಿಲುಬನು ;
ಪಾಳ್ಮಸಗಿದ ನೆಲದೊಳಂದು ಮಾಮಸಕವೆ ನಡೆವುದು
ಭೂತ ವರ್ತಮಾನ ನಡೆದ ಕಥೆಯನೆಲ್ಲ ಪೇಳ್ವುದು.
ಹೊಸತು ಬಾಳ ಹೊಸತಿಲಲ್ಲಿ ಅದೋ ಯುವಕ ವೃಂದವು
ಕೋಟಿ ಹೃದಯ ನಾಟ ತಂತಿ ಮೀಟ ಬರುವ ಬಯಕೆಯು
ಒಳಗೆ ಕುದ್ದು ಕುದ್ದು ಅದನೆ ಮೆದ್ದ ಉಗಿಯ ಶಕ್ತಿಯು

ಬೆಂಕಿಯಾಗಿ ಚಿಮ್ಮಿ ನಿನ್ನ
ಜ್ವಾಲೆಯಾಗಿ ಸುಡುವ ಮುನ್ನ
ಒಳಗು ಹೊರಗನೆಲ್ಲವಿಂದೆ
ತೊಳೆದುಕೋ ಸಮಾಜವೆ
ಧ್ಯೇಯವಾದಿಗಳನು ತುಳಿಯೆ
ನಿನ್ನ ನೀನೆ ಕೊಂದುಕೊಳುವೆ
ಸುಟ್ಟು ಬೂದಿಯಾಗುವೆ

ಕೆಲವು ಕಾಲ ಮೆರೆಯಬಹುದು ನಿನ್ನ ಉಬ್ಬಿದಬ್ಬರ
ಇಂದು ಕಟ್ಟು ಕಟ್ಟಳೆಗಳ ಸಿಗಳ ಕಳಚು ಚಚ್ಚರ
ಮಸೆದ ಗಂಡುಗೊಡಲಿ ಕೆರಳಿ ಕೊಟ್ಟ ಕೊನೆಯ ಎಚ್ಚರ
ಎನಿತೊ ಕಾಲ ಮೆಣಸನರೆದ ತಲೆಯ ತಿಂದ ಬೆಂತರ

# ಜಿ. ಎಸ್. ಸಿದ್ಧಲಿಂಗಯ್ಯ

## ಪಾಚಿಗಟ್ಟಿದೆ ತೀರ್ಥ

ಪಾಚಿಗಟ್ಟಿದೆ ತೀರ್ಥ
ಮುಲು ಮುಲುಕಿ ತೆವಳಲಾರದೆ ಹೆಳವಿ ವೈತರಣಿ
ಧೂಮ ಪ್ರಭೆಯ ಹೊಗೆನರಕದುಬ್ಬಸ
ಪ್ರೇತ ಸಂಚಾರ.
ಇಲಿ ಹೆಗ್ಗಣದ ಗೋರುತಳ ; ಪಿಚಕೆ ; ಡೊಗರು ; ಬಿಲ ; ಡೊಗರು.
ಅಜಗರವಾಗಿ ಬಿದ್ದಿದೆ ಗಂಧ ಬಿದ್ದಲ್ಲೆ ಕೊಳೆತು
ಅರವಿಂದ ತತ್ವ ರಮಣರೈಕ್ಯ ಮಹತ್ವ ರಕ್ತದ ಜೊತೆಗೆ ನುಗ್ಗದೆ
ಗೋಡೆ ಗೆದ್ದಲಿಡಿದಿದೆ—
ಬೆಳೆದಿದೆ ಮೂಗು ಹುತ್ತ.
ಇಲ್ಲಿ ಅಲ್ಲೊಂದೊಂದು ಚೇಳು ಮಂಡರಗಪ್ಪೆ
ಉರಿ ಮಂಡಲಗಳೂ ತೆವಳಿ ಮಾಡಿಕೊಂಡಿವೆ ಠಾವು.
ರಕ್ಷೆಯ ಪಾಯ ಕುಸಿದಿದೆ
ನಾಗರಕಲ್ಲು ಉರುಳಿದೆ
ಕನಕನ ಕಿಂಡಿ ಕತ್ತಲು.
ತೀರ್ಥರಸವೋ ನಗರದ ಡ್ರೈನು

ಐದು ದೇವರ ದೇಗುಲದ ತುಂಬ ಹುಡುಕಿದರು ಸಿಗರು
ಕದ್ದೇ ತಿರುಗುತ್ತಿದ್ದಾರೆ,
ಪವಿತ್ರ ಗಂಗಾತೀರದಲ್ಲೇ ಜೀವ ದೇವರ ಕೂಡ
ಬೆಳಕಿನ ಪಂಜಿನಾಟವೇ ?

ಕೊಳೆತಿರುಳು : ಬರಿನರಳಾಟ
ಇನ್ನೂ ಇರುವ ಆ ದೇವರೀದೇವರವರಿವರ ಪಟ
ಮಸಿ ಹಿಡಿದು ಜಿರಲೆ ತಿಂದಿವೆ
ಕಪಟ ತುಂಬಿದೆ,
ತೂಗು ಬಿದ್ದಿದೆ ತಲೆ ಕೆಳಗಾಗಿ
(ಒಗಟು ಬಿಡುಸುವರಿಲ್ಲ)
ಪಂಚವಿಂಶತಿ ಕಥೆಯ ಬೇತಾಳನಾಗಿ
ಬಿದೆಗಾಳಿ ಬೀಸಿ ಹರಿದು ಹೋಗಿದೆ ಕಾವಿ ಝಂಡಾ
ಹನುಮ ದೇವರ ಭಗ್ನ ಗುಡಿ ತಲೆ ಮೇಲೆಯೇ
ಪಟಪಟಿಸುತಿದೆ ದಿಕ್ಪಾಪಾಲು.
ಶುಕವು ದೇಶಭ್ರಷ್ಟ
ಹೊರಗಷ್ಟೆ ತಂದಿಟ್ಟ ಕುಂಡಕುಂಡಗಳ ವಿಧವಿಧದ ಕ್ರೋಟನ್
ರಾಗ ಭೋಗಾಲಯದ ಡಾಲಿಯಾ
ನಂದನದ ಪಾರಿಜಾತ ಸಮೇರು ಘಮಘಮ
ತಿಪ್ಪೆ ಶಾಂತಿಯ ಕೆಣಕವೂದುಗಡ್ಡಿಯ ಕಂಪು.
ನೆಲಕ್ಕೆ ಬೇರಿಳಿದರೂ ದೇಗುಲದ ಪಕ್ಕದೊಂಟಿಯಶ್ವತ್ಥ ಕೃಶವಾಗುತಿದೆ
ರಸಸ್ಖಲಿಸಿ ಗೂನಿ ತಲೆತಗ್ಗಿಸಿದೆ
ಗರ್ಭಗುಡಿ ಪೀಠಶೂನ್ಯ, ಕತ್ತಲು, ಶಂಕೆ,
ಅಗಗೋ ದೀಪಸ್ತಂಭ
ಉರುಳಿ ಬಿದ್ದಿದೆ, ಎತ್ತಿ ನಿಲ್ಲಿಸುವರಿಲ್ಲ
ಬತ್ತಿಯುರಿಯದೆಯೆ ಕೆಳಗೆ ಸೋರಿರುವ ಜಿಡ್ಡು ಜಿಡ್ಡೆಣ್ಣೆ ಕೊಳೆ
ಜಿಡ್ಡಿನೊಳಗುರುಳಿ ಸತ್ತ ಸಾಯುತ್ತಿರುವ
ಜೀವ ಜೀವಾಣು ಹೆಣ ಹೆಣರಾಸಿ
ಹೊಡೆದಿದೆ ಸದಾನಾತ.

* * *

ಎತ್ತಿ ನಿಲ್ಲಿಸು ದೀಪ, ದೀಪಸ್ತಂಭ
ಕುಂಡಗಳು ಬೇಡ ; ಇನ್ನು ಇದೆ ಅಶ್ವತ್ಥ.

# ಭಾರತೀಯುನಿಗೆ

1

ದಾಸ್ಯದಲ್ಲೆ ಬಿದ್ದಿದ್ದು
ಗೆದ್ದಲಿಡಿಯಿತೇನು ಬುದ್ಧಿ ?
ತಲೆಯೋ ಹೋದೀತು ಅಣ್ಣ
ಅದಕಾದರು ದಮ್ಮಯ್ಯ ಬಳಸು
ಜೊಂಪೇರಿದ ಕಾಲು ಎತ್ತು
ಎಲ್ಲಿ, ಒಮ್ಮೆ ಝಾಡಿಸು.
ಬೆಂಕಿ ಬಿದ್ದ ವೇಳೆಯಲ್ಲಿ
ಭಾವಿಯುಗೆವ ಬುದ್ಧಿ ಸಾಕು
ಭುಜ ಕೊಡವಿಕೊ ಏಳು
ಸರಪಳಿಗಳು ಅಲ್ಲ ; ಅವು
ಇದ್ದ ಗುರುತು ; ಕೈ ಸವರಿಕೊ
ಏಳು ಪುರುಷನಾಗು.
ಕಣ್ಣು ತೆರೆ, ತೆರೆ ಬಾಗಿಲು
ಸುತ್ತಲಿಂದ ಬೆಳಕು ಬರಲಿ
ಐದು ವರ್ಷಕ್ಕೊಮ್ಮೆಯಲ್ಲ
ದಿನ ದಿನ ದಿನ ನೀ ಸ್ವತಂತ್ರ
ಏಳಬೇಕು ಇನ್ನು.

2

ಬಿಡುಗಡೆ ರಹದಾರಿಯಲ್ಲ.
ಬಂಗಾರದ ಮೊಟ್ಟೆ ಕೋಳಿ—
ಯಂತು ಅಲ್ಲ ; ನಡೆಯುವಲ್ಲಿ
ನೆರಳಿಲ್ಲ.
ಮುಳ್ಳುಕಲ್ಲು ಹುಳ ತುಂಬಿವೆ
ಕೆರಡಿ ಕಿರುಬ ಚಿರತೆ ತೋಳ
ಗುಳ್ಳೇನರಿ ಗೋಸುಂಬೆ

ಇವರ ಮಧ್ಯೆ ಏಗಬೇಕು
ವ್ಯಕ್ತಿ ವ್ಯಕ್ತಿಯಲ್ಲು ಸಹರಾ
ಗೋಬಿ ಮರಳು ಘೂರ್ಮಿಸುತಿದೆ
ಬಾಳಿನ ತಲಪುರಿಗೆಗಳು
ಹಳ್ಳ ಹತ್ತಿ ಹೋಗುತಿವೆ
ಧರ್ಮ ಗಿರ್ಮವೆಂಬುದೆಲ್ಲ
ದೇಗುಲಗಳ ಗೋಡೆಗಾಗಿ
ಎಲ್ಲವಿವೆ ತೋರಲಿಕ್ಕೆ
ಬದುಕೊಂದೇ ಇಲ್ಲವಾಗಿ
ಪ್ರಾಗ್ವೈಭವದವಲು ಇಳಿದು
ಇನ್ನಾದರು ಬದುಕಬೇಕು.

3

ಸಂಭವಾಮಿ ಎಂದುದಕ್ಕೆ
ಜೋತುಬಿದ್ದು ಜೋತುಬಿದ್ದು
ಬಹಳ ದಿನದ ಕಸ ಬಿದ್ದಿದೆ
ಹಳೆ ಕೋಣೆಯ ಗುಡಿಸಿದಂತೆ
(ಗುಡಿಸುತಿರುವುದಿದೇ ಮೊದಲು !)
ಗುಡಿಸಬೇಕು.
ಅವರಿರುವರು ಇವರಿರುವರು
ನನ್ನೊಬ್ಬನದೇನು ಮಹಾ
ಎಂದರದೇ ಹಾಲಿನ ಕಥೆ ;
ನೀನಾದರೂ ಪೊರಕೆಯಾಗು
ಬೃಂದಾವನ ಹಾಳ್ಗೆಡೆದಿದೆ ;
ನಂದನದಲಿ ಕಳ್ಳಿಜಾಲಿ ನೆಗ್ಗಲು.
ಬೆವರಿನ ಅಭಿಷೇಕವಾಗಿ
ಆಡಬೇಕು ನೇಗಿಲು.
ದೇಗುಲದಲಿ ಇಲಿ ಸೇರಿವೆ
ಗೋಪುರಕೆ ಕಿಲುಬೇರಿದೆ
ಗರ್ಭಗುಡಿಗೆ ಜೇಡಬಲೆ
[ಇನ್ನೇನಿದೆ ನಿನ್ನ ತಲೆ ?]
ಪವಿತ್ರತೀರ್ಥ ಪಾಚಿಗಟ್ಟೆ

ಕೊಳಕಾಗಿದೆಯಲ್ಲ.
ಮುಚ್ಚಿಕೊಂಡೆ ಹೋಯಿತಲ್ಲ
ಕನಕನ ಕಿಂಡಿ
ಕಿಟಕಿ ತೆರೆ ಬೆಳಕು ಬರಲಿ
ಕಪಟ ಗೂಬೆ ಹೊರ ಹೋಗಲಿ
ಶುಕ ಆಡಲಿ
ಸನಾತನ ಅಶ್ವತ್ಥ ಇರಲಿ
ದ್ವಿಜಕುಲಕ್ಕೆ ಆಶ್ರಯ
ದೇವರ ಪಟ ಧೂಳಿಡಿದಿದೆ
ಒರೆಸು, ಕಣ್ಣುಜ್ಜಿಕೋ ನೋಡು
ಬುದ್ಧ ಗಾಂಧಿ ಬೆಳಕಾಗಲಿ
ಕತ್ತಲ ಅಭ್ಯಾಸವೇನು ?
ಬೆಳಕಿಗೆ ಕಣ್ ಪಳಗಿಸಿಕೋ
ಕಣ್ಣು ತೆರೆ ನೋಡು ;
ಉತ್ತರದ ಹಿಮಾಲಯಾ
ಗಂಗೆ ಯಮುನೆ ಪುಣ್ಯಾವಲಯ
ಈ ಈ ಜಲ ಈ ಈ ನೆಲ
ಎಲ್ಲ ಎಲ್ಲ ನಿನ್ನವಲಾ !
ನೀನೆ ಇನ್ನು ರಾಷ್ಟ್ರದೈವ
ಭಾಗ್ಯ ಗಂಗೆ ಭಗೀರಥ
ಕೈಯನೆತ್ತು ಗೋರುನೆಲ
ಚಿಲುಮೆ ತಬ್ಬಲಿಹುದು ನಿನ್ನ
ಈ ಕೆರೆ ಮತ್ತೀತೊರೆ
ಈ ಈ ಹೊಳೆ
ನೀ ಕರೆದೆಡೆ ಕಾಲುವೆ
ಮಣ್ಣಿನ ಕಣಕಣದೊಳು
ತಾಯಾಗುವ ಕನಸೆ ಇದೆ
ಅಮರಾವತಿ ಕನವರಿಸಿದೆ
ಗೋಪುರಗಳ ಮನಸೆ ಇದೆ
ಕಣ್ದೆರೇ ನೀ
ಮೈದೆರೆ ನೀ
ತೆರೆಯಲಿಹುದು ಹೊಸದಿಗಂತ.

# ಪಿ. ಲಂಕೇಶ್

## ಅವ್ವ

ನನ್ನವ್ವ ಫಲವತ್ತಾದ ಕಪ್ಪು ನೆಲ
ಅಲ್ಲಿ ಹಸಿರು ಪತ್ರದ ಹರವು, ಬಿಳಿಯ ಹೂ ಹಬ್ಬ,
ಸುಟ್ಟಷ್ಟು ಕಸುವು, ನೊಂದಷ್ಟು ಹೂ ಹಣ್ಣು
ಮಕ್ಕಳೊದ್ದರೆ ಅವಳ ಅಂಗಾಂಗ ಪುಲಕ ;
ಹೊತ್ತ ಬುಟ್ಟಿಯ ಇಟ್ಟು ನರಳಿ ಎವೆ ಮುಚ್ಚಿದಳು ತೆರೆಯದಂತೆ

ಸಲ್ಲ ಜೋಳವ ಎತ್ತಿ ಅಪ್ಪನ್ನ ಮೆಚ್ಚಿಸಿ ತೋಳ ಬಂದಿಯ ಗೆದ್ದು,
ಹೆಂಟಿಗೊಂದು ಮೊಗೆ ನೀರು ಹಿಗ್ಗಿ ;
ಮೆಣಸು, ಅವರೆ, ಜೋಳ, ತೊಗರಿಯ ಹೊಲವ ಕೈಯಲ್ಲಿ ಉತ್ತು,
ಹೂವಲ್ಲಿ ಹೂವಾಗಿ ಕಾಯಲ್ಲಿ ಕಾಯಾಗಿ
ಹೆಸರು ಗದ್ದೆಯ ನೋಡಿಕೊಂಡು,
ಯೌವನವ ಕಳೆದವಳು ಚಿಂದಿಯ ಸೀರೆ ಉಟ್ಟುಕೊಂಡು.

ಸತ್ತಳು ಈಕೆ :
ಬಾಗು ಬೆನ್ನಿನ ಮುದುಕಿಗೆಷ್ಟು ಪ್ರಾಯ ?
ಎಷ್ಟು ಗಾದಿಯ ಚಂದ್ರ, ಒಲೆಯೆದುರು ಹೋಳಿಗೆಯ ಸಂಭ್ರಮ ?
ಎಷ್ಟು ಸಲ ಈ ಮುದುಕಿ ಅತ್ತಳು
ಕಾಸಿಗೆ, ಕೆಟ್ಟ ಪೈರಿಗೆ, ಸತ್ತ ಕರುವಿಗೆ ;
ಎಷ್ಟು ಸಲ ಹುಡುಕುತ್ತ ಊರೂರು ಅಲೆದಳು
ತಪ್ಪಿಸಿಕೊಂಡ ಮುದಿಯ ಎಮ್ಮೆಗೆ ?

ಸತಿ ಸಾವಿತ್ರಿ, ಜಾನಕಿ, ಊರ್ಮಿಳೆಯಲ್ಲ ;
ಚರಿತ್ರೆ ಪುಸ್ತಕದ ಶಾಂತ, ಶ್ವೇತ, ಗಂಭೀರೆಯಲ್ಲ ;
ಗಾಂಧೀಜಿ, ರಾಮಕೃಷ್ಣರ ಸತಿಯರಂತಲ್ಲ ;
ದೇವರ ಪೂಜಿಸಲಿಲ್ಲ, ಹರಿಕತೆ ಕೇಳಲಿಲ್ಲ ;
ಮುತ್ತೈದೆಯಾಗಿ ಕುಂಕುಮ ಕೂಡ ಇಡಲಿಲ್ಲ.

ಬನದ ಕರಡಿಯ ಹಾಗೆ
ಚಿಕ್ಕ ಮಕ್ಕಳ ಹೊತ್ತು
ಗಂಡನ್ನ ಸಾಕಿದಳು ಕಾಸು ಗಂಟಿಕ್ಕಿದಳು
ನೊಂದ ನಾಯಿಯ ಹಾಗೆ ಬೈದು, ಗೊಣಗಿ, ಗುದ್ದಾಡಿದಳು ;

ಸಣ್ಣತನ, ಕೊಂಕು, ಕೆರೆದಾಟ ಕೋತಿಯ ಹಾಗೆ ;
ಎಲ್ಲಕ್ಕೆ ಮನೆತನದ ಉದ್ಧಾರ ಸೂತ್ರ.
ಈಕೆ ಉರಿದೆದ್ದಾಳು
ಮಗ ಕೆಟ್ಟರೆ, ಗಂಡ ಬೇರೆ ಕಡೆ ಹೋದಾಗ ಮಾತ್ರ.

ಬನದ ಕರಡಿಗೆ ನಿಮ್ಮ ಭಗವದ್ಗೀತೆ ಬೇಡ ;
ನನ್ನವ್ವ ಬದುಕಿದ್ದು
ಕಾಳು ಕಡ್ಡಿಗೆ, ದುಡಿತಕ್ಕೆ, ಮಕ್ಕಳಿಗೆ ;
ಮೇಲೊಂದು ಸೂರು, ಅನ್ನ ರೊಟ್ಟಿ, ಹಚಡಕ್ಕೆ ;
ಸರೀಕರ ಎದುರು ತಲೆಯೆತ್ತಿ ನಡೆಯಲಿಕ್ಕೆ.

ಇವಳಿಗೆ ಮೆಚ್ಚುಗೆ, ಕೃತಜ್ಞತೆಯ ಕಣ್ಣೀರು :
ಹೆತ್ತದ್ದಕ್ಕೆ, ಸಾಕಿದ್ದಕ್ಕೆ ; ಮಣ್ಣಲ್ಲಿ ಬದುಕಿ
ಮನೆಯಿಂದ ಹೊಲಕ್ಕೆ ಹೋದಂತೆ
ತಣ್ಣಗೆ ಮಾತಾಡುತ್ತಲೇ ಹೊರಟು ಹೋದದ್ದಕ್ಕೆ

# ಕೆ. ಎಸ್. ನಿಸಾರ್ ಅಹಮದ್

## ಕುರಿಗಳು, ಸಾರ್ ಕುರಿಗಳು

ಕುರಿಗಳು, ಸಾರ್ ಕುರಿಗಳು :
ಸಾಗಿದ್ದೇ
ಗುರಿಗಳು
ಮಂದೆಯಲ್ಲಿ ಒಂದಾಗಿ, ಸ್ವಂತತೆಯೇ ಬಂದಾಗಿ
ಇದರ ಬಾಲ ಅದು ಮತ್ತೆ ಆದರ ಬಾಲ ಇದು ಮೂಸಿ
ದನಿ ಕುಗ್ಗಿಸಿ, ತಲೆ ತಗ್ಗಿಸಿ
ಹುಡುಕಿ ಹುಲ್ಲು ಕಡ್ಡಿ ಮೇವು, ಅಂಡಲೆಯುವ ನಾವು, ನೀವು
ಕುರಿಗಳು, ಸಾರ್, ಕುರಿಗಳು :
ನಮಗೊ ನೂರು ಗುರಿಗಳು
ಎಡದಿಕ್ಕಿಗೆ, ಬಲದಿಕ್ಕಿಗೆ, ಒಮ್ಮೆ ದಿಕ್ಕು ಪಾಲಾಗಿ,
ಒಮ್ಮೆ ಅದೂ ಕಳೆದುಕೊಂಡು ತಾಟಸ್ಥ್ಯದಿ ದಿಕ್ಕೆಟ್ಟು
ಹೇಗೆ ಹೇಗೊ ಏಗುತಿರುವ,
ಬರೀ ಕಿರುಚಿ ರೇಗುತಿರುವ,
ನೊಣ ಕೂತರೆ ಬಾಗುತಿರುವ,
ತಿನದಿದ್ದರು ತೇಗುತಿರುವ,
ಹಿಂದೆ ಬಂದರೊದೆಯದ, ಮುಂದೆ ಬರಲು ಹಾಯದ
ಅವರು, ಇವರು, ನಾವುಗಳು
ಕುರಿಗಳು, ಸಾರ್, ಕುರಿಗಳು.

ಮಂದೆಯಲ್ಲಿ ಎಲ್ಲವೊಂದೆ ಆದಾಗಲೆ ಸ್ವರ್ಗ ಮುಂದೆ
ಅದಕಿಲ್ಲವೆ ನಾವುತ್ತರ ?
ಮೆದುಳಿನಲ್ಲಿ ತಗ್ಗೆತ್ತರ,

ಹಿರಿದು, ಕಿರಿದು ಮಾಯಿಸಿ,
ಒಬ್ಬೊಬ್ಬರಿಗಿರುವ ಮೆದುಳ ಸ್ವಾರ್ಥದ ಉಪಯೋಗದಿಂದ
ಇಡಿ ಮುಂದೆಗೆ ಹಾಯಿಸಿ,
ಹೊಟ್ಟೆ ಬಟ್ಟೆಗೊಗ್ಗದಂಥ ಕಲೆಯ ಕರ್ಮಕಿಳಿಯದಂತೆ
ತಲೆ ಬೆಲೆಯ ಸುಧಾರಿಸಿ
ಬಿಳಿಕಪ್ಪಿನ ದ್ವಂದ್ವಗಳಿಗೆ ಮಾಡಿಸಿ ಸಮಜಾಯಿಷಿ
ನಮ್ಮ ಮೆದುಳು ಶುದ್ಧಿಯಾಗಿ, ಬುದ್ಧಿ ನಿರ್ಬುದ್ಧಿಯಾಗಿ,
ಕೆಂಬಣ್ಣವನೊಂದೆ ಪೂಸಿ,
ಅದರ ಬಾಲ ಇದು ಮತ್ತೆ ಇದರ ಬಾಲ ಅದು ಮೂಸಿ
ನಡೆವ ನಮ್ಮೊಳಿಲ್ಲಿ ಬಿರುಕು ?

ನಮ್ಮ ಕಾಯ್ವ ಕುರುಬರು :
ಪುಟಗೋಸಿಯ ಮೊನ್ನೆ ತಾನೆ ಕಿತ್ತು ಪಂಚೆಯುಟ್ಟವರು
ಶಾನುಭೋಗ ಗೀಚಿದ್ದಕ್ಕೆ ಹೆಬ್ಬೆಟ್ಟನು ಒತ್ತುವವರು.
ಜಮಾಬಂದಿಗಮಲ್ದಾರ ಬರಲು ನಮ್ಮಳೊಬ್ಬನನ್ನ
ಮೆಚ್ಚಿ, ಮಸೆದ ಮಚ್ಚು ಹಿರಿದು ಕಚಕ್ಕೆಂದು ಕೊಚ್ಚಿ ಕತ್ತ,
ಬಿರಿಯಾನಿಯ ಮೆಹರುಬಾನಿ ಮಾಡಿ ಕೈಯ ಜೋಡಿಸುತ್ತ
ಕಿಸೆಗೆ ಹಸಿರು ನೋಟು ತುರುಕಿ, ಮುಡಿಗೆ ಬೆಣ್ಣೆ ಹಚ್ಚುವರು
ಬಿಸಿಲಿನಲ್ಲಿ ನಮ್ಮ ದೂಡಿ, ಮರದಡಿಯಲ್ಲಿ ತಾವು ಕೂತು
ಮಾತು, ಮಾತು, ಮಾತು, ಮಾತು.
ಮಾತಿನ ಗೈರತ್ತಿನಲ್ಲೆ ಕರಾಮತ್ತು ನಡೆಸುವವರು.
ನಮ್ಮ ಮೈಯ ತುಪ್ಪಟವ ರವಷ್ಟು ಬಿಡದೆ ಹಾಗೆ ಸವರಿ
ಕಂಬಳಿಗಳ ನೇಯುವಂಥ ಯೋಜನೆಗಳ ಹಾಕುವವರು.
ಮಾರಮ್ಮನ ಮುಡಿಗೆ ಕೆಂಪುದಾಸವಾಳ ಆಯುವವರು.
ಬೆಟ್ಟದಾಟ ಕಿರುಬ ನುಗ್ಗಿ, ನಮ್ಮೊಳಿಬ್ಬರನ್ನು ಮುಗಿಸಿ
ನಾವು 'ಬ್ಯಾ ಬ್ಯಾ' ಎಂದು ಬಾಯಿ ಬಾಯಿ ಬಡಿದುಕೊಂಡು
ಬೊಬ್ಬೆ ಹಾಕುತ್ತಿದ್ದರೂ
ಚಕ್ಕಭಾರ ಆಟದಲ್ಲೆ ಮಗ್ನರು ಇವರೆಲ್ಲರು
ನಮ್ಮ ಕಾಯ್ವ ಗೊಲ್ಲರು.

ದೊಡ್ಡಿಯಲ್ಲಿ ಕೂಡಿಹಾಕಿ ನಿಲ್ಲಲಿಲ್ಲ, ಕೂರಲಿಲ್ಲ,
ಎದ್ದರೆ ಸರಿದಾಡಲಿಲ್ಲ, ಬಿದ್ದರೆ ಹರಿದಾಡಲಿಲ್ಲ,

ದೀಪದ ದೌಲತ್ತು ಇಲ್ಲ,
ಗಾಳಿಯ ಗಮ್ಮತ್ತು ಇಲ್ಲ,
ಕಿಂಡಿಯಿಂದ ತೆವಳಬಂದ ಗಾಳಿ ಕೂಡ ನಮ್ಮದೇನೆ :
ನಮ್ಮ ಮಂದೆ ಕುರಿಯ ಸುಲಿದು ಆಚೆ ಅಲ್ಲಿ ಉಪ್ಪು ಸವರಿ
ಒಣಗಲಿಟ್ಟ ಹಸಿತೊಗಲಿನ ಬಿಸಿ ಬಿಸಿ ಹಬೆವಾಸನೆ,
ಇರಿಯತಿಹುದು ಮೂಗನೆ !
ಕೊಬ್ಬಿರುವೀ ಮಬ್ಬಿನಲ್ಲಿ, ಮೈನಾತದ ಗಬ್ಬಿನಲ್ಲಿ
ಇದರ ಉಸಿರು ಅದು ಮತ್ತೆ ಅದರ ಉಸಿರು ಇದು ಮೂಸಿ
ಹೇಸಿದರು ನಿಭಾಯಿಸಿ,
ತಾಳ್ಮೆಯನೆ ದಬಾಯಿಸಿ,
ನಮ್ಮ ನಾವೆ ಅಂದುಕೊಂಡೊ, ಉಗುಳುನುಂಗಿ ನೊಂದುಕೊಂಡೊ,
ನಂಬಿಕೊಂಡೊ ಏಗುತಿರುವ ನಾವು, ನೀವು ಇಡೀ ಹಿಂಡು
ಕುರಿಗಳು, ಸಾರ್, ಕುರಿಗಳು.
ತಳವೂರಿದ ಕುರುಬ ಕಟುಕನಾದ ; ಅವನ ಮಚ್ಚೊ ಆಹ !
ಏನು ಝುಳಪು, ಏನು ಹೊಳಪು, ಏನು ಜಾದು, ಏನು ಮೋಹ
ಆ ಹೊಳಪಿಗೆ ದಂಗಾಗಿ, ಕಣ್ಣಿಗದೇ ರಂಗಾಗಿ
ಒಳಗೊಳಗೇ ಜಂಗಾಗಿ
ಕಣ್ಣು ಕುಕ್ಕಿ, ಸೊಕ್ಕಿರುವ, ಹೋಗಿ ಹೋಗಿ ನೆಕ್ಕಿರುವ
ಕತ್ತನದಕೆ ತಿಕ್ಕಿರುವ,
ನಾವು, ನೀವು, ಅವರು, ಇವರು
ಕುರಿಗಳು, ಸಾರ್, ಕುರಿಗಳು !
ಮಚ್ಚಿನ ಆ ಮೆಚ್ಚಿನಲ್ಲಿ, ಅದರಾಳದ ಕೆಚ್ಚಿನಲ್ಲಿ
ಮನೆ ಮಾಡಿವೆ ಹುಚ್ಚಿನಲ್ಲಿ
ನಮ್ಮೆಲ್ಲರ ಗುರಿಗಳು !

ಕುರಿಗಳು, ಸಾರ್, ಕುರಿಗಳು........

೨೮೧/ಕೆ. ಎಸ್. ನಿಸಾರ್ ಅಹಮದ್

# ಅನಾಥರು

ದೇಭ ಕೇಳು ; ಈಗಷ್ಟೆ ಕಂಡೆ—
ಸುಮಾರು ನೂರು ನೂರಿಪ್ಪತ್ತಿರಬಹುದು ಸಂಖ್ಯೆ
ಮೂರರಿಂದ ಹನ್ನೆರಡರವರೆಗಿರಬಹುದು ವಯಸ್ಸು
ಅದಕ್ಕೆ ತಕ್ಕಂತೆ, ಅಥವಾ ಎತ್ತರಕ್ಕೆ ತಕ್ಕಂತೆ
ಎಡ ಬಲ ನೂಡುತ್ತ, ಹರಕು ಹರಕಾದರೂ,
ಬಣ್ಣ ಮಾಸಿದ್ದರೂ, ಬೆಳಗ್ಗೆಯಷ್ಟೆ ಒಗೆದಂಥ
ಸಾತ್ವಿಕ ಯೂನಿಫಾರ್ಮಿನಲ್ಲಿ ನಡೆದ ಮಕ್ಕಳ–ನಿನ್ನ ದೇಶ ಮಕ್ಕಳ
ನೋಡಬೇಕಿತ್ತು ನೀನು, ಹಶ್ರಾಶ್ರು ಹರಿಸಿ
ಭಾವಗದ್ಗದಿತನಾಗಿ, ತಡೆಯಲಾರದೆ ಸ್ಫೂರ್ತಿ
ದೇಶ, ಸಂಸ್ಕೃತಿ, ಭವಿಷ್ಯಗಳ ಮೇಲೆ
ಭಾಷಣ ಬಿಗಿದು ಬಿಡುತ್ತಿದ್ದೆ. ತುಂಬು ಬೀದಿಯಲ್ಲೇ ನಿಲ್ಲಿಸಿ ;
ಅಷ್ಟೊಂದು ಹೃದಯಂಗಮ ನಿನ್ನ ದೇಶದ ಮಕ್ಕಳ ದೃಶ್ಯ
ರೂಮಿಗೆ ಬಂದೊಡನೆ ನಾನೇ ಗಳಗಳ ಅತ್ತೆ
ನೆಂದ ಮೇಲೆ ಇನ್ನು ನಿನ್ನ ಕೇಳಬೇಕೆ? ಅಳುವುದು, ಅದೂ
ದೇಶಕ್ಕಾಗಿ ಅಳುವುದು ಬರೀ ನಿನ್ನ, ನಿನ್ನಂಥವರ
ಹಕ್ಕೆಂದು ನಂಬಿರುವ ನೀನು ನಾನತ್ತೆನೆಂದರೆ
ನಂಬಲಾರೆ. ನಂಬಿದರೂ ಆಶ್ಚರ್ಯ ಪಡದಿದ್ದರೆ
ಅದೇ ನನಗೆ ಮಹದಾಶ್ಚರ್ಯ. ಹೌದು ದೇಭ,
ನನ್ನಂಥವರೂ ಅಳುತ್ತಾರೆ, ಆದರೆ ಮರೆಯಲ್ಲಿ
ಯಾರಾದರೂ ಕಣ್ಣು ಕೆಂಪಾದದ್ದು ಕಂಡು ವಿಚಾರಿಸಿದರೆ
ಧೂಳು ಬಿತ್ತೆನ್ನುತ್ತಾರೆ.
ಅದಿರಲಿ, ನಾನೇಕೆ ಅತ್ತೆ ?
ಆ ಮುಖಗಳ ನೋಡಿ, ಅವುಗಳು ಹುಟ್ಟಿದ ಗುಪ್ತಕೋಣೆ
ಹೆತ್ತವಳು, ಹುಟ್ಟಿಸಿದವ, ಭವಿಷ್ಯ ಗೈರು ಹಾಜರಾಗಿದ್ದುದ ನೋಡಿ
ನನ್ನ, ನನ್ನಾಕೆಯ ಮುದ್ದಲ್ಲಿ ಮೊಳೆಯುತ್ತಿರುವ ನನ್ನ ಮಕ್ಕಳ
ನೆನೆದು, ಅವರ ಮುಖಗಳ ಇವರೊಂದಿಗೆ ಹೋಲಿಸಿ ನೋಡಿ
ಇವರೆಲ್ಲ ನಿನ್ನ ದೇಶದ ಮಕ್ಕಳು, ನಿನ್ನ ಮಕ್ಕಳು
ಕೊನೇ ಪಕ್ಷ ಒಂದೆರಡಾದರೂ, ಆದರೆ ಗುಂಪಲ್ಲಿ ಅವರ

ಗುರುತಿಸಲಾರೆ, ಕೊನೆಗೆ ಪ್ರತ್ಯೇಕ ನಿಲಿಸಿದರೂ
ಗುರುತಿಸಲಾರರು ಅವರೂ ನಿನ್ನ. ಅವರು ಗುರುತಿಸುವುದು
ಹುಟ್ಟು, ಭವಿಷ್ಯಗಳ ಕಗ್ಗತ್ತಲೆಯ,
ಅದಕ್ಕಿಂತ ಹೆಚ್ಚು ಖಚಿತವಾದ ರಿವ್ಯಾಂಡ್
ಹೋಮಿನ ಬಾಳಿನ ಅರೆಗತ್ತಲೆಯ.

೨೮೩/ಕೆ. ಎಸ್. ನಿಸಾರ್ ಅಹಮದ್

## ಅರವಿಂದ ನಾಡಕರ್ಣಿ

### ಬೀದಿ ಸಂಸಾರಿಗಳು

ಯಾರು ನೋಡುವರು ನಮ್ಮನ್ನು
ಬೇರು ಸಮೇತ ಕಿತ್ತೊಗೆದ ಈ ಗಿಡಗಂಟಿಗಳನ್ನು
ಕಾಲಿಗೆಟಕಿ ಕುಟುಕುವ ಮುಳ್ಳು ದಂಟುಗಳನ್ನು
ಸೂಟು ಬೂಟು ಸಿಗರೇಟು ಸಾಹೇಬ ?
ಕಾರು ಗಾಜೊಳಗಿಂದ ಮ್ಯಾಟನೀ ದೇವತೆ ನೋಡಿ
ಭಕ್ತಿರಸ ಕಾರುವ ಕುಬೇರ ಸಂತತಿ ?
ಬ್ಲಾಕಿನಲ್ಲೋ ಚಾಲಿನಲ್ಲೋ ಎರಡೂಟದ ಭಾಗ್ಯ
ಚಪ್ಪರಿಸಿ ಬದುಕುವ ಮನುಕುಲ ದೀಪಕರೇ
ಛೀ. ಯಾರು ನೋಡುವರು ನಮ್ಮನ್ನು
ಫುಟ್‌ಪಾತಿನಲ್ಲಿ ಮನೆಮಾಡಿ ಫುಟ್‌ಪಾತಿನಲ್ಲಿ ಸಾಯುವವರನ್ನು ?
ನೋಡುವುದಾದರೆ ಸ್ವಾಮೀ ಸರಿಯಾಗಿ ನೋಡಿ
ಜಾರುವಲ್ಲಿ ನಾರುವಲ್ಲಿ ಹತ್ತಿಪ್ಪತ್ತು ಹಡಬಿಟ್ಟ ಎಡೆಯಲ್ಲಿ
ಮುರುಕು ತಗಡಿನ ಹರಕು ಟಾರ್ಪೋಲಿನ್ ತಂಬು
ಚಿಂದಿ ಬೊಂತೆಗಳ ಹಸೆದಿಂಬು
ಮೂಲೆ ನೆಳಲಲ್ಲಿಯ ಹೊಂಡಕುಂಡ ಗಂಗೋತ್ರಿಯಲ್ಲಿ
ಚಕ ಚಕ ಮಿಂದಾಗ ಹಬ್ಬ. ಬಿಸಾಕಿದನ್ನ
ಬಕ ಬಕ ಮುಕ್ಕಿದಾಗ ಹರಿದಿನ. ಉಳಿದೆಲ್ಲ ಕ್ಷಣ
ಕುದಿವೊಡಲಕಿಚ್ಚು ಸಹಿಸುವದೆ ಬದುಕಿನ ಕೆಚ್ಚು
ಬ್ಲಾಕು ಸೋಫಾ ಮಂಚ ಆಕಾಶತಾರೆಯ ಮಿಂಚು
ನಿರಕ್ಷರತೆ ನಿರ್ಗತಿಕೆಯ ತಾಯತ ಕವಚ
ಕಟ್ಟಕೊಂಡು ಬ್ರೆಡ್ಡು ತುಣುಕಿಗೆ ಕೈಯೊಡ್ಡಿ

ನಿರಂತರ ಮೃತ್ತಿಕಾಸನ ಶಾಪ ಹೊತ್ತು
ನರಳಾಡುವೀ ನರಜಂತುಗಳನ್ನು ಚೆನ್ನಾಗಿ ನೋಡಿ.
ಸಾಕು ನಿಮ್ಮೀ ದಲಿತೋದ್ಧಾರಕ ಘೋಷಣೆ——
ಭಾಷಣದಲ್ಲಿ ಮಂತ್ರಿಸಿ ಒಗೆದ ವಚನ
ಸುರಿಸಿದ ನಕ್ರಾಶ್ರು
ಗಂಟಲ ಬಿರಿದ ಕವನ ಗಂಟು ಸಾಕಿವೆಲ್ಲ
ಸಾಕೆಮಗೆ ಫುಟಪಾಥಿನಮರಾವತಿ ಪಟ್ಟ
ಸತ್ತರೂ ಸ್ವರ್ಗ ನರಕದ ಫುಟಪಾಥು
ಮತ್ತೆ ಹುಟ್ಟಿದರೂ ಪಟ್ಟಣದ ಫುಟಪಾಥು
ಗೋಗರೆಯುವ ಮೊರೆಯುವ ಇರಿಯುವ
ಕೀಟಲೆ ಕೀಟಗಳು ತಳಮಳಿಸಿ ತಳವೂರಸಿ
ಸಾಯುವಾಗ
ನೋಡುವವರಾರು ನಮ್ಮನ್ನು ?
ಯಾರು ನೋಡುವರು ನಮ್ಮನ್ನು ?
ನೋಡಿ ಚನ್ನಾಗಿ ನಾವು ಹೊತ್ತ ಗಾಯ ವ್ಯೈಯ ತುಂಬ
ಮತ್ತೆ ಹಾಡಿ ಮನುಕುಲ ವಿಕಾಸದ ಸವಿಕಬ್ಬ

## ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

### ಒಂದು ಚಿತ್ರ

ರಸ್ತೆ ನಡುವೆ ರಾಗಿ ಚೆಲ್ಲಿಕೊಂಡು
ಬಾಚಿ ಎತ್ತಲೂ ಆಗದೆ ನಿಂತಿದ್ದಾನೆ ಹುಡುಗ
ಬಾಯೊಡೆದ ಚೀಲ ಬಿದ್ದಿದೆ ಮೇಲೆಯೇ ಒಂದೆ ಸಮ
ಕಾರು ಸ್ಕೂಟರ್ ಲಾರಿ
ಈಟಿ ದನಿಯಲಿ ಮೈಲಿ ಎಚ್ಚರಿಕೆ ಚೀರಿ

ಬಿದ್ದರಾಗಿಯ ಮೇಲೆ ಒದ್ದೆ ದೃಷ್ಟಿಯ ಚೆಲ್ಲಿ
ನಿಂತ ಹುಡುಗನ ದೀನ ನೋಟ
ಎದುರೆ ಬಿದ್ದಿದೆ ಮಣ್ಣುಪಾಲಾಗಿ ಮನೆಯವರ
ಅಂದಿನೂಟ
ಏನೋ ತಲ್ಲಣ ಭೀತಿ ಕವಿಸಿ ಕರಿಗಪ್ಪಾದ
ನೋವಿನ ಮುಖ
ಗಾಜಿನಾಲಿಗಳಂಥ ಕಣ್ಣು ಜಿನುಗುತ್ತಿವೆ
ಅನಂತ ದುಃಖ

ರಾಗಿ ಚೆಲ್ಲಿದ್ದಕ್ಕೆ ಕೂಗಿ ಗದರಿಸುತ್ತಿರುವ
ಪೋಲೀಸು ಪೇದೆ
ಬರಲಿರುವ ಕತ್ತಲೆಯ ಕೂಗಿ ಕರೆಯುತ್ತಿರುವ
ಗಿರಣಿ ಕೊರಳಿನ ಕಪ್ಪು ಬೇಗೆ
ಬಾನ ಮೈ ತುಂಬೆಲ್ಲ ಬಿಳಿತೊನ್ನ ಹಚ್ಚಿರುವ
ತೇವವಿಲ್ಲದ ಮುಗಿಲ ಕ್ರೌರ್ಯ
ಬಡವರೊಡಲಿನ ಕಿಚ್ಚಿ ಅಚ್ಚಾಗಿ ಆಕಾಶದಂಚಿನಲಿ ಸಂಜೆ ಸೂರ್ಯ

# ಬರೆಯದ ವಾಣಿಗಳು

ಯಾರೋ ಬೇಡುವ ಯಾರೋ ಹಾಡುವ
ಬರೆಯದ ವಾಣಿಗಳು
ಯಾರೋ ಮುಗಿಲಲಿ ಯಾರೋ ಕಣಿವೆಯಲಿ
ಹೊಂದದ ಚಿತ್ರಗಳು.

ತಿನ್ನಲಾರದೆ ಅನ್ನವ ಮೋರಿಗೆ
ತೂರುವ ಹಸ್ತಗಳು
ಮಣ್ಣಿನ ಜೊತೆ ಬೆರೆತನ್ನವೆ ಎಷ್ಟೋ
ಒಡಲಿಗೆ ವಸ್ತುಗಳು
ಚಿನ್ನದ ಭಾರಕೆ ತಾರಾಡುವ ಮೈ
ಸರಿಯುವ ಠೀವಿಗಳು
ಹೊದಿಯಲು ಹಚ್ಚಡ ಇಲ್ಲದೆ ಚಳಿಯಲಿ
ನಡುಗುವ ದೇಹಗಳು.

ಉಣ್ಣುವ ಬಾಯಿಗೆ ದುಡಿಯುವ ಕೈಗಳು
ಅವರವರಿಗೆ ಇರಲಿ
ಅನುಭವಿಸುವ ಸುಖವೆಲ್ಲಕೆ ತಮ್ಮದೆ
ಬೆವರಿನ ಬೆಲೆ ಇರಲಿ
ಜೀವ ಜೀವಗಳ ನಡುವೆ ಎದ್ದ
ಗೋಡೆಗಳ ಪಾಯ ಬಿರಿದು
ಉರುಳಿ ನೆಲಕೆ ತಡೆ, ತೊಲಗಲಿ ಅಂತರ
ತರತಮ ನೀತಿಗಳು.

## ವೇಣುಗೋಪಾಲ ಸೊರಬ

### ಬಡತನದ ಒಂದು ಚಿತ್ರ

ಚಟ್ಟದುತ್ಪ್ರೇಕ್ಷೆ ಚಕ್ಕಳ ನೈ
ಯಾವುದೋ
ಭೂತ ವಿಕಾರ ನಾಡಿ ಹಿಡಿದಿದೆ—
ಮಣಿಕಟ್ಟಿನಲಿ ; ಹುಬ್ಬು ನಿಟ್ಟಿನಲಿ
ಸಾರ್ವಜನಿಕ
ವಿಕಾಮ ಪ್ರಬುದ್ಧ
ನಿರ್ಮಾಂಸ
ದೇಹ ಶಿಕ್ಷಣ
ರೂಪದರ್ಶಿ.
ಕೈ ಕುಲುಕಿ ಬೆರಳನರ
ಎಣಿಸಿ ಮೊಣಕೈಯ್ಯ
ಎಲುಬೆರಡ
ದಾಂಡು
ಬಾರಿಸಿ ಬ್ಯಾಂಡು ಡೊಳ್ಳು
ನರಮಂಡಲದ ತೂಗು
ತೋರಣದಲ್ಲಿ
ಮೇರುದಂಡ ಕಳೆಗುಂದಿ
ಒಣಗಿ ಬೆಂಡಾಗಿ
ಮಂತ್ರ ಪ್ರವಾಹ
ಏಕ್ ಸಾಲ್ ತಾಲೀಬಜಾ
ಸುತ್ತಲೂ ನಿಂತೂ ನೋಡುವವರು ಶ್ರೀಮಂತ ಜನ
ಪುಡಿಕಾಸು ಮರ್ಯಾದೆ ಚೆಲ್ಲಿ ಬಾಳುವರು
ಸಂಭಾವಿತ ಜನ

# ಚಂದ್ರಶೇಖರ ಕಂಬಾರ

## ಹೊಸ ಹಾಡು

ಹೊಸ ಯುಗದ ಹೊಸ ಜಗದ ಹೊಸ ಕಾಲದೇಶಗಳ
ಹೊಸ ದಿನದ ಹೊಚ್ಚ ಹೊಸ ಯುವಕರಾವು |

ಹಾಡುವೆವು ಹೊಸ ರಾಗ–ಹಾಡುಗಳನು !
ಹೊಸದಿನಕೆ ಹೊಸತೊಂದು ಹೊಸ ಬೈಗು–ಬೆಳಗು
ಹೊಸ ಚೈತ್ರನುದಯಕ್ಕೆ ಬೇಕು ಹೊಸ ಹೂವು !
ಹುಮ್ಮಸದ ಹೊಸ ಹೊಳೆಗೆ ಹರಿಯು ಹೊಸ ತಾಣ
ಹೊಸ ಕಾಲ–ಯುಗ–ಜಗಕೆ ದಿನಕೆ ಹೊಸ ಗಾನ !
'ಬಾಲರನು ಪೊರೆ' ಎಂದು ಎಂದೊ ಹಾಡಿರುವ
ಹಾಡು ಮೆಲುಕುವೆವೇನು ? ಯುವಕರಾವೆಲ್ಲ !
ಗತ್ತು ಗಮಕಗಳ ಮೇಣ್ ಛಂದಗತಿ ಬಂಧ
ಹರಿದೊಗೆದು ಹಾಡುವೆವು ಗಾನಸ್ವಚ್ಛಂದ !

ಹಿಮ್ಮೇಳ ಮುಮ್ಮೇಳ ಕುಲ ಛಲವ ಮೆಟ್ಟ
ಒಮ್ಮೇಳದಿಂದೇನೆ ಚಪ್ಪಾಳೆ ತಟ್ಟ
ಹೃದಯದಿಂದುಣ್ಮುಗುವ ಸ್ವರ ನಿರ್ಜರಿಣೆಗೆ
ಹೊಸದಾಟ ಗತಿಯಿತ್ತು ಹೊಸ ಕಂಠದಿಂದೆ

ದಿಶೆಯುದರ ದಿಮಿದಿಮಿಸಿ ಬಿರಿಬಿರಿವ ಹಾಗೆ
ಭೂ–ವ್ಯೋಮ ಹುಮ್ಮಸದಿ ಹೂಂಕರಿಪ ಹಾಗೆ

ಹಲವು ವೀಣೆಯ ವಾಣಿ ಒಂದೆಂಬ ತೆರದೆ
ಹೊಸ ಹಾಡ ಹಾಡುವೆವು ಒಕ್ಕೊರಲಿನಿಂದೆ !

ಹೊಸತನವ ಮೆಚ್ಚದರು ಕಿವಿ ಮುಚ್ಚಿಕೊಳಲಿ
ಹಸಿಯು ದಾಸರ ಹರಿತ ಜಿಹ್ವೆ ತೆಗಳಿರಲಿ
ಮೂಗು ಮುರಿದಿರಲಿ ಮಡಿವಂತರೆಂಬುವರು
ಸತ್ತೆ ಹೋಗಲಿ ತಾಳದಿಹಕುಲೋತ್ತಮರು

ಕುಲ ಬಲದ ಛಲಲಿಂಗತರತಮವನುಳಿದು
ಉಸಿರುಸಿರ ನೂಲಿನೆಳೆ ಹುರಿಯಾಗಿ ಹೊಸೆದು
ಹೊಸಧ್ಯೇಯ ಭಾವ ಗುರಿ ಬಾವುಟವನೆತ್ತಿ !
ಹಾಡುವೆವು ಕುಕ್ಕಿ ಮೌಢ್ಯತೆಯ ಹಸಿನೆತ್ತಿ !

ಕಾಲನೆದೆ ಕ್ಷಣದ ನಾಡಿಯ ತಾಳಜೋಡಿ
ಹೊಸತನದ ಮಿದು ಚರಣ ವಿನ್ಯಾಸ ಜೋಡಿ !

ಹೊಸತನದ ಪ್ರತಿ ಹೆಜ್ಜೆ—
ಯೊಡನೆ ಹೊಸ ಉಷೆಗೆಜ್ಜೆ !
ಈ ಜಗದ ಜೀವಾಳ ಹೊಸತನವೊ ಗೆಳೆಯ !
ಬಾ ಅದನೆ ಹಾಡೋಣ ಬೆರಸಿ ಎದೆಗೆದೆಯ !

# ಆಹ್ವಾನ

ಧಮನಿಯಲಿ ಬಿಸಿ ನೆತ್ತರುಕ್ಕುತಿಹ ಹೇ ಯುವಕ
ಹೊಸದೊಂದು ಬ್ರಹ್ಮಾಂಡ ಕಟ್ಟೋಣ ಬಾ !
ಹಳೆ–ಹಸಿಯು ಕೆಸರಿಂದ ಕಸಗೊಂಡು ಕಿತ್ತೇಳು.
ಹೊಸ ಯುಗದ ಹಣೆ ಬರಹ ಬರೆಯೋಣ ಬಾ !

ದಿನದ ಮೂಡಣ ರವಿಯ ಕಿತ್ತೆಸೆದು ನಮ್ಮ ಹೊಸ
ರವಿಯ ಪಡುವಣದಿ ಮೂಡಿಸಲು ಬೇಕು
ಹಳೆಯ ಪ್ರಕೃತಿಯ ತುರುಬ ಜಗ್ಗಿ ಆಚೆಗೆ ನೂಕಿ
ನಮ್ಮ ಹೊಸ ಋತು ನಿಯಮ ತಿರುಗ ಬೇಕು
ಹರಿವ ಗ್ರಹಗಳನೆಲ್ಲ ತರುಬಿ ನವ ಜಗವನ್ನು
ನೆರಳಾಗಿ ಸುತ್ತುವೊಲು ಮಾಡಬೇಕು.

ಮುದುಕ ದಿಕ್ಕುಗಳ ಸೊಣಕನು ಮುರಿದು ಹೊಸ ದಿಕ್ಕು–
ಗಳ ಮೇಲೆ ಹೊಸ ಬಾನ ಹೇರಬೇಕು
ಅದಕಾಗಿ ಬಿಸಿನೆತ್ತರುಕ್ಕುತಿಹ ಹೇ ಯುವಕ,
ನಿತ್ಯ ನೂತನ ಬದುಕ ಹೊಸೆಯೋಣ ಬಾ !
ಹಳೆ ಹಸಿಯು ಕೆಸರಿಂದ ಕಸುಗೊಂಡು ಕಿತ್ತೇಳು
ಹೊಸ ಯುಗದ ಹಣೆ ಬರಹ ಬರೆಯೋಣ ಬಾ !

ಹಬ್ಬಿರುವ ಸಂಸ್ಕೃತಿಯ ಬಳಿದು ಹಿತ್ತಲೊಳೊಟ್ಟ
ಹಳೆ ಹಾಳ ಕೊಳೆಗೋರಿಗೊಳಿಸಬೇಕು
ಇದ್ದ ಕತ್ತಲ ತುತ್ತಿ ಟೊಣೆವ ಬೆಳಕಿನ ಪಂಜ
ಎತ್ತರದ ಶಿಖರದಲಿ ಊರಬೇಕು.

ಜೀವನದ ಕಾಲೊಳಿಹ ನಾರು ಹುಣ್ಣನು ತೊಳೆದು
ಹೊಸ ಜೀವವದರೊಳಗೆ ಊಳ ಬೇಕು.
ಕುಡಿವ ನೀರನು ಕೆಡಿಸಿ ಹುಡದಿಯಾಡುವ ಕೀಟ—

ಗಳ ಕುಲದ ತಳಬುಡವ ಸವರಬೇಕು
ಅದಕಾಗಿ ಬಿಸಿನೆತ್ತರುಕ್ಕುತಿಹ ಹೇ ಯುವಕ
ಕೈಯೊಳಗೆ ಕಸಪೊರಕೆ ಬಿಗಿ ಹಿಡಿದು ಬಾ
ಹಳೆ ಹಸಿಯು ಕೆಸರಿಂದ ಕಸುಗೊಂಡು ಕಿತ್ತೇಳು
ಹೊಸ ಯುಗದ ಹಣೆ ಬರಹ ಬರೆಯೋಣ ಬಾ

ನಮ್ಮ ಬೆವರಿನ ಹೊಳೆಗೆ ಒಡ್ಡು ಕಾಲುವೆ ಕಟ್ಟಿ
ಯೋಜನೆಯರಚಿಸಿ ಕೃತಿಗಿಳಿಸಬೇಕು.
ಸುಟ್ಟ ನೆತ್ತರಿನ ಉಗಿ–ಮೋಡ–ಪಡೆ ನಮ್ಮ ಮಲೆ–
ಗಳಲೆ ಘುಡು ಘುಡಿಸಿ ಮಳೆ ಸುರಿಸಬೇಕು.
ಅದ ನುಡಿದು ಇದ ನಡೆವ ಹಸಿ ನಾಲಗೆಯ ಕಿಳ್ಳಿ
ಕೇತ ದೇವತೆಗಳನು ಹುಗಿಯಬೇಕು
ಬದನೆ ಶಾಸ್ತ್ರವ ನುಲಿವ ಬೋಳು ತಲೆ ಅರಗಿಣಿಗ–
ಳನ್ನು ಬಿಸಿ ತವೆಯಲ್ಲಿ ಹುರಿಯಬೇಕು
ಅದಕಾಗಿ ಬಿಸಿ ನೆತ್ತರುಕ್ಕುತಿಹ ಹೇ ಯುವಕ
ವಿದ್ಯುದುಕ್ಕುವ ಲೋಹ ವೈಯೊಡನೆ ಬಾ
ಹಳೆ ಹಸಿಯು ಕೆಸರಿಂದ ಕಸುಗೊಂಡು ಕಿತ್ತೇಳು
ಹೊಸ ಯುಗದ ಹಣೆ ಬರಹ ಬರೆಯೋಣ ಬಾ !

ಬದಿ ಸೋದರರ ಸೀಮೆ ಸರಿಬೆರಿಸಿ ಹೊಸ ಮೇರೆ
ಭೂಮಿಯು ನಕಾಶವನು ರಚಿಸಬೇಕು
ಜೀವ ಜೀವಗಳನ್ನೆ ಪಣಕ್ಕಿಟ್ಟು ಹೊಸ ವಿಶ್ವ
ನವ್ಯ ಬ್ರಹ್ಮರು ನಾವು ತೂಗಬೇಕು

# ಗಾಳಿ ಸೇದಿದ ಬೀಡಿ

ಈಂಟೆಂದರೀಟಿ ಸರಿ ;  ಇರಲಿಲ್ಲ ತಂಬಾಕು
    ಸುತ್ತಿರುವದಾರ ಸಹ ಸುಟ್ಟದ್ದಿತು
    ದಿಟ್ಟಿ ಬಾನೆದೆಗಿತ್ತು ತಾನೊ ತಿರೆಗೊರಗಿತ್ತು
    ಸೊನ್ನೆ ಸೇತುವೆ ನಡುವೆ ತೂಗಿದ್ದಿತು !
    ಎಣ್ಣೆಯಿರದಿಹ ಪಣತಿ ತಿರುಗಿ ಹೊತ್ತಿದ ಹಾಗೆ
    ಕತ್ತಲಲಿ ಆಗೀಗೋ ಮಿಣುಗುತ್ತಿತ್ತು
    ಸತ್ತ ಪಶುವಿಗೆ ಮುತ್ತಿ ಮುಗಿಬೀಳ್ವ ಹದ್ದಿನೊಲು
    ಗಾಳಿ ಅದನೆ ಸುತ್ತುವರಿಯುತಿತ್ತು !

ಹೀನ ಗಾಯನದ ಎಳೆ ಬಿಡದೆ ಜಗ್ಗುವ ಹಾಗೆ
    ಜೀವನದ ನಿಟ್ಟುಸಿರ ಗೀತವಾಗಿ
    ಕ್ಷೀಣ ಹೊಗೆ ಬರುತ್ತಿತ್ತು ಅದರದೆಯ ವೇದನೆಯು
    ಶಿಲಾ ಶಾಸನವಾಗಿ—ವ್ಯರ್ಥವಾಗಿ !

ಬೆಳಕಿನರಮನೆ ನಗರ !  ವಿದ್ಯುದಮರಾವತಿಯು
    ನಾಗರಿಕತೆಯ ಸರ್ಪಕಾವಲದಕೆ !
    ಎಂದೊ ಶಿವ ಕೊಟ್ಟು ಮರೆತಿಹ ಧರ್ಮಸಾಲೆ ಕ
    ತ್ತಲೆಯ ಅಪರಂಪಾರ ಛತ್ರ ಹೊರಗೆ.

ನಗರ ಗೇಟಿನ ಆಚೆ
    ಬಿದ್ದಿರುವುದದೆ ಬೀಡಿ !  ಖೋಡಿ !
    ನೆಕ್ಕಿ ಚಲ್ಲಿದ ಎಲುವಿನ ತುಂಡಿನಂತೆ !
    ಯಾವ ಕೀಡಿಗೇಡಿಗಳು ಅದ್ದೇಲಿ ಬೆಲೆತೆತ್ತು
    ಎಂದು ಹೊತ್ತಿಸಿಹರೋ ಕದ್ದು
    ಉರಿಯುತಿದೆ ಇಂದೂ !
    ಹಂಚು ತೆಗೆದ ಹಳೆ ಮನೆಯತಾಟ—
    ಎದೆಯ ಮಾಟ,

ಗೀರಿ ಒಗೆದ ಮಾವಿನಗೊಟ್ಟೆ—
ಮೊಲೆ ಎರಡು ಥೇಟ,
ಕಣ್ಣು ಕತ್ತಲೆ ಗೂಡು
ಮಸಣ ಬೀಡು !

ಯಾರಿಗೆ ಯಾರೋ ಪುರಂದರ ವಿಠಲಾ ?
ಯಾವ ಕಂಪನಿ ? ಎಂಥದ್ದು ? ಅದೆಲ್ಲ ಏಕೆ ?
ಬೇಕಾದುದು ಮುಖ್ಯ ಬೀಡಿ ತಾನೆ ?
ತಲುಬುತೀರುವುದೊಂದೆ ಗುರಿಯುತಾನೆ ?
ಸ್ಸರಿ.
ಅರಸುತಿಹ ಲತೆಕಾಲ ತೊಡವಲು ಹರಿದು ಬಿಸುಡುವರುಂಟೇ ?
ಎಂದು ಹೊತ್ತಿಸಿಹರೋ ಕದ್ದು
ಉರಿಯುತಿದೆ ಇಂದೂ !
ಜಗ್ಗು—ಇಷ್ಟವಾದಷ್ಟು ಜುರುಕಿ
ಆಮೇಲೆ ನಾಗರಿಕತೆಯ ಬುರುಕಿ !
ಬರುತಾನೆ ಮಾದೇವ ನಾಗರಿಕತೆಯ ಅವತಾರ ತೊಟ್ಟು

'ಯದಾ ಯದಾ ಹಿ ಧರ್ಮಸ್ಯಗ್ಲಾನಿರ್ಭವತಿ ಭಾರತಾ....
ಸಂಭವಾಮಿ ಯುಗೇ ಯುಗೇ....'
ಕಾವಿಯೋ ಖಾದಿಯೋ ಲಾಡಿಯೋ ಶಿವದಾರೋ ಜನಿವಾರವೋ
ಕಳೆದಾಚೆ ಬದಿಗಿಟ್ಟು
ಹಾಕಿ ಕಚ್ಚು ಗಂಡು ಮೆಟ್ಟ
ಧಡಂ !
ಎ ಲ ಲ ಲ ಲ ಲ ಲ ....
? ? ? ? ? ?
ತಾನೂ ಬತ್ತಲ !
(ರಾಡಿ ಕೆಸರು ಮೈಗೆಲ್ಲ !)
ಅಂಜದಿರು ಅವತಾರಿ ಸುತ್ತೂ ಕತ್ತಲ !
ಕಳೆದಿಟ್ಟ ಬಟ್ಟೆಗಳ ಮತ್ತೆ ಹಾಕಿ
ಹೊರಟ—ಕೆಸರಿಂದೆದ್ದು ಕಮಲವಾಗಿ !

ನೂರು ಆವತಾರಗಳು ಹುರುಪಳಿಸಿ ಹೋದುವೋ
ಒಂದಕೂ ಜಯವೇಟು ದೊರೆಯಲಿಲ್ಲ !
ಬರಿಯ ಅವತಾರಗಳ ಧರಿಸಿ ಕೆಸರಲಿ ಜಿಗಿವ
ಛಲದೇವನಿಂದಂತು ತೊಲಗಲಿಲ್ಲ !
ಕೃಷ್ಣಮುಖಿ–ಗಿಣಿ ಗಡಕ ಬೀಡಿ
ಬಿದ್ದಿದೆ ಬೀಳದ ನೆರಳಿನ ಜೋಡಿ

ದಿಟ್ಟಿ ಬಾನೆದೆಗಿಹುದು–ತಾನೊತಿರೆಗೊರಗಿಹುದು
ಸೊನ್ನೆ ಸೇತುವೆ ನಡುವೆ ತೂಗಿರುವುದು
ಎಣ್ಣೆಯಿರದಿಹ ಪಣತಿ ತಿರುಗಿ ಹೊತ್ತಿದ ಹಾಗೆ
ಕತ್ತಲಲಿ ಆಗೀಗೊ ಮಿಣುಗುತಿಹುದು |

ಸತ್ತ ಪಶುವಿಗೆ ಮುತ್ತಿ ಮುಗಿಬೀಳ್ವ ಹದ್ದಿನೊಲು
ಗಾಳಿ ಆದನೇ ಸುತ್ತುವರಿಯುತಿಹುದು |
ಹಿರಿದು ನಾಲಗೆ ಜೊಲ್ಲ ಸುರಿಸುತಿಹುದು

# ಯಾರು ತಿಳಿಸ್ತೀರಿ ?

ಈ ಆಳೋ ನನ್ನ ಮಕ್ಕಳಿಗಿ ಏನಾಗೇತಿ ?
ಏನಾಗೇತಿ ?
ತಿಳಕೋಬೇಕಂತೀನಿ ಯಾರು ತಿಳಿಸ್ತೀರಿ ?
ಯಾರು ತಿಳಿಸ್ತೀರಿ ?
ಅವರ ತಲೀ ಮ್ಯಾಲೊಂದ ಟೊಪ್ಪಿಗೈತೆ
ಟೊಪ್ಪಿಗೈತೆ
ಅದನ್ನ ಕಂಡರ ನನಗೆ ಆಗಾಣಿಕಿಲ್ಲ ತಗಿ
ಆಗಾಣಿಕಿಲ್ಲ ತಗಿ
ಅದನ್ನ ಎಲ್ಲರೂ ನೋಡಲೆಂತ ತಲೀ ಕಡೆ ನೋಡತಾರ
ತಲೀ ಕಡೆ ನೋಡತಾರ
ಮುಂದೆ ಇದ್ದವರಿಗಿ ಡಿಕ್ಕಿ ಹೋಡೀತಾರ
ಡಿಕ್ಕಿ ಹೊಡೀತಾರ
ಸುಳ್ಳಲ್ಲ ಟೊಪ್ಪಿಗಿ ಚಂದ ಐತಿ ಖರೆ !
ಚಂದ ಐತಿ ಖರೆ !
ಅದರ ಕಂಡವರಿಗೆಲ್ಲಾ ಡಿಕ್ಕಿ ಯಾಕೆ ಹೊಡೀ ಬೇಕು ?
ಡಿಕ್ಕಿ ಯಾಕೆ ಹೊಡೀ ಬೇಕು ?
ಹೊಡೆಸಿಕೊಂಡವಿ ಡಿಕ್ಕೀ ಹೊಡಿಸಿಕೊಂಡಿವಿ
ಅಥವಾ ಇನ್ನೇನ ಹೊಡೆಸಿಕೊಬೇಕಂತ ನಿಂತೀವಿ ?
ತಿಳಿಧಾಂಗ ಆಗೇತಿ ಯಾರು ತಿಳಿಸ್ತೀರಿ ?
ಯಾರು ತಿಳಿಸ್ತೀರಿ ?

# ಎಚ್. ಜಿ. ಸಣ್ಣಗುಡ್ಡಯ್ಯ

## ಬೀಸುವುದೆ ಇನ್ನೊಮ್ಮೆ ಆ ಚಂಡಪವನ?

1

ದೇಶ ಪ್ರೇಮದ ಗಾಳಿ ಬೀಸುತಿಲ್ಲ
ಈಗ ಎಲೆಯಲುಗುತಿಲ್ಲ
ಆಗ,–ಬಿದ್ದಿದ್ದ ಹುಳು ಹುಪ್ಪೆ ಹೆಳೆವ ಕುನ್ನಿಗಳೆಲ್ಲ ತಲೆಯೆತ್ತಿ ನಭಕೆ
ಓಡಾಡಿದವು ಪೂರ್ವ ಪಶ್ಚಿಮಕು
ಒಂದೂ ಈಗ ಕಾಣುತ್ತಿಲ್ಲ.
ಈಗ ಉರಿ ಬೇಗೆ—
ಕೆಳಗೆ ನೆಲದಿಂದ, ಮೇಲೆ ಮುಗಿಲಿಂದ
ಅತ್ತಿತ್ತ ಮಾರಣ ಬಿಸಿಲ ಸೂಜಿಗಳ ಕುಣಿತ

2

ಅಲ್ಲೊಂದು ಇಲ್ಲೊಂದು ಶತಾಯು ಆಲ ಅರಳಿ ಬಿಳಲು ವಿಸ್ತಾರ
ನೆರಳಲಿ ಮೈ ಸೇದಿ ಹೊರಳುತಿರುವರು ಕೆಲರು
ಅವರ ಬಸಿರೊ–ಹಂದಿಯನು ನುಂಗಿರುವ ಹೆಬ್ಬಾವ ಬಸಿರು
ಏಳಲಾರರೆತ್ತಲಾರರು ತೋಳ
ಬಿದ್ದಲ್ಲಿ ಸೋಡಾ ವಿಸ್ಕಿ ಸಿಗರೇಟು
ಕಾಫಿ ಟೀ ಇಸ್ಪೀಟು—
ನೆಟ್ಟ ನೋಟದಲ್ಲಿ ದೇಶದೆಲ್ಲಾ ನದಿನದ ಪರ್ವತಗಳ
ಹೊಯಿಲ ಹೊತ್ತವರ ಜಿಗುಟು.
ನಡುನಡುವೆ ನಗು ಕೂಗು

ನೊಗಲಾರದ ಘಟಘಟಿಯ ಘರುಘೀಂಕು ಘಾಟು
ಮುಖದಲ್ಲೆಲ್ಲೂ ಸೂಜಿಮೊನೆಯಷ್ಟು ಸುಳಿವಿಲ್ಲ ದೇಶ, ಪ್ರೇಮ !
ಸಮಸ್ಯೆಗಳೊ ? ನಿರ್ನಾಮ.
ಭರತ ವರ್ಷದ ತರುಣ ವೀರ್ಯದ ಕಡಲು ಬರಿ ಸ್ವಪ್ನ ಸ್ಖಲನಕ್ಕೂ ವೆಚ್ಚವಾಗದೆ
ಹುಟ್ಟೈತೆ ದೇಶ, ಪ್ರೇಮ ?
ಕಟ್ಟೀತೆ ನಾಡು ?

3

ಹಿರಿಯರಿದ್ದಾರೆ........
(ಈ ಭಗಣಿಮರಕಿನ್ನೂರು, ಗೋಣಿಮರಕಾರ್ನೂರು
ಒಂದೊಂದು ಕೋಡುಗಲ್ಲಿಗು ಸಹಸ್ರ ವರ್ಷಗಳ ಕೀರುತಿ, ಮೇಲ್ಮೆ
ಬೀಳು ಕಾಲಿಗೆ........)
ಮತ್ತೊಮ್ಮೆ ಕುಲಕಸುಬನುದ್ಧರಿಸೆ ಹೊರಟಿದ್ದಾರೆ :
ಆಸ್ತಿ ಹಣ ಜಾತಿ ಜಸಿವಾರ ವೀಭೂತಿ
ದೇಶವನೆ ನುಂಗಿ ನೊಣೆದು ಬರಿ ಎಂಜಲೆಲೆ ಹಾರಿಸಿದ ಭೂತ ಪ್ರೇತ ಬೇತಾಳ
ಹಲವು ದೇವ ಜಾತಿ ;
ಹರೆ ತಮಟೆ ಢೋಲು ಡಮರು ಕಾಳೆ—
ಅಜೀರ್ಣಕ್ಕೆ ಕಾರಿಕೊಂಡ ವಾಂತಿಯನ್ನದ ರಾಶಿಯನೆ ಮರಳಿ
ಮುಕ್ಕುವ ನೀಚ ನಾಯ ಕಸಬು.

4

ಇಲ್ಲ, ಈಗ ದೇಶ ಪ್ರೇಮದ ಗಾಳಿ ಬೀಸುತಿಲ್ಲ,
ಎಲೆಯಲುಗುತಿಲ್ಲ
ಬರಿ ಬಂಜೆ ಮೋಡಗಳ ಓಡಾಟ
ಕೆಳಗೆ ಭಣ ಭಣ ಬಿಸಿಲ ಸಿಡಿತ ಹೊಡೆತ,
ಮೊದಲೇ ಮೇಲೇರಿ ಜಾಗ ಗಿಟ್ಟಿಸಿಕೊಂಡ ಮಹನೀಯರಾರಿಗೂ
ಛಳಿ ಬಿಸಿಲಿನರಿವಿಲ್ಲ.
ಬೆಚ್ಚನೆಯುಣ್ಣೆ ಹೊದಿಕೆ
ತೋಳ್ತುಂಬ ಬೆತ್ತಲೆ ಕದೀಮ ಕಟೆತಟ ಬಿಗಿತ
ತೇಗು ಗೊರಕೆ ಎಳೆತ

ಇತ್ತ—

ಇದೊ ಮುವತ್ತೊಂಬತ್ತೂ ಪಾಯಿಂಟೊಂಬತ್ತುಕೋಟಿ ಮಕ್ಕಳ ಪಂತ
ಕಂಡು, ಕಾದು ಬೋಸಿದ ಕುನ್ನಿ; ಕಟವಾಯಲಿಳಿಯುತಿಹ
ಜೊಲ್ಲಿಗು ಅಭಾವ ದಾಹ ;
ಮುಂದೆ ಕಾಲಿಡಲೂ ತ್ರಾಣವುಳಿದಿಲ್ಲ,
ಯಾವುದೋ ಕೀಲ ಸಂದಿಯಲ್ಲೆಲ್ಲೊ ಪ್ರಾಣದ ಸ್ಪಷ್ಟ ಬಡಿತ.

5

ಮುಕ್ತಿಯೆಂದಿಗೇ ಹೇ ಆದಿಶಕ್ತಿ ?
ಸುಟ್ಟುರೆ ಗಾಳಿ ತಿರ್ರ ನಿನ್ನೊಮ್ಮೆ ತೀಡುವುದೆಂದು ?
ಬಡಿಗೆಗೊಳ್ಳುವನಾರು ನಾಡ ಬೆನ್ನ ಬಡಿದೇಳಿಸಲು ?
ಈ ಹಳೆ ಜಾಡ್ಯ ರೋಗ ಕ್ರಿಮಿಕೀಟಗಳ ಸುಟ್ಟ ಹೊರತೂ ಬರುವುದೇ
ಹೊಸತು ಬೆಳೆ ?
ಗುಡಿ ಘಂಟೆ ಗೋಪುರ, ಮಠ ಪೀಠ, ಮರಮುಳ್ಳು ಹಳ್ಳತಿಟ್ಟು ಹಳವೆಗಳ,
ಹಳೆಯ ವ್ಯಾಮೋಹದೆಲ್ಲ ಗೋಳು ಹೆಜ್ಜೆಗಳ
ಸುಟ್ಟು ಒರಸಿ, ಬುಲ್ಡೋಜರಿನ ಬಾಯ್ಗೆ ಕೊಟ್ಟು ಕಲಿಸಿ ಸಮಗಟ್ಟಿ
ಹೊಸ ಕಸಿಯ ಗಿಡಗಳನು ನೆಡುವಂಥ ಭೂಪ
ಬರುವನೇ ಎಂದಾರ ?
ಹೆತ್ತು ಹೆಳವಾಗಿ ಕಾಮಾಲೆ ಬಡಿದು
ಒಣ ಕೋಲುಗಳ ಮೇಲೆ ಭಾರಿ ಪತ್ತಲವನುಟ್ಟು,
ಮೈ ತುಂಬ ಹೊದ್ದು, ಹಣೆಗೆ ಅಕ್ಷತೆ ಇಟ್ಟು ನಡೆವ ಸಾಧ್ವಿಗಿನ್ನೊಮ್ಮೆ
ಬರಬಹುದೆ ಹರೆಯ ?
ಆವಳ ನೆತ್ತಿಯ ಮೇಲೆ ಧುಮುಕಲೇ ಬೇಕೆ ಬಿಸಿ ನೆತ್ತರಭಿಷೇಕ ?
ಬರುವನೇ ಯಾರಾದರೊಬ್ಬ ಕಲ್ಕಿ ಧೀರ
ಬೀಸುವುದೆ ಇನ್ನೊಮ್ಮೆ ಆ ಚಂಡಪವನ ?

# ಹಂದಿ

ಇದರ ಚಂದವನ್ನು ಎತ್ತಕಡೆಯಿಂದ ನೋಡಿದರೂ
ಮೆಚ್ಚುವಂತಾಗುವುದಿಲ್ಲವೇ ?
ದೊಡ್ಡ ಹೊಟ್ಟೆ ಇದರ ಆಸ್ತಿ ;
ರುಚಿಯಾದದ್ದು ಹುಳಿಯಾದದ್ದು
ಪರಿಮಳಯುಕ್ತವಾದದ್ದು ಕಂಡಾಗ ಉಲ್ಲಾಸದಿಂದ ಅಲ್ಲಾಡಿಸುವುದಕ್ಕೆ
ಇರುವುದೊಂದು ಚೋಟು ಬಾಲ ;
ಹೂಂ ಎನ್ನುವುದಕ್ಕಾಗಲಿ ಇಲ್ಲ ಎನ್ನಲಿಕ್ಕಾಗಲಿ ಬಾರದ,
ಯಾವುದೂ ಖಚಿತವಲ್ಲ ಎನ್ನುತ್ತ ಬರೆಯುವುದಕ್ಕೇ
ಲಾಯಕಾದ ಅಧಃ ಪಾತಾಳ ಮುಖಿ
ಬೆದಕುವುದು ಸಿದಕುವುದರಲ್ಲಿ ಸುಖಿ
ಎನುವಂಥ ತಲೆಯಲ್ಲದ ತಲೆ ;
ಕೇವಲ crazy ಎಂದು ತೋರಿಸುವ
ವಿಕಾರ ರಾಗ ಜನಕ ಮುಸುಡಿ ;
ಕ್ರೀ–ಕ್ರ್ಯಾ–ಕ್ರೂಂಚ್–ಹೂ–ಎಂದಲ್ಲದೆ
ಎಂದೂ ಪ್ರತಿಭಟಿಸದ ದಾಸ್ಯ ಗಾಯಕಿ
ಗೊಬ್ಬರವಾಸಿ
ಇದರ ಮಾಂಸಲ ಮೈಯನ್ನ,
ದುಂಡಾಡಿಸುವ ನಸೆ ಬಾಲವನ್ನ,
ಕೊಳಚೆ ಮೈಯ ಆದರ ಹೆಣ್ಣಗತನವನ್ನು
ಮೋಹಿಸುವಂತಾಗುವುದಿಲ್ಲವೆ
ದೊಡ್ಡ ಕಣ್ಣು ಯಾತಕ್ಕೆ ಬೇಕು ?
ಕೆಳಗಿನ ಕಸ ಕಂಡರೆ ಸಾಕು ;
ಉತ್ಕೃಷ್ಟವಾದದ್ದರ ವಾಸನೆ ಹಿಡಿಯಲು
ಮೂಗಿನ ಹೊಳ್ಳೆ ತುಸು ದೊಡ್ಡದು ಬೇಕು
ಆ ಮೂಗು, ಆ ತಲೆ, ಒಳಗಿನ ಮೆದುಳು
ಬೇಕಿಲ್ಲ ಕಾಣಿಭೋ
ಏಕಸಮ ನೋಡಿರೋ–ಎಂದು ಹೂಕರಿಸುವ
ಹಂದಿ.

ಕಾಲಿಕ್ಕ ಬಾರದ ಕಡೆ ನುಗ್ಗಲು
ಮುಂದಲ್ಲದೆ ಎಂದೂ ಹಿಂಜರಿಯದ
ಇದರ ಕರುಚಲು ಕಾಲು
ಹೊಟ್ಟೆಯು ಪೆಟ್ಟಿಗೆಗಿಟ್ಟ ಉರುಟಿನ ಹಾಗೆ
ಹೋದಲ್ಲಿ ಅಕ್ಕಡಿ ಬಿಟ್ಟು ಹೋಗುವ
ಅದರ ಉಚ್ಛಿಷ್ಟಕ್ಕೆ........
ಅದಕ್ಕೆ ಇದಕ್ಕೆ ಎಂದೇಕೆ ಸುತ್ತು ಬಳಕೆ
ಕೇವಲ ಅದರ ಹಂದಿಗತನಕ್ಕೆ ಯಾರು ಸೋಲುವುದಿಲ್ಲ ?
ರಾಷ್ಟ್ರ ಶ್ರೀಮಂತವಾಗಲು, ಶ್ರೀಮಂತ ರಾಷ್ಟ್ರವಾಗಲು
ಕೂಳಿನ ಅಭಾವ ನೀಗಲು
ಬೇಕು ತರಹೇವಾರಿ ಹಂದಿ
ಸಿಕ್ಕಿದ್ದನ್ನು ತಿನ್ನಬೇಕು, ತಿಂದು ಬೆಳೆಯಬೇಕು
ಮೈಯಿ ಕೊಬ್ಬಬೇಕು—
ಕಡೆಗೆ ಉಬ್ಬು ಕೊಬ್ಬು ಮಿತಿ ಮೀರಿದಾಗ
ಕಂಡವರ ಬಾಯ ತಿನಿಸಾದರೂ—
ತಿನಿಸಿ ಕೃತಾರ್ಥವಾಗಬೇಕು.
ಅನ್ಯಗುಣ ಯಾಕೆ ?
ಹಂದಿಯು ಗುಣ ಅದರ ತೂಕೇ........
ತಿನುವ ತಿನ್ನಿಸುವ
ಪ್ರಜಾಪ್ರಭುತ್ವದ ಯಶಸ್ಸಿನ ಸೂತ್ರದ
ಘನ ಆದರ್ಶಕೆ
ಎಂಥ ಸಾಕಾರ ರೂಪ ಅಂತೀ
ಈ ಹಂದೀ !

## ಬುದ್ದಣ್ಣ ಹಿಂಗಮಿರೆ

### ಹಳೆಯ ಆಕಾಶಕ್ಕೊಂದು ಸವಾಲು

ಊರ್ಧ್ವಮುಖಗಳ ಕಣ್ಣಿಗೆ
ಸುಣ್ಣಬಳಿದು ಬಣ್ಣಗೆಡಿಸುವ ನಿನ್ನ
ಕುಷ್ಠ ರೋಗ ಪೀಡಿತ ಚರ್ಮ
ಯಾಕೆ ಹೊದಿಸುತ್ತೀ ನನ್ನ ತಲೆ ಮೇಲೆ ?

ನನ್ನಲ್ಲಿ ರಕ್ತಗತವಾಗಿದ್ದ ನಿನ್ನಂಶವನ್ನು
ವಿಘಟಿಸಿ, ನಿನ್ನ ಮುಖಕ್ಕುಗಿದ ದಿನವೆ
ನನ್ನ ನಿನ್ನ ಸಂಬಂಧ ಕೊಂಡಿ ಕಳಚಿದ್ದು.

ಪ್ರಾಚೀನ ಬೇರುಗಳನ್ನು ಕತ್ತರಿಸಿಕೊಂಡು
ಹೊಂಡ ಕೆರೆ ಕಾಲುವೆಗಳಲ್ಲಿ
ಮನಸಾ ಈಜಾಡಿದ್ದು : ಪಕ್ಕ ಬಲಿತು
ಹಾರಲು ಕಲಿತದ್ದು.

ಕತ್ತಲಲ್ಲಿ ಹಳದಿ ಕಣ್ಣ ತಿರುಗಿಸುತ್ತ
ಮ್ಯಾಂವ್ ಮ್ಯಾಂವ್ ಎನ್ನುವ ಬೆಕ್ಕ ಕಂಡರೆ
ಭೀತನಾಗುವುದಿಲ್ಲ ; ಬೆನ್ನು ತುಪ್ಪಳ ಮೇಲೆ
ಕೈಯಾಡಿಸಿ, ಕೀಸಿ ಬಾಯ ಹಲ್ಲುಗಳೊಡನೆ
ಆಟವಾಡುತ್ತೇನೆ ಈಗ ಬೇಕಾದ ಹಾಗೆ.

ಕರ್ಮವೆಂಬುದು ಸತ್ತಶವ
ಅದನ್ನು ಹತ್ತಿ ನಿಂತು ಘೋಷಿಸುತ್ತೇನೆ
ನನ್ನದೆನ್ನುವುದನ್ನು ಸೋತೆನೆಂದರೆ
ಮತ್ತೆ ಇದ್ದೇ ಇದೆ ಮಣ್ಣು.

# ಶಬ್ದ, ರಕ್ತ ಮತ್ತು ಮಾಂಸ

ಮಹಾಶಯರೆ, ಡುಬ್ಬ ಚಪ್ಪರಿಸಿಕೊಂಡು
ಪೆಪ್ಪರಮೆಂಟು ಸವಿವಾಶೆ ಹೊತ್ತು
ನಾವು ಜನ್ಮಿಸಿಲ್ಲ ; ಭದ್ರ ಮುಚ್ಚಿದ್ದ ಬಂಡೆಗಲ್ಲ ಓಸರಿಸಿ,
ಇದೋ ಹೊರಬಿದ್ದಿದ್ದೇವೆ ಹೊಸ ಹವೆಗೆ
ಮೂಗಿಗೆ ಹೊಸ ನಾತ ತಟ್ಟೆ ಕಿಮಕ್
ಎಂದರದೇ ಸಾರ್ಥಕ ಶ್ರೇಯ ಪ್ರೇಯ.
ಕೊಳೆತವರು, ಹುಳಿತವರು, ಸುಟ್ಟವರು, ಸುಡದಿದ್ದವರು
ಸಿಡಿದೆದ್ದು ಗುಡುಗುತ್ತೇವೆ :
ಅನ್ಯಾಯ ಗೋಪುರಕೆ ಬೆಂಕಿ ಹಚ್ಚುತ್ತೇವೆಂದು
ನಮ್ಮೆದೆ ತಂತಿ ಕತ್ತರಿಸಿ ಪೊಳ್ಳು ಬಾರಿಸುವ
ನೀವು ಸತ್ತರೂ ಸಾಯುವುದಿಲ್ಲವೆಂದು
ರಕ್ತ-ಮಾಂಸ ತುಂಬಿಕೊಂಡು ಗಟ್ಟಿಯಾಗಿದ್ದೇವೆನ್ನಿಸಲು
ಎತ್ತಲಣಿಯಾಗಿದ್ದೇವೆ ಗೋವರ್ಧನಗಿರಿ ;
ಅನಾಗರಿಕ ಲಡ್ಡು ಕಡತಕ್ಕೆ ಕಿವಿಗೊಡದೆ
ನಿಮ್ಮ ಹುಸಿ ಮಂತ್ರ ಬೆತ್ತಕ್ಕೆ ಬೆದರದೆ
ವಾಗ್ದೇವಿಯ ಭಂಡಾರದ ಮುದ್ರೆಯನ್ನೊಡೆದು
ತೋಡಿಕೊಳ್ಳುತ್ತಿದ್ದೇವೆ :
ಹಸಿಬಿಸಿ ಕಹಿಸಿಹಿ ರಸಾಯನ ಹೊಳೆ.
ಸರಸ್ವತಿಯ ನಗ್ನ ಪುತ್ಥಳಿ ಸುತ್ತ ಹೂ ಸುರಿದು
ಸ್ವಚ್ಛಂದ ತುಳಿಯುತ್ತಿದ್ದೇವೆ ಹೊಸಲಯ :
ಭಯಶಂಕೆ ಬಿರುಗಾಳಿ ಹೊರೆಕಟ್ಟಿ ತಂದು
ಲಿಲಾವು ಮಾಡುತ್ತೇವೆ.
ರತ್ನದಂಗಡಿ ಹೊಕ್ಕು ಲೂಟಿ ಮಾಡುತ್ತೇವೆ
ಪ್ರತಿಮೆಗಳ.
ರೊಟ್ಟಿ ಖಾರ ಅಂಬಲಿ ಹುಳಿ ಹೋಳಿಗೆ ಆಮ್ಲೇಟು
ಡಬ್ಬಿಗಟ್ಟಲೆ ವ್ಹಿಟ್ಯಾಮಿನ್ ಕುಡಿದು ಕೊಬ್ಬಿದ್ದೇವೆ ;
ಚಂದ್ರಮಂಡಲಕ್ಕೆ ಸೇತುವೆ ಕಟ್ಟಬೇಕೆಂದು
ಪ್ಲ್ಯಾನು ಹುಟ್ಟಿಸುತ್ತಿರುವ ಮರಿ ಎಂಜಿನೀಯರರು
ಕಟ್ಟಿ ಕೆಡಹುತ್ತಿದ್ದೇವೆ ಸ್ವಪ್ನಸೌಧ.

ಶ್ರದ್ಧೆ ಬಚ್ಚಲಲ್ಲಿ ತೊಯ್ದಿದ್ದ ಭ್ರಮಿಷ್ಠರು ನಾವಲ್ಲ,
ಬೆಳ್ಳಿ ಹೊಳೆ ಬೀಳಲಪೇಕ್ಷಿಸುವ ಕಳ್ಳ ಗೂಂಗಾಗಳಲ್ಲ ;
ಆ ದೀಪದ ಕಂಭ ಕಿತ್ತಿ ಚೆಲ್ಲಿ ಹೊಸರಾಜ್ಯ ಕಟ್ಟುತ್ತೇವೆ
ಖೊಳ ಖೊಳ ನಗುತ್ತೇವೆ ಸ್ವತಂತ್ರ
ನಮಗಿಲ್ಲ ಕೆಂಪು ಹಳದಿ ಬೆಂಕಿ ಭೀತಿ.

ಹಿಂದೊಂದು ಮುಂದೊಂದು ಖಾಲಿಡಬ್ಬೆಕಟ್ಟಿ,
ಡಮಡಮ ತಟ್ಟಿ, ಕೊಬ್ಬಿ ಅರಾಜಕತೆ ಎಬ್ಬಿಸುವ
ಶೈಲೂಷಕುಲ ಹೊರದಬ್ಬುವುದಕ್ಕೆಂದು
ಅಂಧೇರ ನಗರಿಯಾಳ್ವ ಅಪ್ರಮಾಣಿಕ ಗಣಕ್ಕೆ
ವೀಳ್ಯ ಕೊಟ್ಟವೆ ಪ್ರಾಮಾಣಿಕತನ
ಇದೋ ಎತ್ತಿದ್ದೇವೆ ಕಪ್ಪುಧ್ವಜ.

# ಕೆಂಪು ದೀವಟಿಗಿ ಉರಿದಾವೊ

ಸಂಗೊಳ್ಳಿ ರಾಯಣ್ಣ ಸಿಂಧೂರ ಲಕ್ಷ್ಮಣ
ಬಂಡು ಹೂಡ್ಯಾರೊ ನಾಡಾಗ ! ಅಣ್ಣಾ
ಕೆಂಪು ದೀವಟಗಿ ಉರಿದಾವೊ

ಧೈರ್ಯದ ಹುಲಿಗಳು ಗವಿಬಿಟ್ಟು ಎದ್ದಾವೊ
ಚಿರ್ಚಗಳು ಚಂಗನ ನೆಗಿದಾವೊ ! ನಾಡಾಗ
ಕೆಂಪು ದೀವಟಗಿ ಉರಿದಾವೊ

ದರ್ಕಾರ ಇಲ್ಲದ ಸರ್ಕಾರ ಬಂದಾಗ
ದಂಗೆ ಎದ್ದಿತೊ ನಾಡಾಗೊ ! ಅಣ್ಣಾ
ಕೆಂಪು ದೀವಟಗಿ ಉರಿದಾವೊ

ದೀನ ದಲಿತರ ರೈತ ಕಾರ್ಮಿಕರ
ಸಿಟ್ಟು ಸಿಡಿಲಾಗಿ ಹರಿದೀತೊ ! ಹೊಟ್ಟೆಯ
ಕೆಂಪು ದೀವಟಗಿ ಉರಿದಾವೊ

ದ್ಯಾಮವ್ವ ದುರ್ಗವ್ವ ಕಾಳಮ್ಮ ಕೂಳಮ್ಮ
ಕರಕರ ಹಲ್ಲಮಸೆದಾರೋ ! ಕೇರಿಯ
ಕೆಂಪು ದೀವಟಗಿ ಉರಿದಾವೊ

ಮೂಡಲಕ ಮಲ್ಲಯ್ಯ ಸಾಲುಗುಡ್ಡದ ಮ್ಯಾಲಿ
ಕೆಂಪು ಹುಂಜಾವು ಕೂಗ್ಯಾವೊ ! ಕಾಳಗದ
ಕೆಂಪು ದೀವಟಗಿ ಉರಿದಾವೊ

ಮಣ್ಣಿಲ್ಲ, ಮಸಣಿಲ್ಲ ಮನೆಯಿಲ್ಲ ಸೂರಿಲ್ಲ
ಬಡವರ ಕಣ್ಣೀರ ಕಡಲಾಗಿ ! ಉಕ್ಕೀತೋ
ಕೆಂಪು ದೀವಟಗಿ ಉರಿದಾವೊ

ಗುಲಗಂಜಿ ಕಣ್ಣಿನ ಜಗದಂಬಿ ಕುಣಿದಾಳೊ
ಕೆಂಡದ ಹೊಳಿಯ ಕಾರ್‍ಯಾಳೊ ! ನಾಡಾಗ
ಕೆಂಪು ದೀವಟಿಗಿ ಉರಿದಾವೊ

ನಿಲ್ಲಲು ನೆಲೆಯಿಲ್ಲ ತಿನ್ನಲು ಕೂಳಿಲ್ಲ
ಅತ್ತ್ಮೋರ ಸತ್ತ್ಮೋರ ಸಂತಾಪ ! ಸುತ್ತ್ಯಾಡಿ
ಕೆಂಪು ದೀವಟಿಗಿ ಉರಿದಾವೊ

ಗೋರಿ ಗೋರಿಯಸೀಳಿ ಎದ್ದಾವೊ ಹುಯ್ಯೆಂದು
ಎಲಬಿನ ಕೈಗಳು ಸಾವಿರ ! ಸಾವಿರ
ಕೆಂಪು ದೀವಟಿಗಿ ಉರಿದಾವೊ

# ಭುಜೇಂದ್ರ ಮಹೀಶವಾಡಿ

## ರಕ್ತ ಸರೋವರದ ಕೆಂದಾವರೆ

1

ನೊಗ ಹೊತ್ತ ಎತ್ತುಗಳು ಎಲ್ಲೋ ಫರಾರಿ !
ನೇಗಿಲ ಹೊತ್ತ ರೈತ ಕಲ್ಲುಮುಳ್ಳ ದಾರಿಯಲಿ
ಬಟ್ಟ ಬರಿಗಾಲಿನಿಂದಲೆ
ಹಾರುಗಾಲ ಬಿದ್ದಿದ್ದಾನೆ !
ಹೌಹಾರಿ ಕಳೆದೆತ್ತುಗಳ ಹುಡುಕುತ್ತಿದ್ದಾನೆ !
ಎತ್ತು ಸಿಕ್ಕುವ ಲಕ್ಷಣವಿಲ್ಲ
ಇನ್ನು ಭೂಮಿಯನು
ಬಿತ್ತಿ ಬೆಳೆವ ಬಗೆ ಯಾವುದು ?

2

ಎಳೆಗರುವಿನೊಂದಿಗೆ ಹಾಲು ಕರೆವ
ಮನೆಯ ಹಸು ಹಾಯಾಗಿರುವುದೆಂದರೆ,
ಅದರ ಕರುಗಳನೆ ಬೆಳೆಸಿ ಸಾದು ಮಾಡಿ
ಹೂಡಿ ಹೊಡೆಯೋಣವೆಂದರೆ,
ಅಯ್ಯೋ ಪಾಪ ಮೊನ್ನೆ ತಾನೇ
ಕಿವಿಯಲ್ಲಿ ಗಾಳಿ ತುಂಬಿ
ಚೆಲ್ಲಾಟವಾಡುತ್ತಲೇ
ಆ ಎಳೆಗರು ಹಾರಾಡಿ ನೆಗೆದು ಬಿತ್ತು !
ಆ ಹಿರಿಯ ಕರುವೋ ಹೆಗಲ ಕೊಡಲೊಲ್ಲದು !

ಈ ಹಸುವಂತೂ ಹೊಸಕರು ಹಾಕುವಂತಿಲ್ಲ !
ಬೇರೆ ಹಸುಗಳೋ ಬಾತಿಗೆ ಬಾರವು
ಪಾಪ, ಆಗಲೆ ಅವಕೆ ಒತ್ತಾಯದ
ಕೆಂಪು ತ್ರಿಕೋಣ ದರ್ಶನ !
ಇನ್ನೇನು, ಮಾಡಿದ್ದುಣ್ಣೊ ಮಹಾರಾಯಾ !

3

ಹೊಸದಾಗಿ ನೆಲದೊಡೆಯನಾಗಿ ಬಂದ
ಹುಂಬ ಹುರಿಮೀಸೆಯ ಗಂಡು ಮನುಷ್ಯ
ಎತ್ತು ಹೋದರೆ ಹೋಗಲಿ
ಹೊಲವನ್ನು ಬಿತ್ತಿಯೇ ತೀರುವೆನು,
ಎಂದು ಹಟ ಹಿಡಿದಿದ್ದಾನೆ,
ರೈತ ದಂಪತಿಗಳನೆ ಹೂಡಿ ಹೊಡೆಯುತ್ತಿದ್ದಾನೆ !
ಅವರ ಬೆನ್ನ ಮೇಲೆ ಬಾರಕೋಲ ಬಾಸುಂಡೆ !
ಅವರ ಕಾಲಿನಿಂದ ರಕ್ತದ ಕಾಲುವೆ !
ಅವರ ಕಣ್ಣೀರೆ ಭೂಮಿ ಹೊಟ್ಟೆಗೆ ಬೀಜ !
ಆಯ್ತು, ಇದರಿಂದ ಇನ್ನೆಂಥ ಬೆಳೆ ಬಂದೀತು
ಪ್ರಳಯ ಕಸವಲ್ಲದೆ !

4

ಹಸಿದೊಡಲಿಗೆ ಬೆಂಕಿ ಹಾಕಿದ
ಹಸಿರ ಕ್ರಾಂತಿ ಬರಿ ಭ್ರಾಂತಿ !
ಅದು ಪ್ರಳಯದಟ್ಟಹಾಸ !
ಈ ಹಸಿರ ಬಾವುಟ ನೋಡಿಯೆ
ಓಡುತ್ತಿದೆ ಭಾರತ ರೈಲು !
ಹಸಿದುಸಿರುಗಳೆಲ್ಲ ಒಂದಾಗಿ
ಕೆಂಪು ಕ್ರಾಂತಿಯ ಹೊಂಚು ಹಾಕಿವೆ !
ರೈಲು ಕಂಬಿಗಳ ಕಿತ್ತೆಸೆದಿವೆ !

ಈಗ ಈ ಹಸಿದ ಕೆನ್ನಾಲಗೆಯ
ಕೆಂಪು ಬಾವುಟಕೆ
ರೈಲು ಗಕ್ಕನೆ ನಿಂತು
ದಾರಿಗಳ್ಳರ ಸುಲಿಗೆಗೆ
ಸೂರೆಯಾಗಲೇಬೇಕು !
ಇಲ್ಲಾ, ರೈಲು ಧಾವಿಸಿ ಬಂದು
ಈ ಖೆಡ್ಡಾದಲ್ಲಿ ಬಿದ್ದು
ಒದ್ದಾಡಲೇಬೇಕು !
ಈ ರೈಲು ಎಕ್ಸಿಡೆಂಟಿಗೆ ತುತ್ತಾಗಿ
ಗಿಜಿಗಿಜಿಯಾಗಿ ಬಿದ್ದ ಹೆಣದ ರಾಶಿಯ ಮೇಲೆ
ರಣಹದ್ದುಗಳು ಹಿಂಡುಗಟ್ಟಿ
ಹಾರಾಡಲೇ ಬೇಕು !
ನೋಡನೋಡುವುದರಲ್ಲೆ
ಎಲ್ಲವೂ ಮಣ್ಣೊಳಗೆ ಮಣ್ಣಾಗಿ
ಸುತ್ತಲೂ ಹಸಿರು ನಳನಳಿಸಿ ಹಬ್ಬಿ
ಈ ರಕ್ತ ಸರೋವರದೊಳಗೆ
ಕೆಂದಾವರೆ ಅರಳಿನಿಂತು
ಹೊಸಕಾಲದ ಹೊಸ ಜೀವನದ
ಹೊಸ ಮಕರಂದ ಸೂಸಬೇಕು
ಹೊಸ ತಂಗಾಳಿ ತೀಡಬೇಕು !
ಆಗ ಮಾತ್ರ ಭಾರತದ ಗಜಗರ್ಭ
ನಿಲ್ಲುವುದು ನಿಶ್ಚಯ
ಹೊಸ ಸಂತಾನ ಪರಂಪರೆ
ಸಲ್ಲುವುದು ನಿಶ್ಚಯ

# ವೀ. ಚಿಕ್ಕವೀರಯ್ಯ

## ಬಿಲ್ಲ ಹಿಡಿಯದೆ ಲೋಕ ಬದಲಾಗದು

ಅತೃಪ್ತಿ ಬೇಸರದ ಬೇಸಗೆಯ ಕಪ್ಪಿರುಳು.
ಹುದುಗಿ ಇಹವೊ ಇಲ್ಲವೊ ಎಂಬ ಮಾಡು ಗೂಡು.
ಬಡತನದ ಹಾಸಿನಲಿ ಅಮರಿಕೊಂಡಿರುವ ಸೆಕೆ,
ಹೊದಿಕೆ ಹೊದ್ದರೆ ಪ್ರಾಣ ಹೋಗುತ್ತದೆ.   ಹೊದೆಯದಿರೆ
ಸೊಳ್ಳೆ ;  ಮುದ್ದುಮೊಗ ದೂರದಲ್ಲಷ್ಟೆ ಕಂಡಡಗುವಳು.
ಇರವಿಗೂ ಕನಸಿಗೂ ಸ್ನೇಹ ಮೋಹಗಳಿರದೆ
ಮೈ ಮರೆವಿನೊಡನೆ ಸಂಬಂಧವುಂಟಾಗದಿವೆ
ಹೊರ ಹೊರಳಿ ನರಳುವಿಕೆ ಕೆರಳಿ ಸೊಳ್ಳೆಯ ಸೋವಿ
ಅರಳುವಿಕೆಗೂ ನನಗು ಸಂಬಂಧವೇರ್ಪಡದೆ
ನನಗು ನಿನಗೂ ಹಿಮಾಲಯ ದೂರ, ಭೂಭಾರ
ಇಲ್ಲಿ ಬದುಕಲಾಗದು, ಸಾವು ಎನಲು ಹೇಗದು ?
ಬಿಲ್ಲ ಹಿಡಿಯದೆ ಲೋಕ ಇನ್ನು ಬದಲಾಗದು
ಬದಲುಗೊಳಿಸದೆ ಸೊಳ್ಳೆ ರಕ್ತ ಕುಡಿವುದಬಿಡದು.

# ಹುತ್ತ

ಮಳೆಗಾಳಿ ಚಳಿ ಬಿಸಿಲಿಗೆ ಕಷ್ಟಪಟ್ಟು ಗೆದ್ದಲು
ಹುತ್ತಗಟ್ಟುವುವು. ಹುತ್ತ ಸಿದ್ಧವಾಗಲು ಗೆದ್ದಲ
ನುಂಗಿ ಹಾವು ಸೇರುವುವು. ದೊಡ್ಡದು ಚಿಕ್ಕದಕೆ
ಕಂಟಕವು. ಹಾವುಗಳಿಗೆ ಬಾಯಲ್ಲಿ ವಿಷ
ಸೊಟ್ಟ ಕೋವೆಯಲ್ಲೂ ಸರಿವ ಗುಣ, ಹಗಲು
ರಾತ್ರಿಯ ಭೇದವಿಲ್ಲ. ಇಲಿ ಕಪ್ಪೆ ತಿಂದು ಹೆಡೆ ಬಿಡಿಸಿ
ಹೆದರಿಸುವ ಉದ್ಯೋಗ. ಧೂಳು ಮೆರವಣಿಗೆಯಲಿ
ಬುಸುಗುಡುವ ಮೂರ್ತಿ. ಒಮ್ಮೊಮ್ಮೆ ಮನೆಗೂ ನುಗ್ಗಿ
ರಾಣ್ಯ ಹಾವಳಿ ಹತ್ಯೆ ; ಕೊನೆಯಿರದ ಮಿಥ್ಯೆ.
ಹಕ್ಕಿ ಹುತ್ತದ ಮೇಲೆ ಪ್ರಾತಃಕಾಲ ಲೋಕದ ಮೇಲೆ
ಹೊಸಬರೋ ಎಳೆಗಿರಣ ಮರಗಿಡ ಬಯಲು.
ಈ ಇಂಥ ಹೊತ್ತಲ್ಲು ಹಾವು ಹಿಡಿಯಿತು ಹಕ್ಕಿ
ಕಾಲುಗಳ. ಭಯಗ್ರಸ್ತ ಹಕ್ಕಿ ಚೀರಿತು ನಡುಗಿ
ಮುರಿದು ಬಿದ್ದಿತು ಹಾವ ಮೇಲೆ ಕಟ್ಟೆಗೆ ಎರಗಿ
ಹಿಂಸೆ ತಪ್ಪಿದ ಒಡನೆ ಹಾರಿ ಖಗ ನಗೆ ನಾಡು.

# ಜಿಜ್ಞಾಸೆ

ಜೀವಂತವಾಗಲು ದುರಂತ ಹೋಗುವುದಕ್ಕಿಂತ
ನಿರ್ಲಿಪ್ತ ಲೇಸು, ನಿರಿಕ್ಷೇಮ ಜಿಜ್ಞಾಸೆ
ಚಿನ್ನ ಮಾಡುವುದ ಕಲಿಸುವೆನೆಂದ ಗುರು ಬಲಿಸಿ
ಚಿಕ್ಕಪ್ಪನಿಗೆ ಹೆಂಡ ಭಂಗಿ ವಲಸೆ
ನುಚ್ಚುನುರಿ ಬದುಕು. ಹೆಚ್ಚೇನು ಉಳಿದಿಲ್ಲ
ತನ್ನ ಮಕ್ಕಳ ಕೊಲೆಯು ಕಂಡ ಥೋಪ್ರಾ
ಇದ್ದ ಒಬ್ಬನೆ ಮಗನ ಪೋಲೀಸಿನವರ
ಗುಂಡು ಸುಟ್ಟದ್ದಕ್ಕೆ
ವಿಚಾರಣೆ ಶಾಸ್ತ್ರ ಮುಗಿಸಲು ಬಂದ ಆಫೀಸರಗೆ
ಎಳನೀರ ಕೊಟ್ಟು ನಡುಬಿಸಿಲಲ್ಲಿ
ತನ್ನ ದುಃಖ ತಾನೆ ತಿನುವ ರೈತ ತಂದೆ.

ಮನೆ ದೊಡ್ಡದು, ಮನ ಚಿಕ್ಕದು
ಹುದ್ದೆ ಹಿರಿದು, ಹೃದಯ ಕಿರಿದು
ನೂರು ಹೊತ್ತೂ ಮೂಗಿಗೆ ಕವಡೆ ಕಟ್ಟಿಕೊಂಡು
ಗೆಯ್ದು ಕಂಬ ಸುತ್ತಿದರು
ನೀಸದು ಹೊಟ್ಟೆ
ಹಣತೆಕ್ಕೆ ರೆಕ್ಕೆ ಆಯುಷ್ಯವಿಲ್ಲ
ಆಧುನಿಕನೆನಿಸಿ ಆರೋಗ್ಯವಿರಲಿ
ನೂರಕ್ಕೆ ಎಪ್ಪತ್ತು ಹೆಬ್ಬೆಟ್ಟು
ಅದೃಶ್ಯಾಂಜನ ಹಚ್ಚಿ ಒಳಹೊಕ್ಕಾಗ ಎಲ್ಲರೂ
ಅತೃಪ್ತಿ ಅವ್ಯಕ್ತ ನೋವುಗಳೆ
ತಂದೆ ಮಕ್ಕಳು, ಗಂಡ ಹೆಂಡತಿ ಪ್ರೇಮಿ
ದಣಿ ಸೇವಕ ಗುಮಾನಿ ನೆನೆಗುದಿಗೆ ಬಿದ್ದ
ಬೆಳೆದು ಪ್ರಾಯ ಸಮರ್ಥ ಪ್ರಬುದ್ಧನಾಗದೆ
ಬಾಲಲೀಲೆಗಳಲ್ಲಿ ದೇವರಿದ್ದ.
ವಿಜಯೋತ್ಸವ ಭೂಪ
ಹಿಂದಿನಾಟಾಟೋಪ
ಕೊಳ್ಳೆ ಸಂಪತ್ತು

೩೧೩/ವೀ. ಚಿಕ್ಕವೀರಯ್ಯ

ಹಿರಿಯಳ ಹೆಸರು, ಕಿರಿಯಳ ಪ್ರೀತಿಯ ಮೊಹರು
ಸಾಲು ಸಾಲು ಕಂಬ ಸಿಂಬೆ
ಕೆತ್ತನೆ ಬಿಂಬ, ಪ್ರಭಾವಳಿ
ಭಕ್ತಿ ಪೌಳಿಯಲಿ ಮುಂದೆ ಕೂಡಿದರು
ಈಗ
ಹುಸಿ ಹೊಣೆಯಿಂದ ಹುಸಿಯಲ್ಲದ್ದ ತರಲು
ಜಂಬ ಕೊಚ್ಚುವ
ಬಣಗು ರಾಯರ ನೆರವಿಗಿರವಿ ಅಂಗಡಿಯಲ್ಲಿ
ಒತ್ತೆ ನಾಪತ್ತೆ
ದೇಶ ವಿದೇಶ
ಪಕ್ಷ ವಿಪಕ್ಷ
ನೆರೆಹೊರೆ ನಪುಂಸಕ ಗ್ಯಾಂಗು
ರಂಗು ರಾಗಗಳಿಲ್ಲ, ಇದ್ದರೂ
ಗಾಳಿ ಬೆಳಕುಗಳಂತೆ ಎಲ್ಲರಿಗು ತಲುಪಿಲ್ಲ
ಬೀಸುದೊಣ್ಣೆ ಎದುರು ಎದೆ ಸೆಟೆದ ನಿಲುವುಗಳಿಲ್ಲ
ಸತ್ಫಲದ ಮಾತು ಮುಗಿಲ ಗಂಟು.
ತಲೆದಿಂಬು ಶಬ್ದಗಳೆ
ಹಾಸಿಗೆಯಲ್ಲಿ ಮೈಚೆಲ್ಲಿ ಮುಗಿಯದ ಭಾಷೆ
ಮನತೆರೆದ ಮಾತೆ
ಬೆಣಚುಕಲ್ಲಂಥ ತೊಗೆ ಮೊಸರು ಕಾಣದೆ
ಕಡೆಗೋಲ ಹಿಡಿದು ನಿಂತೆ.

# ಹೊಸಯುಗ ಹೊಸಬಗೆ

ಚಂದ್ರನಿಂದ್ರ ದೃಷ್ಟಿ ಮುಚ್ಚಿ ನವರಸ ನವಿರು
ಮಳೆಯ ಹದಿನೆಂಟು ಮಮತೆ ಮುತ್ತಿಟ್ಟು
ಸೋಜಿಗ ತೆವರು.
ಇಳಿನೀರು ಸುಳಿಗಾಳಿ ಎಳೆಬಿಸಿಲು ಸಮತೆ ಆರೈಕೆ
ತೊಳೆದ ಮುತ್ತಿನ ಬಾನು ಉತ್ತು ಬಿತ್ತಿದ ಭೂಮಿ
ಒಬ್ಬನಿಗೆ ಎಷ್ಟೊ ಇನ್ನೊಬ್ಬನಿಗು ಅಷ್ಟೆ.
ಉಗುರುಕಣ್ಣು ಮಣ್ಣು ಮಾಡಿಕೊಳ್ಳದೆ
ನಲಿಯುವ ಬೆರಳೆಣಿಕೆ,
ಉಳಿದದ್ದು ಬರಿ ಉಸಿರು—
ಸತ್ತು ಸತ್ತು ಹುಟ್ಟಿ ಕಣ್ಣೀರಲ್ಲಿ ಕೈ ತೊಳೆದು
ನೆಗ್ಗಿ ನರಳುವ ಕೋಟಿ,
ಪರ
ಕತ್ತಲ ಜೊತೆ ಕಸರತ್ತು ಮಾಡಿತು ಬೆಳಕು
ಇರುಳ ಮಗ್ಗುಲ ಬೊಗ್ಗು ಬಡಿವ ಹಗಲು.
ವಿಷಮ ಅರ್ಥವ್ಯವಸ್ಥೆ ಕಷ್ಟದ ಮೂಲ
ತಡೆ ತಡೆದು ಬೆವೆತು ಹನಿಯೊಡೆದು
ಕಾವೇರಿ ಕ್ರಾಂತಿ ಮೈ ಕೋರೈಸಿ
ಕಣ್ಣನಾವರಿಸಿ ಕಿವಿ ಸುತ್ತಲೂ ಹಂಚುತಿದೆ
ಹೊಸ ಯುಗ ಹೊಸ ಬಗೆ
ಮೂಕ ದಲಿತ ದುಡಿವವಗೆ ಮಾನವತೆ
ಸೋದರತೆ ಸಂಕೀರ್ತನೆ.

೩೧೫/ವೀ. ಚಿಕ್ಕವೀರಯ್ಯ

# ಬಿ. ಆರ್. ಲಕ್ಷ್ಮಣರಾವ್

## ಎಚ್ಚರ

ಗಕ್ಕನೆ ಎಚ್ಚತ್ತಾಗ,
ಎತ್ತರ ಸಮಾನಂತರದಲ್ಲಿ
ಈ ಉದ್ದಾವುದ್ದ ಜಂತಿ,
ತರಾಯಿ,
ಗೋಡೆಯಿಂದ ಗೋಡೆಗೆ ತಂತಿ
ತಂತಿಗೆ ನೇತು
ನಿರ್ದೇಹ
ಜೋತಾಡುತ್ತಿರುವ
ಕಂಗೆಟ್ಟ
ದೊಗಲೆ
ಅಂಗಿ ಲುಂಗಿ ಶರಾಯಿ.
ಮೂಲೆಯಲ್ಲಿ
ನನ್ನ ಸ್ಪಷ್ಟ ಕಾಲಚ್ಚಿನ
ತಗ್ಗು ಶಿಲ್ಪದ
ದಿಕ್ಕೆಟ್ಟ
ಜೋಡಿ ಹವಾಯಿ
ಪಕ್ಕದ ಟೀಪಾಯಿ
ಯ ಮೇಲಿನ ಗಾಜಿನ ಹೂಜಿ
ಯೊಳಗೆ ವಾರದ
ನಾರದ
ನೀರು.

ಇಲ್ಲಿ
ಹಾಸಿಗೆಯಲ್ಲಿ
ಮೈ ಕೈ ಚೆಲ್ಲಿ ಅಂಗಾತ
ಸೆಟೆದು ಬಿದ್ದಿರುವ
ತನ್ನ ತನುವೇ,
ತನುವಿನೊಳಗಿನ ನಾನೆಂಬ
ಹತಾಶ ಮನವೇ,
ತಲ್ಲಣಿಸದಿರು ಕಂಡ್ಯ :
ಇದು ಸಾವಲ್ಲ
ಈ ಭವ್ಯ
ಭಾರತವೆಂಬ
ನನ್ನಷ್ಟೇ ಅನಾಥದೇಶದಲ್ಲಿ
ಕೇವಲ
ಮತ್ತೊಂದು ಎಚ್ಚರ
ದ ಬೆಳಗು.

# ಮಣ್ಣು ಹುಳ

ನನಗೆ ಬೇಡ :
ಈ ಭೂಮಿಯ ಸೆಳೆತ ಮೀರಿ
ದೂರ ಬಾಹ್ಯಾಕಾಶಕ್ಕೆ ಹಾರಿ
ದೆಸೆಗೆಟ್ಟು ತೊಳಲುವ
ಕ್ಷಿಪಣಿಯ ವ್ಯರ್ಥ ಛಲ :
ಶೂನ್ಯ ಫಲ.
ನನಗೆ ಖಂಡಿತ ಬೇಡ.
ಗಗನದಲ್ಲಿ ಹಾರಾಡಿ,
ಭೂಮಿಗೆ ಬಾಂಬ್ ಎಸೆವ
ಧೂರ್ತ ವಿಮಾನದಳ
ದಲ್ಲಿ ಸ್ಥಳ.
ನಾ ಹೊಗಬೇಕು ಭೂಮಿಯನ್ನು :
ಹೊಕ್ಕು, ಗಪಗಪ ಮುಕ್ಕಬೇಕು ಮಣ್ಣನ್ನು
ಮಣ್ಣಿನ ಸತ್ವ ನನಗೆ ಸಿಕ್ಕಬೇಕು ;
ನನ್ನ ಕಣಕಣದಲ್ಲೂ ಜೀವ ಉಕ್ಕಬೇಕು ;
ನಂತರ ನೀಳವಾಗಿ ನಿರಾಳವಾಗಿ
ನುಸುಳಬೇಕು ಹೊರಗೆ ;
ತುಂಡರಿಸಿ ಚೆಲ್ಲಿದರೂ ಚೂರು ಚೂರು
ವೃದ್ಧಿಯಾಗುವ
ಸಮೃದ್ಧಿಯಾಗುವ
ಸಿದ್ಧಿ ಬೇಕು ನನಗೆ ;
ನಾನಾಗಬೇಕು ರೈತನ ಬಂಧು
ಒಂದು ಮಣ್ಣು ಹುಳು.

# ದೊಡ್ಡರಂಗೇಗೌಡ

## ಆಕ್ರಂದನ

ಐಬುಗಳ ಮನನ ಮಾಡದೆ
ನಾವು ಬದಲಾಗುವುದು ಹೇಗೆ ?
ಅವಗುಣಗಳ ಕಳಚಿ ಊನ ವಾಸಿಯಾಗದೆ
ನಮ್ಮ ಪ್ರಗತಿಪಥ ದಕ್ಕುವುದು ಹೇಗೆ ?

ಹೆಜ್ಜೆ ಇಟ್ಟಲ್ಲೆಲ್ಲಾ ಚೂಪು ಮುಳ್ಳು ತಾಕಿ
ಸಾಗದು ನಡಿಗೆ
ಸೋತ ಜೀವಗಳು ಸಾವಿನಾಹವದೊಳಗೆ ಮೂರು ಹೊತ್ತೂ ಸೆಣಸಿ
ಎದ್ದಿದೆ ಕುದಿತ ಪ್ರತಿ ಹೃದಯದೊಳಗೆ ;

ರಾತ್ರಿಯೆಲ್ಲಾ ಆಕ್ಕಪಕ್ಕದವರ ಅಳಲ ಕೇಳಿ
ನಿದ್ದೆ ಬರದು ನನಗೆ—
ಸುತ್ತ ಒಡೆದ ಮಾತು ಮನ ಜೀವನ
ಕಲಕಿದೆ ಮಾನವೀಯತೆ.

ಈ ಮಣ್ಣಿನ ಮೇಲಿನ ಬದುಕಿನ ತುಂಬಾ
ಭ್ರಷ್ಟವಾದ ಅಪಾರ ಉಸಿರು ಹರಿದು
ಇಲ್ಲವಾಗಿದೆ ಯಾವುದೇ ರೀತಿ–ನೀತಿ....

ದೋಷಗಳು ಅರಿವಾಗದೆ
ಎದುರೆದುರೇ ಕಂದರ ತೆರವಾಗಿದೆ
ಇತಿಮಿತಿಗಳು ಗಮನಕ್ಕೆ ಬಾರದೆ

ಬಿರಿಯುತ್ತೆ ಕಹಿಪ್ರವಾಹ ಬೆಳಗಾದರೆ....
ಅಸಹ್ಯದಲ್ಲಿ ಇರುಳೆಲ್ಲ ಹೊರಳುತ್ತೆ
ಅಸಹಾಯಕತೆ ಹೆರುತ್ತಿದೆ ಭೀಕರ ನರಕ ;
ನಾಡಿನ ಮಡಿಲಲ್ಲಿ ಮಲಿನದಾಸ್ತಿ ಬೆಳೆದಿದೆ

ನಮ್ಮ ಜನ ತಾವು ತಮ್ಮ ನೆಲ—
ಹಾಳು ಬೀಳಬಾರದೆಂಬ ಅನ್ನಿಸಿಕೆ ಪಡೆಯದೆ
ಹೇಗಾದೀತು ಮುನ್ನಡೆ ?
ಜನಸಾಮಾನ್ಯರ ಆಕ್ರಂದನ ಮೊರೆ ಮೊರೆದು ಸುತ್ತುತ್ತಿದೆ
ಈ ಮರ್ತ್ಯ ಇಲ್ಲದ ಸ್ವರ್ಗಗಳ ಕಲ್ಪಿಸಿಕೊಂಡು
ಇರುವಲ್ಲೇ ರಣರಂಗವಾಗಿದೆ ಬದುಕು ;

ಭೀತ ಮನದ ನಿಶ್ಶಕ್ತ ಗಣದ
ಬಾಳಿನಲ್ಲಿ ಸೋಡಿಯಾಗಿದೆ ಧೈರ್ಯ.

ಮೌಢ್ಯವನ್ನು ಅನುದಿನ—
ಅನುಸರಿಸುವ ಅವಿದ್ಯಾಗುಂಪಿನ ಗೋಳೊಂದೆಡೆ
ದುರ್ಬಲರ ರಕ್ತವನ್ನು ಹೀರಿ ಬೆಳೆದು
ಭೋಗಗಾನ ಹಾಡುವವರಿನ್ನೊಂದೆಡೆ ;

ಇದೆಲ್ಲಕ್ಕೂ ದೂರವಾದ ಅಲಿಪ್ತರ ಭೀಷಣ ಮೌನ ಮತ್ತೊಂದೆಡೆ
ಬಂದು ಇದೆಂಥ ದಿನ ? ಏಕೀಪೀಡಿತ ಆಕ್ರಂದನ ?

# ಪ್ರಕೃತಿ

ಬೆಂಕಿ ಬಿದ್ದಿದೆ ಗುಡಿಸಲ ತುತ್ತಿನ ಚೀಲಗಳಿಗೆ
ಮೇಲೆತ್ತುವವರೇ ಇಲ್ಲ
ಬೀದಿ ತುಂಬ ಗರೀಬರ ಜಾತ್ರೆ ಇರುಳೊಳಗೆ
ಸುಖಿಸುವರು ಬಲಾತ್ಕಾರದೊಳಗೆ ಬಲ್ಲಿದರು
ಬಿಟ್ಟಿ ಸಿಕ್ಕವರ ಮೈ ಮಾಂಸಗಳನ್ನೆಲ್ಲಾ....

ನಡೆದಿದೆ ಊಳಿಗದ ಜನರ ಬಾಯಿ ಹೊಲಿದು
ನೆತ್ತರ ಬಸಿಯುವ ಕಥೆ
ಜಠರ ಸಾಯುವ ತನಕ ಅಸು ತುತ್ತ ಕೇಳುವುದನ್ನು
ನಿಲ್ಲಿಸುವುದಿಲ್ಲ–ಈ ಮಂದಿ ನರಳಿಕೆ ರಾಗ
ಎಳೆಯುವುದೂ ತಪ್ಪಲಿಲ್ಲ.

ಎತ್ತ ವಿದಾಯ ಹೇಳ ಹೊರಟರೂ ಮುತ್ತಿಕೊಳ್ಳುವ
ವ್ಯಾಕುಲ–ಭಾರತದ ಮನುಕುಲದ ದಾರುಣ ಚರಿತ್ರೆ
ತಮಟೆ ಬಡಿದು ಸಾರುತ್ತಿದೆ ವಿಹ್ವಲಗೋಳ.

ಕೈಕಾಲು ಮೈ ಹೆತ್ತ ಬಿಲ್ಲೆಗಳಿಗೆ
ಅಂಗಡಿಯೊಳಗೆ ಬೆಲೆಯಿಲ್ಲ
ಹಗಲು ಇರುಳು ರಕ್ತ ಸುರಿದು ಕೂಡಿಸಿದ
ಹನಿ ಹನಿಗೂ ರೊಟ್ಟಿ ಹುಟ್ಟದು

ಬಾಯಿ ನಿರೀಕ್ಷಿಸುತ್ತೆ
ನಾಲಗೆಯೊಳಗೆ ನೀರೂರುತ್ತೆ
ಕೈ ಬೆರಳು ಹಿಡಿಕೂಳ ಹಿಡಿಯಲು ಕಾತರಿಸುತ್ತೆ

ಬರಿ ಜೊಲ್ಲ ತಿಂದು ಬದುಕುವ ಹಾಗಿಲ್ಲ
ವಾಸ್ತವದ ಕ್ರೂರ ಕಾಲನ ದವಡೆಯೊಳಗೆ
ಮೂಳೆದೇಹಗಳ ಸಾಮೂಹಿಕ ಕೊಲೆ.

ಎಮುಕೆಗಳೂ ಹಿಟ್ಟು ಕೇಳುವ ಕೂಗಿಗೆ
ನರಕ ಸ್ಪರ್ಶ ಕಂಡಿತು ಬಡಬಾಳು
ಸುತ್ತಲ ಥಳುಕಿನ ಲೋಕ ಶಾಪ ಹಾಕಿದೆ
ವಿಮೋಚನೆಯೇ ಇಲ್ಲ....

ಈ ಜಗದ ತೊಟ್ಟಲಿಗೆ ಬಿದ್ದ ತಪ್ಪಿಗೆ ತಿನ್ನುವ
ಕೆಲಸ ಮಾಡುವ ಆರಾಮು ಕಾಣುವ ಗತಿಗಳಿಗೆ
ನಾನು ನೀನು ಇವನು ಎಲ್ಲರೊಂದೇ—
ತೆಪ್ಪ ಹತ್ತಿ ಕೂತಿದ್ದರೂ,

ಅಲ್ಲಿ ಒಬ್ಬನಿಗೆ ಮೆತ್ತೆಸೀಟು
ಮತ್ತೊಬ್ಬನಿಗೆ ಜಾಗವೇ ಇಲ್ಲ
ಮಗದೊಬ್ಬ ಭೂಪ ಕಾಲುಚಾಚಿ ನಡೆಸಿದ್ದಾನೆ ದರ್ಪ
ಯಾವ ಹಣೆಬರಹ ಸೃಷ್ಟಿಸಿತು ಇದನ್ನೆಲ್ಲಾ ?

ಎಲ್ಲರೂ ಬರುವಾಗ ಇಲ್ಲಿನ ಆದಿ ಅಂತ್ಯಗಳ
ವಿಧಿ ಲಿಖಿತ ಪಡೆಯುವುದು ಒಂದೇ—ಎಂಬುದೆಲ್ಲ
ತತ್ವಗಳಾಗಿ ನಂಬಿಕೆಯ ಉಸಿರಾಗಿ
ನಡೆದ ಸನಾತನ ಪಥದೊಳಗೆ
ಸಾವಿರದ ತಾರತಮ್ಯ ನರ್ತಿಸಿವೆ ನಗ್ನ.

# ಎಚ್. ಎಸ್. ವೆಂಕಟೇಶಮೂರ್ತಿ

## ಕೆಂಚಿ ದ್ಯಾಮರ ಕತೆ

ದಿನವೆಲ್ಲ ದುಡಿ ಹಿಡಿ ಎರಡು ರೂಪಾಯಿ
ಬಡಪಾಯಿ ಕೆಂಚಿ ದ್ಯಾಮನ ಹೆಂಡತಿ
ಸಾಲುಗಳ ನಡುವೆ ದೇಕುವ ತುಂಬು ಬಸುರಿನುಡು
ಬಗಿವ ಜಗ್ಗಿದ ಹೊಟ್ಟೆ ಹೊರೆವ ಹುಡುಗಿ
ದ್ಯಾಮ ಸ್ವಾಮಿಗಳಾಳುಮಗ ಅವನ ಹೆಗಲಮೇ
ಲಿದೆ ಶ್ಯಾನುಭೋಗರ ನೊಗ ಸಾಲು ಹೊಡೆದಾಗಿ
ಶಾಗಿ ಬಿತ್ತಿದ್ದಾಗಿ ತದ್ದ ಬೀಜದ ಹೊರಿ
ಗರಿಕೆಯಾಸೆಗೆ ಕತ್ತು ಇಳಿಸೆ ನೆಕ್ಕಲು ಚಾಟಿ.

ಉಚ್ಚಿದರೆ ಗೊಬ್ಬರ ಅದರ ಮುಸುಡಿಯ ಮುಂದೆ
ಕನಸುಗಳು ಕೆರೆಯ ಬಯಲಲ್ಲಿ ಅವರೇಬಳ್ಳಿ
ದ್ಯಾಮ ಇದರವ್ವನೆಂದೊದ್ದಾಗ ಕನಸು ಹರಿ
ದದರಾಚೆ ಕೆರೆಯ ಬಯಲಲ್ಲಿ ಮಾದರ ಚೆನ್ನ.

ಒಗೆದ ಪಂಜರದಲ್ಲಿ ಮುದ್ದುರಣ ಹದ್ದುಕೆ
ಕ್ಕರಿಸಿ ಸುಮಧುರ ಗೀತೆಯೊರಲೆ ದ್ಯಾಮನು ಬೆಚ್ಚಿ
ಮತ್ತೆ ಕತ್ತಿಳಿಸಿ ಬಿತ್ತನೆ ಸಾಗಿಸಿದ ನೇಗಿ
ಲಿನ ಯೋಗಿ ಅಹ !  ನೇಗಿಲಯೋಗಿ ಇತ್ತ
ಹೊಲದಲ್ಲಿ ಸಾಯುತ್ತ ಕೆಂಚಿಯಲ್ಲಿ ಬದುಕುತ್ತ
ಚಿಂದಿ ಹಾಸಗೆಯಲ್ಲಿ ಕಾಲುಗಳ ಬೆದಕುತ್ತ

ರಂಗ ಮರಿಸಿಂಗ ಕೆಂಪಣ್ಣ ರಾಗಾಗುತ್ತ
ನಿಂಗಿ ಗುರುಸಿದ್ದಿ ಲಕ್ಕವ್ವಗಳನಾಯುತ್ತ
ಬಾಳ ನೂಕುವ ಮೂಕಿನ ಮೇಲೆ ಕೂತ ದನಿ
ನೀಲಿಯಲಿ ಕಣ್ಣು ಬಿತ್ತುವುದೈತೆ ಗೊತ್ತೈತ
ಗೊತ್ತೈತ ಬುದ್ದಿ ಮಳೆ ಬಿದ್ದರೊಕ್ಕಲ ಜಾತಿ
ತಮ್ಮ ಹೆಂಡಿರಸ್ತೈತ ಖುಷಿ ಪಡುವ ಸುದ್ದಿ ?
ಗೌಡ ಬಂದರೆ ಕೈಮುಗಿದು ಆರಡಿಯಾಳು
ಹಲ್ಗಿಂಜಿ ದರವೇಶಿ ಅಂತ ಬೈಗಳ ತಾಳಿ
ಹರಿದ ತುಂಡಿನ ಒಳಗೆ ನಿಮಿರಿ ಮೈಕರಗಿ ಸುಯ್
ಗರೆದು ಬಯ್ಯುತ್ತ ಎತ್ತಿನ ಬಾಲ ಮುರಿದು ಛಾ
ಎಂದು ಬಾಲದ ಹಿಂದೆ ಸಾಗುವುದು ಗೊತ್ತೈತ ?

ತೆಂಕಿಂದ ಬಡಗಕ್ಕೆ ಬಡಗಿಂದ ತೆಂಕಕ್ಕೆ
ರಾತ್ನಾಗ ಕಣ್ತಪ್ಪಿ ಹೆಂಡಕ್ಕೆ ಖಂಡಕ್ಕೆ
ಒತರ್ನಾಗ ಎದ್ದು ಮೈ ಮುರಿದು ಪಿಸುರನು ತೊಡೆದು
ಮುದ್ದೆಗಳ ಗಿಡಿದು ಕಡ್ಡಿಯ ತೆರೆದು ಪುಸ್ಸೆಂದು
ಬೀಡಿ ಹೊಗೆ ಉಗಿದು ಗೋಟಡಕೆ ಬಾಯಿಗೆ ಫಕ್ಕ
ನೊಗದ ನೇಗಿಲ ಹೊತ್ತು ಹೊತ್ತೇರುತಿರೆ ಸಾಲ
ಹಿಂದೆಯೇ ಸಾಗುವುದು ಎರಡು ಕಾಲಿನ ಬದುಕು.

ಶಾಸ್ತ್ರಿಗಳ ಬದುಕು ಗೌಡರ ಬದುಕು ನಡುವೆ ಕೆಂ
ಗಲಿನಲ್ಲಿ ರಾತ್ರಿ ಬದಗಳ ನಡುವೆ ತಡಿಯಲ್ಲಿ
ಬಾಲಗಳ ಹಿಂದೆ ಸಾಗುವುದು ದ್ಯಾವ ಬದುಕು
ಹೊಲದಲ್ಲಿ ಹೆಜ್ಜೆಗಳ ಬಿತ್ತಿ ಕಾಯುವ ಬದುಕು.

# ಎಂ. ಎಸ್. ಜೈಪ್ರಕಾಶ್

## ಆರಣ್ಯಗೀತೆ

ಈ ಅಭಯಾರಣ್ಯದಲ್ಲಿ ಭಯವೇ ಇಲ್ಲ—ಮೃಗಗಳಿಗೆ ಭಯ.
ವೇತಕ್ಕೆ ಪ್ರಾಣಿಗಳಿಗೆ ? ಮನುಷ್ಯ ಜಾತಿಯವು ಇಲ್ಲಿ
ಎತ್ತುವ ಹಾಗಿಲ್ಲ ತುಫಾಕಿ ಸಿಡಿಮದ್ದು ಅಥವಾ ಪಿಸ್ತೂಲು.
ನೋಡಬಹುದು, ಶ್ರೀಮಂತಿಕೆಯಿದ್ದರೆ ಬಂದು ಮಜಬೂತು ಕಾರುಗಳಲ್ಲಿ,
ಕೌಟುಂಬಿಕನಾಗಿದ್ದರೆ ಗಾಂಧೀ ಸೀಟಿನ ಲಟಾರಿ ಬಸ್ಸುಗಳಲ್ಲಿ,
ಹೊಸ ಜೋಡಿಯಾಗಿದ್ದರೆ ವೆಸ್ಪಾದಂಥ ಸ್ಕೂಟರಲ್ಲಿ
ನಡು ಬಳಸಿ.
ನೋಟವೆಂದರೆ ಯಾರಿಗೆ ಇಷ್ಟವಿಲ್ಲ ? ನೆರೆಯುತ್ತಾರೆ ಮಂದಿ
ಇಲ್ಲಿ ಸರಿಯಾದ ಕಾಲದಲ್ಲಿ, ಎಂಥೆಂಥವೋ ಕಾಡು ಪ್ರಾಣಿಗಳನ್ನು
ನೋಡಲು ಅವುಗಳ ಸ್ವತಂತ್ರ ಭಂಗಿಗಳಲ್ಲಿ. ಬೆಳ್ದಿಂಗಳ ರಾತ್ರಿ
ಯಾದರೆ ಇನ್ನಷ್ಟು ಚೆಂದ. ಹೆಣ್ಣಾನೆಗಳು, ಕೊಂಬನ್ನುಳ್ಳ
ಸಲಗಗಳು ನಿಂತ ನೀರಿನ ಕೊಳದಲ್ಲಿ ಕಲೆಯುತ್ತವೆ. ಕಾಮನಾಟ
ಆಡುತ್ತವೆ. ಜನ ಸ್ತಬ್ಧ ನೋಡುತ್ತಾರೆ. ಪುಕ್ಕಟೆರತಿ ಯಾರಿಗಿಷ್ಟವಿಲ್ಲ ?
ಈ ಕಾಡಲ್ಲಿ ಪ್ರಾಣಿಗಳ ಕೊಲ್ಲುವಂತಿಲ್ಲ. ಆದರೆ ಪ್ರಾಣಿಗಳು
ಬೇಟೆಯಾಡಬಹುದು ತಮಗಾಗಿ–ತಮ್ಮ ಮರಿಗಳಿಗಾಗಿ
ಅದೋ ಚಿರತೆ–ಎಷ್ಟುದ್ದ ಅದರ ಬೆನ್ನ ಮೇಲಿರುವ ಪಟ್ಟೆ ಪಟ್ಟೆ
ಬಿಸಿರಕ್ತ ಸೋರುತಿದೆ ಅದರ ಬಾಯಿಗೆ ಸಿಕ್ಕ ಜಿಂಕೆಯೊಡಲಿಂದ
ವಿಲಿವಿಲಿ ಒದ್ದಾಟ ಎಷ್ಟು ನಿಮಿಷದ ತನಕ ? ಬರಿ ನೋಟಕರಾದ
ಬೇಟೆಗಾರರಿಗೆ ಇದು ರೋಮಾಂಚಕ. ಕೊನೆಯಲ್ಲಿ ನಿಂತ
ಸಾಮಾನ್ಯ ಗಂಡುಗಳಿಗೂ ತಮ್ಮ ಮದುವೆಯ ದಿನ ನೆನಪಾದರೆ
ಅತ್ಯಂತ ರೋಚಕ! ಹಸುವಿನಂತಹ ಹೆಂಗಳೆಯರ ಗುಂಪಿಗೆ

ಹೃದಯದಲ್ಲೆಲ್ಲಾ ರಕ್ತ ಪರಿಚಲನೆ ಏರಿ ಆಗುವುದು ಕಲಮಲ
ಇಂಥ ಹೊತ್ತಲ್ಲೂ ಎಂಟೆದೆಯ ಬಂಟನೂ ಜೋಡುನಳಿಗೆ ಎತ್ತುವಂತಿಲ್ಲ
ಈ ವನದ ಸಂವಿಧಾನಕ್ಕೆ ಯಾವ ಮಗನೂ ಆಗಬೇಕು ಬದ್ಧ
ಅಂತೂ ಇಲ್ಲಿಗೆ ಬಂದ ಪ್ರವಾಸಿ ಏನು ಬೇಕಾದರೂ, ಉದಾ :—
ಪ್ರಾಣಿಗಳ ಅತಿವೈಯಕ್ತಿಕ ಲೋಕಗಳನ್ನು ವೀಕ್ಷಿಸಬಹುದು : ವ್ಯಾಘ್ರ
ಗಳ ಹಮ್ಮು. ಚಿಗರೆಗಳ ದುಃಖ, ಚಿರತೆಯ ಬೇಟೆಯ ವಿಧ ವಿಧ
ಸ್ವರೂಪ. ಆನೆಗಳ ನಾನಿನಗೆ ನೀನನಗೆಂಬ ಪ್ರೀತಿಯ ಆಟ.
ಇಲ್ಲ ಇದಕ್ಕೆಲ್ಲ ಆಕ್ಷೇಪ. ಅದಕ್ಕೇ ಗುಂಪು ಗುಂಪು ಜನ ಜನ ಜನ
ಘೇರಾಯಿಸುತ್ತಾರೆ ಋತುವಿನಲ್ಲಿ. ಈ ಸಮಸ್ತವನ್ನೂ ಕಣ್‌ಬಿಟ್ಟು
ಬಾಯ್ಮುಚ್ಚಿ ಏಕಲವ್ಯನ ಏಕಾಗ್ರತೆಯಲ್ಲಿ. ಆ ನಿಷ್ಠೆಯಲ್ಲಿ ನೋಡುತ್ತಾ
ಕಲಿಯುತ್ತಾರೆ. ಕಲಿಯುವಿಕೆ ವ್ಯಕ್ತಿವಿಕಾಸಕ್ಕೆ ಬಹಳ ಅಗತ್ಯ ಹೌದಯ್ಯಾ
ಕಲಿತದ್ದೂ ಎಂದೂ ಪುಗಸಟ್ಟೆ ವ್ಯರ್ಥವಾಗುವುದಿಲ್ಲ. ಹೊಸ ಹೊಸ
ವಿದ್ಯೆಗಳನು ಕಲಿಯುವುದರಲ್ಲಿ—ಕಲಿತಿದ್ದ ಸ್ವಂತ ಫಾಯ್ದೆಗೆ ಪ್ರಯೋಗಿಸುವುದರಲ್ಲಿ
ಈ ಮನುಷ್ಯ ಪ್ರಾಣಿಗೆ ಸರಿಗಟ್ಟುವವರಿಲ್ಲ.
ಆದ್ದರಿಂದಲೇ ಈ ಅಭಯಾರಣ್ಯದಾಚೆ ಬೇಕಾದಷ್ಟು ಇರುವ
ಜನಾರಣ್ಯಗಳಲ್ಲಿ ಈಗೀಗ ಕಣ್ಬಿಟ್ಟು ಹುಡುಕಿದರೂ ಜನರೇ ಇಲ್ಲ.

# ಸಿದ್ಧನ ಸಾಮಾಜಿಕ ಉತ್ತರ

ನೀರು ನೆರಳಿಲ್ಲದೆ ನಿರ್ನಾಮವಾದವರಿಗೆ–ಅಂದರೆ—
ಮನೆಯಿಲ್ಲದವರಿಗೆ ಚಂದದ ಮನೆ,
ಹೊರೆ ಹೊತ್ತು ಹೊತ್ತು ಮಣ್ಣು ಮುಕ್ಕುವ ಬೆನ್ನೆಲುಬಿಗೆ–ಅಂದರೆ—
ಗೆಯ್ದು ಗೆಯ್ದು ಜೀರ್ಣವಾದವರಿಗೆ ಜೀತ ವಿಮುಕ್ತಿ,
ಒಯ್ಯನೆ ಹಸಿರು ತೆನೆ ಬಾಗಿ ಬಾಗಿ ಬಳುಕಲು–ಅಂದರೆ—
ಸ್ವಂತ ನೆಲವಿಲ್ಲದವರಿಗೆ ಗೇಣಿಯಿಲ್ಲದ ಹೊಲ,
ಗೌರಿ ಜಯ ತಾಯ್‌ಚುಂಗುಗಳ ಹೈಬ್ರೀಡ್ ಗರಿ ಹಾರಿಸಲು–ಅಂದರೆ
ಚಕ್ರ ಬಡ್ಡಿಗಳಿಲ್ಲದ ಏಕ ಗಂಟಿನ ಸರಹ ಹಣ–ಥೈಲಿ
ಇತ್ಯಾದಿ ಈ ಅಪೂರ್ವ ಸಾಧನೆಗಳ ಸಿದ್ಧಿಗೆಲ್ಲ
ಪಾತ್ರ ನೀನು–ಗೊತ್ತ ಸಿದ್ಧಾ ?
ಹೌದಯ್ಯ–ಚಿನ್ನದಂಥ ಮಾತು !
ಆದರೆ ಸರ್ಕಾರ ಕಾಯ್ದಿಟ್ಟ ಸವಲತ್ತುಗಳ
ಕೃಪಾಛತ್ರದಡಿ ಕಡ್ಡಾಯ ಶಿಕ್ಷಣಕ್ಕೊಳಗಾದ
ನನ್ನ ಮಗ ಕೊನೆಗೆ ಅದಕ್ಕೇ ಮರುಳಾಗಿ—
ಬೆಡ್‌ಲ್ಯಾಂಪಿನಡಿಯಲ್ಲಿ
ಓದಿದ ಓದಿದ ಓದೇ ಓದಿದ ; ರಾಶಿ ಪುಸ್ತಕಗಳನ್ನು
ನುಣ್ಣನೆಯ ದುಬಾರಿ ಪೆನ್ನು ಹಿಡಿದು
ಬರೆದ ಬರೆದ ಬರೆದೇ ಬರೆದ ; ಹಾಲು ಕಾಗದದ ತುಂಬ
ಈಗ–ಹೌದು–ಈಗ—
ದಪ್ಪೋ ದಪ್ಪ ಬುಕ್ಕುಗಳ ಹಿಡಿದ ಕೈಗೆ
ಲೇಖಣಿಯಲ್ಲಿ ಮಲ್ಲಿಗೆಯಕ್ಷರಗಳ ಅರಳಿಸಿದ ಬೆರಳುಗಳಿಗೆ ಅಯ್ಯಾ—
ಹಾರೆ ಪಿಕಾಸೆ ಕತ್ತಿ ಉಳ ನೇಗಿಲುಗಳ ಮೂಲ ಮಣ್ಣಿನ ಸಂಭ್ರಮ
ತಡೆಯುವುದಿಲ್ಲವಂತಯ್ಯಾ–ಗೊತ್ತಾ....

೩೨೭/ಎಂ. ಎನ್. ಜೈಪ್ರಕಾಶ್

# ಸಿ. ವೀರಣ್ಣ

## ಮುಂಗಾರು

ಬಿರಿದ ನೆಲ ಬಿಟ್ಟ ಬಾಯ್
ಕಾಲಿಟ್ಟ ಕಡೆಯಲೆಲ್ಲ
ಸುಟ್ಟು ಬೊಬ್ಬೆ ಬರಿಸುವ
ಬೇಗೆ, ಫಲ ಕೊಡುವ
ಮರಗಿಡಗಳೆಲ್ಲ ಒಣಗಿ
ಪ್ರೇತಗಳಾಗಿ ನಿಂತಿವೆ.
ಉಸಿರಾಡಿದರೂ ಬೆಂಕಿ
ಕಾಸಿದಂತೆ ಮೈಗೆ
ಬಣಬಣಗುಟ್ಟುವ ಒಣನೆಲಕೆ
ಬರಬಾರದೆ ಮುಂಗಾರು ?
ದಿಕ್ಕು ದಿಕ್ಕಿಗೆ ಚದುರಿ
ಹೋಗಿವೆ ಮಳೆಸುರಿವ ಮೋಡ,
ಎದ್ದಿವೆ ಮೂಡಲೊಲಿಂದ
ಆಕಾಶಕ್ಕೆ ಮುತ್ತಿಕ್ಕ ಹೊರಟ
ಬಿರುಗಾಳಿ, ಕೂಡಿ ಬೆಸೆದು
ತೂಗಿದೆ ಮೋಡಗಳ ಒಡಲ,
ಒಣಗಿನಿಂತ ಕೊಂಬೆಗಳಲಿ
ಜಗ್ಗನೆದ್ದಿದೆ ಮಿಂಚು
ಹರಡಿನಿಂತ ಗಿಡಗಳಲ್ಲಿ
ಗೂಡು ಕಟ್ಟಿದೆ ಸಿಡಿಲು
ತೆರಗಾದ ಎಲೆಗಳೊಳಗೆ

ಕೆರುಳು ಕುಯ್ವ ಸದ್ದಿಗೆ
ಬಿದ್ದಿತಲ್ಲ ಇಳೆಗೆ ಮಳೆ
ಬಿದ್ದ ಹನಿಗೆ ಮಣ್ಣ ಕಂಪು
ಬಂದಿತಲ್ಲ ಗಾಳಿಗೆ.
ತೇಲಿ ಬಂದ ಗಾಳಿಯೊಳಗೆ
ಚಿಮ್ಮಿತಲ್ಲ ಜೀವ ಜಂತು
ಉರುಳಿಬಿದ್ದ ನೀರಿನಲ್ಲಿ
ರಸದ ಬುಗ್ಗೆ ಉಕ್ಕಿತು
ಒಣಗಿ ಬಿದ್ದ ಮರಗಳಲ್ಲಿ
ಜೀವ ತಳಿತು ತಳಿರು ಮಾಡಿ
ರಾಗ ತುಂಬಿಕೊಂಡಿತು
ಆಕಾಶಕು ಬಳಿಯಿತು
ಕೆನ್ನೆ ಕೆಂಪಗಾಯಿತು
ನೆಲವನ್ನೆಲ್ಲ ಕೂಡಿತು
ಹರಿವ ನೀರಿನಲ್ಲಿ ಹಳ್ಳ ಕೊಳ್ಳ ಮುಳುಗಿತು
ಒಣಗಿದಂಥ ಕೊರಳಿನಲ್ಲಿ
ದನಿಯು ಮೂಡಿ
ಬಂದಿತು.

೨.೯೯/೩. ವೀರಣ್ಣ

# ನರಗುಂದ ಬಂಧುಗಳು

ಬಿಸಿಲ ಬೇಗೆಗೆ ಬಿರಿದ ನೆಲದೊಳಗಿಂದ ಬಿಸಿಯುಸಿರು
ಬಸಿರಿಟ್ಟ ಬೀಜಗಳ ಸುಟ್ಟು ಹೊಗೆಯಾಡುತಿದೆ ಗಾಳಿಯಲ್ಲಿ
ನೊಗ ಹೊತ್ತ ಜೀವಗಳು ಜಡವಾಗಿ ಬಡವಾಗಿ
ಎಲುಬುಗೂಡುಗಳಾಗಿ ಹಸಿರು ಕಾಣದೆ
ಉಸಿರಡಗಿ ಮೂಳೆ ಚಕ್ಕಳದ ತಟ್ಟೆಗಳು.
ನೀರಿಲ್ಲದ ಕಾಲುವೆಗಳು ಕೆಸರಿಲ್ಲದ ಕುಂಟೆಗಳಲ್ಲಿ
ಒಣಗಿ ತರಗಾದ ಮೀನುಗಳ ರಾಶಿ.
ಹಾರಾಡುತ್ತಿರುವ ಹದ್ದು ಕಾಗೆಗಳ ಸದ್ದಿಲ್ಲ.
ಗುಡ್ಡ ಬೆಟ್ಟಗಳಲ್ಲಿ ಮುಖ ಸೋತ ಗಿಡ ಮರ ಬಳ್ಳಿ
ಸುಟ್ಟು ಸುಡುಗಾಡಾದ ಕರುನಾಡ ನೆಲ.
ನೀರು ಬತ್ತಿದ ಕಣ್ಣುಗಳು, ಮಾಂಸವಿಲ್ಲದ ಮೂಳೆಗಳು
ಓಡಾಡುತ್ತಿವೆ ಹೊಲದ ಬದುಗಳ ಮೇಲೆ
ತಲೆ ಎತ್ತಿ ಆಕಾಶದತ್ತ ಹತ್ತಿರಾಶಿಯ ಕಂಡು ಸಂಕಟದ
ಸಮರದಲ್ಲಿ ಬದುಕಿವೆ–ಬದುಕು ಮನ್ನಿಸು ಎಂದು.
ನಾರು ಹುಣ್ಣಿಗೆ ಬರೆ ಇಕ್ಕಿದಂತೆ, ಬರಗಾಲಕ್ಕೆ ನೆಂಟರು
ಬಂದರೋ ಬಂದರು ಕಂದಾಯ ಸುಂಕಗಳ ಸುಲಿಗೆಗೆ
ಅಧಿಕಾರಿಗಳ ದಂಡು ಚಿರತೆ ಹಿಂಡಾಗಿ.
ಎತ್ತಿ ಎಸೆದರು ಆಚೆ ಇದ್ದ ಬದ್ದುದನೆಲ್ಲ ಚಂಬು ತಣಿಗೆ,
ನೆಲಕೆ ಬಿದ್ದ ಸದ್ದಿಗೆ ಭೂತಾಯಿ ಎದೆಯೊಡೆದು ಅತ್ತಳೋ
ಮಿಳಮಿಳನೆ ನೋಡಿ ಗಳಗಳನೆ ಅಳುವಾಗ
ಕರುಳ ಕತ್ತರಿಸಿ ಎಳೆದೆಳೆದು ಸೆಳೆದರೋ
ಬತ್ತಿಹೋಗಿದೆ ಕಣ್ಣು ಬಲವಿಲ್ಲ ಭುಜದೊಳಗೆ
ಎದೆಯೊಳಗೆ ರಂಜಕದ ಕಿಡಿಹತ್ತಿ ಕಣ್ಣೊಳಗೆ
ತುಳುಕಿ ಗಾಳಿಯಲಿ ಸುಳಿಸುಳಿದು ಮುಖ ಮುಖಗಳಲಿ
ಎದುರೆದ್ದು ನುಗ್ಗಿ ಮೈಕೊಡವಿ ಕುಡುಗೋಲು ಕೊಡಲಿ
ರಾಟೆ ಮೋಟಗಳ ಹಿಡಿದು ಕಾಲಿಟ್ಟ ಕಡೆಯಲ್ಲೆಲ್ಲ ಲಂಕಾದಹನ
ಕೋವಿನಳಿಗೆಗಳ ಪೆಲ್ಲು ಹೊಗೆಗಳಿಗೆ ಎದೆಕೊಟ್ಟು
ಹೊಡೆದ ಗುಂಡುಗಳ ಬಾಯಲ್ಲಿ ನುಂಗಿ ನುಗ್ಗಿದರು
ನೆಲತಾಯ ಮಕ್ಕಳು ನರಗುಂದ ಬಂಧುಗಳು.

# ಆಳೋನಿಗಾರು ಕಾಸು–ಉಳೋನಿಗೊಂದು ಕಾಸು

ಆಳೋನಿಗಾರು ಕಾಸು ಉಳೋನಿಗೊಂದು ಕಾಸು
ಮಾಡಿದೋರು ಯಾರಣ್ಣ ?
ದುಡಿಯೋ ವೈಗೆ ಬಟ್ಟೆ ಇಲ್ಲ ಉಳೋ ವೈಗೆ ಅನ್ನ ಇಲ್ಲ
ಕುಂತ ವೈಗೆ ಹೊಟ್ಟೆ ತುಂಬಾ

ಅರಸ ಅಗಸನೆಂದು ಮಾಡಿ, ಮನುಜರನ್ನು ಒಡೆದು ಕುಂತು
ಸುಲಿದು ಉಂಡ ಭಂಡರು ಯಾರು ?
ಭಕ್ತಿ ಸೇವೆ ಬಲೆಯ ಬೀಸಿ ಹೆಂಡ ಕುಡಿಸಿ ದಾರಿ ಕೆಡಿಸಿ
ಸೊಗಸನುಂಡ ಕಟುಕರು ಯಾರು ?

ನಾಲ್ಕು ಜನರ ಬೆವರ ಹೀರಿ ಆಸ್ತಿ ಎಂಬ ಹೆಸರನಿಕ್ಕಿ
ಕಣ್ಗೆ ಮಣ್ಣು ತೂರಿದಂತ ಧನಿಕರು ಯಾರು ?

೩೩೧/ಬಿ. ವೀರಣ್ಣ

# ರಮುಜಾನ ದರ್ಗಾ

## ಬುರ್ಖಾಗಳು

ಅಲ್ಲಲ್ಲಿ
ಜನಜಂಗುಳಿಯಲ್ಲಿ
ಸಿನೇಮಾಗಳ ಮುಂದೆ,
ಬಸ್ ಸ್ಟಾಪುಗಳ ಮಧ್ಯ
ಹೂವಿನಂಗಡಿಗಳ ಅಕ್ಕಪಕ್ಕ
ಸ್ಕೂಟರುಗಳ ಹಿಂದೆ
ಕಾರುಗಳೊಳಗೆ,
ದೂರದರ್ಶನದ ಎದುರಿಗೆ
ಮತ್ತೆ,
ಹೊರಳಿ ನೋಡಿದಾಗ ;
ಧೂರ್ತ ಇತಿಹಾಸದಕ್ಷರಗಳಲ್ಲಿಯ
ವೀರಾಧಿವೀರರ ಮಗ್ಗಲು,
ಹೀಗೆ ಎಲ್ಲೆಲ್ಲೂ ಬುರ್ಖಾಗಳು
ಕಪ್ಪು ಬುರ್ಖಾಗಳು–ಪ್ರತಿಭಟನೆಯಿಲ್ಲ
ಕೆಂಪು ಬುರ್ಖಾಗಳು–ಕ್ರಾಂತಿಯಿಲ್ಲ
ಹಸಿರು ಬುರ್ಖಾಗಳು–ದಾರಿ ಸುಗಮವಿಲ್ಲ
ಹೀಗೆ ಹೀಗೆ ಸಾಗುತ್ತಲೇ ಇವೆ
ಬೇಸರವಿಲ್ಲದೆ ಬೇಸರ ತೋರಿಸದೆ
ನೋವಿನಲ್ಲೂ ನಗುತ್ತ–ಅದಕ್ಕೇ ಹೊಂದಿಕೊಳ್ಳುತ್ತ,
ಒಂದಲ್ಲ ಎರಡಲ್ಲ
ಹಲವು ಹದಿನೆಂಟು ರೀತಿಯ ಅಂಜಿಕೆ ಹೊತ್ತ

ಗಂಡನ ಮಾನ ಮುಚ್ಚಿದ,
ಒಳಗೊಳಗೇ ಹೊಲಸಾದ,
ಏನೊಂದೂ ತಿಳಿಸದ,
ಏನೊಂದೂ ತಿಳಿಯದ,
ಕುಬಿ ಕುಬಿ ಕೊಬ್ಬಿಹೋದ
ಮುದಿ ಮುದಿ ಮುದ್ದೆಯಾದ
ಹೀಗೆ ಹೀಗೆ
ಎಲ್ಲಾ ನಮೂನೆಯ ಬುರ್ಖಾಗಳು
ಕ್ಷಯದ ಆಗರಗಳು
ಶತ ಶತಮಾನಗಳಿಂದಲೂ
ಸಾಗುತ್ತಲೇ ಇವೆ
ಸಾಗುತ್ತಲೇ ಇವೆ.

# ಪ್ರಣಾಳಿಕೆ

ನಾವು ದುಡಿಯುವ ಜನ
ನಮ್ಮ ಅಧಿಕಾರ ಬಂದಾಗ :
ಪೋಲೀಸರನ್ನು, ನ್ಯಾಯಾಧೀಶರನ್ನ
ಮನುಷ್ಯರನ್ನಾಗಿ ಮಾಡುತ್ತೇವೆ.
ಟ್ಯಾಂಕುಗಳು ಬುಲ್ ಡೋಜರ್ ಆಗುತ್ತವೆ.
ತಗ್ಗು–ದಿನ್ನೆಯ ನೆಲ ಸಮನಾಗುತ್ತದೆ.
ಬಂದೂಕಿನ ಬಾಯಲ್ಲಿ
ಗುಬ್ಬಿ ಗೂಡು ಕಟ್ಟುತ್ತದೆ.
ಕೆಂಪು ದೀಪದ ಕೆಳಗೆ
ಉದ್ಯಾನವನಗಳೇಳುತ್ತವೆ
ಒಂದೇ ಒಂದು ಸಲ ಅವಕಾಶ ಸಿಗಲಿ
ಭೂಗೋಳದ ತುಂಬೆಲ್ಲ
ಶಾಂತಿಯ ಬೀಜ ಬಿತ್ತುತ್ತೇವೆ
ಮುಂದೆ,
ನಮ್ಮ ಮಕ್ಕಳು ಶಬ್ದಕೋಶ ತಿರುವಿ
ವೀರಗಲ್ಲುಗಳ ಅರ್ಥ ಹುಡುಕುತ್ತಾರೆ.

## ವಿಪ್ಲವಿ

ವಿಪ್ಲವಿ ನಾನು
ದಿಟ್ಟ ಹೆಜ್ಜೆಯನ್ನಿಟ್ಟಲ್ಲೆಲ್ಲ
ಮುದ್ದೆಯಾಗುತಿಹುದು
ಕಾಳ ಜಗತ್ತು.
ನಮ್ಮ ಬಾಳಿಗೆ
ಮಸಿಯ ನುಗ್ಗಿ
ನುಂಗಲೆತ್ನಿಸುವ
ಪುರಾಣ, ಡಂಬ, ನೇಮ
ಜಾತಿ, ಮತ, ಪಂಥ,
ಮೇಲು, ಕೀಳು
ಇಂತೀ ಇಂತೀ
ಅಷ್ಟಪದಿಗಳ
ಬಿಗಿ ಹಿಡಿತವನು
ಚೆಲ್ಲಾಪಿಲ್ಲಿಯಾಗುವಂತೆ
ಕಡಿದು
ತೆರೆದ ಬಾಯನು
ಜ್ವಾಲಾಮುಖಿಯಾಗಿಸಿ
ಸ್ವರ್ಗ ನರಕಗಳ
ಸುಡುತಿರುವೆ
ದಲಿತರ ಕಣ್ಣೀರು
ನನ್ನೆದೆಯಾಳದಲಿ ಇಳಿದು
ಕತಕತನೆ ಕುದ್ದು
ಲಾವಾರಸವಾಗಿ ಉಕ್ಕಿ
ಈ ಏನೆಲ್ಲವನ್ನೂ
ಏನಿಲ್ಲದಂತಾಗಿಸುತ್ತದೆ.

## ಮೇಡಂ ನೀವೇ ಹೇಳಿ

ಹಲೋ ಮೇಡಂ ಚೆನ್ನಾಗಿದ್ದೀರಾ ?
ನಿಮ್ಮ ನಾಯಿ ಬ್ರೆಡ್ ತಿನ್ನುತ್ತದೆಯೆ ?
ಕಾರು ಸರಿಯಾಗಿ ಚಲಿಸುತ್ತಿರುವುದಿಲ್ಲವೆ ?
ಹೊಸ ಮನೆಗೆ ಹೋಗಿ ಆಯಿತಾ ?

ಇದೇನು ಪ್ರಶ್ನೆಗಳ ಸುರಿಮಳೆ–ಎಂದು ಭಾವಿಸಿದಿರಾ ?
ಛೇ !

ಹಾಗೇನೂ ತಪ್ಪು ತಿಳಿಯಬೇಡಿ
ಇದು ಪ್ರಶ್ನೆಗಳ ಸುರಿಮಳೆ ಅಲ್ಲ
'ಶುದ್ಧ ಕವನ'
ಯಾವ ರಾಜಕೀಯಕ್ಕೂ ಸಂಬಂಧಿಸಿದುದಲ್ಲ
ನಿಮ್ಮ ಮನೆಕಟ್ಟುವವರ ಬಗ್ಗೆ
ಮನೆಗೆಲಸದವರ ಬಗ್ಗೆ,
ನಿಮ್ಮ ನಲ್ಲಿಗೆ ನೀರು ಬಿಡುವವರ,
ನಿಮ್ಮನೆಗೆ ಹಾಲು ತರುವವರ,
ನಿಮ್ಮ ಕಾರನ್ನು ರಿಪೇರಿ ಮಾಡುವವರ,
ಹಗಲೂ ರಾತ್ರಿ ದುಡಿದು
ನಿಮ್ಮ 'ಶುದ್ಧ ಸಾಹಿತ್ಯ'ವನ್ನೆಲ್ಲ
ಪುಸ್ತಕ ರೂಪಕ್ಕೆ ತರಲು ಶ್ರಮಿಸುವವರ,
ನಿಮ್ಮ ಸೀರೆ ನೇಯುವವರ..........,
ಇಂತೀ ಇಂತೀ ನಿಮಗಾಗಿ ದುಡಿಯುವ
ನನ್ನ ಜನರ ಬಗ್ಗೆ
ನಾನೆಂದೂ ಬರೆಯುವದಿಲ್ಲ
ಏಕೆಂದರೆ
ಆಗ 'ವರ್ಗ ಪ್ರಜ್ಞೆ' ಅಡ್ಡ ಬಂದು,
ರಾಜಕೀಯ ಸೇರಿ,
ಈ ನನ್ನ 'ಶುದ್ಧ ಕವನ'
ಅಶುದ್ಧವಾಗುತ್ತದೆ.

ಅಹುದೊ ? ಅಲ್ಲವೊ ?
ನೀವೇ ಹೇಳಿ ನೋಡಂ
'ಅದರೂ ರಾಜಕೀಯ ಬರುತ್ತದೆ–ಎಂದು ಹೇಳುತ್ತೀರಾ ?

ಹಾಗಾದರೆ ಏನು ಮಾಡಲಿ ?
'ಹಾಗೇ ನಡೆದರೆ ಹೊರಟಲ್ಲಿಗೇ ಬರುತ್ತಾರೆ'
ಎಂದು ಹೇಳುತ್ತಾರೆ.
ಅಲ್ಲಿಯವರೆಗೆ ಸುಮ್ಮನಿರಲೆ ?
ಆಗ,
ಮನುಷ್ಯರು ಹೊರಟಲ್ಲಿಗೇ ಬಂದಾಗ,
ಯಾವ ರಾಜಕೀಯವೂ ಇರುವುದಿಲ್ಲ
ಅವರ ಮೈತುಂಬ ಕೂದಲು
ಕೈತುಂಬ ಕಲ್ಲುಗಳು,
ಬಾಯಿ ತುಂಬ ಹಸಿ ಮಾಂಸ........
ನಿಜ ನೋಡಂ
ಆಗ ಯಾವ ರಾಜಕೀಯವೂ ಇರುವುದಿಲ್ಲ.
ಅಂತೆಯೆ
ಆ ದಿನಗಳು 'ಶುದ್ಧ ಕವನ'ದ ಸುಗ್ಗಿಯ ದಿನಗಳು
ಹಾಗಾದರೆ ನೀವೇ ಹೇಳಿ ನೋಡಂ
ನಾನೇನು ಮಾಡಲಿ ?

# ಎಸ್. ಎಸ್. ಹಿರೇಮಠ

## ಗಣಿ ಕಾರ್ಮಿಕರಿಗೆ

ನಿಮ್ಮ ಕೆಂಪು ಬಟ್ಟೆಗಳ ಮೇಲೆ ಯಾರೂ ಕವನ ಬರೆಯಲಿಲ್ಲ
ಅವರಿಗೆ ಅವರ ಇಂದ್ರ ಚಂದ್ರರೋ
ಹೆಂಡರೊ, ಮಿಂಡರೊ, ಯಾರೊ ಇದ್ದಾರೆ
ನೀವು ಕವನವಾಗುತ್ತೀರಿ.
ನಿಮ್ಮ ಕವನದಲ್ಲಿ
ಕೆಂಪು ಧೂಳು ಇಡುಗಿರುತ್ತದೆ.
ನಿಮ್ಮ ಸಂಜೆಯ ನೀರು ಹೆಂಡ ಬಸಿಯುತ್ತಿರುತ್ತದೆ
ನಿಮ್ಮ ಗತಿಗೇಡಿತನ ಮಾತ್ರ ಕಾಣುತ್ತದೆ
ಕವನ ಎಷ್ಟು ನಗ್ನವಾಗಿರುತ್ತದೆಂದರೆ,
ನಿಮಗಾಗುವ ಶೋಷಣೆಯಷ್ಟು.
ನಿಮ್ಮ ಬೆವರಿನಿಂದ ಬಸಿದ ದುಡ್ಡು
ಪಂಕದ ಗಾಳಿಗೆ, ಕೋಟೆನೊಳಗಡೆ ಬೆವರಾರಿಸುವ
ಮಾಲಿಕನ ಜೇಬಿಗಿಳಿಯುತ್ತದಲ್ಲ,
ಅಷ್ಟು.
ನೀವು ಹೀಗೆ ಮಾಲಿಕನಿಗಾಗಿ
ಅಷ್ಟಷ್ಟೆ ಕರಗುತ್ತಿರೆಂಬುದನ್ನು ;
ನಿಮ್ಮದಾಗದ ನೆಲಕ್ಕೆ ಅನಾಥ ಹೆಣಗಳಾಗುತ್ತೀರೆಂಬುದನ್ನು
ನಿಮ್ಮನ್ನು ಹಡೆದ ನೆಲವೇ, ದಿನವೂ ತೋರಿಸುತ್ತದಲ್ಲ
ಅಷ್ಟು
ಅದಷ್ಟೇ ಅಲ್ಲ
ನಿಮ್ಮೆಲ್ಲರೆಡೆಯಲ್ಲಿ ನಾಟದ ಮುಳ್ಳುಗಳ

ಅಳುಕನ್ನು ಮೂಡಿಸುತ್ತದೆ ;
ಕೋಟಿ ನಿಟ್ಟುಸಿರ ಬಿಸಿಯಾಗುವ ಮುನ್ನ
ಕೆಂಪು ಬೆಳಕಿನ ಕೆಳಗೆ
''Workers of the World Unite'' ಎಂದು.
ಒಕ್ಕೊರಲ ವಜ್ರ ದನಿಯಾಗುತ್ತದೆ.
"ಒಲೆ ಹತ್ತಿ ಉರಿದಂತೆ ನಿಲಬಹುದಲ್ಲದೆ
ಧರೆ ಹತ್ತಿ ಉರಿದಡೆ ನಿಲಬಹುದೆ ?"
ಎನ್ನುತ್ತದೆ.

೩೩೯/ಎಸ್. ಎಸ್. ಹಿರೇಮಠ

# ಹಾಗೆ ಮೂಡುವ ಹಗಲೆ

ಹಾಗೆ ಮೂಡುವ ಹಗಲೆ
ಸಹನೆಯಿಂದ
ನಿರಂತರ ಕಾಯುತ್ತೇನೆ,
ಸೆಣಸುತ್ತೇನೆ ನಿನಗಾಗಿ,
ಹಾಗೆ ಮೂಡುವ ಹಗಲೆ
ನಿನ್ನ ಕಾಣಲು ನಾನಿರಲಿಕ್ಕಿಲ್ಲ
ಆದರೆ ಹಾಗೆ ಮೂಡುವ ಹಗಲೆ
ನನ್ನಂಥವರ ರಕ್ತದುಷೆಯಲ್ಲಿ
ನೀನು ಬರುತ್ತಿ.

# ಉಸಿರುಗಳ ಹಾಡು

ಬರೆಯುವುದಕ್ಕಾಗಿ ಹುಟ್ಟಲಿಲ್ಲ ನಾನು
ನಾನು ಬದುಕಿದೆ,
ಹೋರಾಟವನ್ನು, ಹಸಿವನ್ನು, ಅನ್ಯಾಯವನ್ನು
ನೆಲದ ರೆಪ್ಪೆಗೆ ಅಪ್ಪಳಿಸುವ
ಕಣ್ಣೀರಿನುಪ್ಪು ಕಡಲನ್ನು
ಉರಿಯುವ ಕೆಂಡದುಂಡೆ ಸೂರ್ಯನ
ಸುಡುವ ಗಾಯವನ್ನು,
ಕೊರೆವ ಸಾವಿನ ಕೈ ಹೊತ್ತು ತಂದ
ಚಳಿಗಾಳಿಯನ್ನು
ಶೋಷಣೆ ಹಿಂಸಿಸುವ ಒರಟು
ನಿಟ್ಟುಸಿರ ಮರ್ಮರಿತವನ್ನು
ಗಟಾರು ವಾಸನೆಯನ್ನು
ಭಿಕ್ಷುಕರ ದೀನತೆಯನ್ನು
ಸೂಳೆಯರ ಕಾಯುವಿಕೆಯನ್ನು
ಗುಡಿಸಲುಗಳ ಬೆಂಕಿಯನ್ನು
ಇದೆಲ್ಲಕ್ಕೂ,
ಜೋತ ನನ್ನ ಜನ,
ಆತ ನನ್ನ ಜನ,
ಸೋತ ನನ್ನ ಜನ,
ಇತಿಹಾಸವನ್ನು ಹಡೆಯುತ್ತ ಬಂದ
ವರ್ತಮಾನದುಸಿರಾದ, ಭವಿಷ್ಯತ್ತಾಗುವ
ಸುಂದರ ನಾಳೆಯ ಮಹಲನ್ನು ಹೋಗಲು
ಹೊಸ್ತಿಲಲ್ಲಿ
ಇಡಿಯಾಗಿ,
ಸುಗ್ಗಿ ನಿಲ್ಲುತ್ತಿರುವ
ನನ್ನ ಜನರ ಮಧ್ಯೆ ಬದುಕಿದ್ದೆ ನಾನು
ಅವರ ಹೋದ ಉಸಿರುಗಳು
ಹಾಡಾಗಿದ್ದವು
ಬಿತ್ತಲಿಕ್ಕೆ ಕಾಳಾಗಿದ್ದವು.

ಹಿಂದಿ/ಎಸ್. ಎಸ್. ಹಿರೇಮಠ

## ಮನುಷ್ಯನೆಲ್ಲಿ

ನೆಲವೆ ನಿನ್ನನ್ನು ಪ್ರೀತಿಸುತ್ತೇನೆ ನಾನು
ನಿನ್ನ ಅ ಖಂಡತ್ವದಷ್ಟು.
ನಿನ್ನೆದೆಯಲ್ಲಿ ಪ್ರೀತಿಯನ್ನರಳಿಸಿದವರು
ಮನೆಯಾಗಿ ನಿನ್ನನ್ನು ಬೆಳೆದು ಎತ್ತಿ ನಿಲ್ಲಿಸಿದವರು
ಬೆಳೆಯಾಗಿ ನಿನ್ನನ್ನು ಬೆಳೆದು ನಿಂತವರು
ಜೀವವೊಡೆದು ಮೊಗ್ಗೆ ದಿನಗಳನ್ನು ಹಡೆಯಲು
ಸದಾ ಕೆಂಪಾದವರು
ಬಯಸುತ್ತ, ಹಂಬಲಿಸುತ್ತ,
ಅಷ್ಟೇ ಅನಾಥರಾಗುತ್ತ ಬಂದರಲ್ಲ ;
ಅವರ ಹಸಿವು, ಒಲವು, ಎಲ್ಲಕ್ಕೂ ನ್ಯಾಯವಿತ್ತು
ಅಖಂಡ ನ್ಯಾಯ.
ಆದರೆ ನಿನ್ನನ್ನು ಸಂಸ್ಕೃತಿಸಿದವರು ಅಸಂಸ್ಕೃತರೆನಿಸಿಕೊಂಡರು
ಕೂಳು ಹುಟ್ಟಿಸಿದವರು ಕೂಳು ಕಾಣದಂತೆ
ತಪ್ಪು ನಿನ್ನದಲ್ಲ.
ತಪ್ಪು ಮುಚ್ಚಿಕೊಳ್ಳಲು ಕಲ್ಪಿಸಿದನಲ್ಲ ದೇವರನ್ನು
ಆರೋಪಿಸಿದನಲ್ಲ ಜೊಳ್ಳು ಆಕಾಶವನ್ನು,
ಭ್ರಮೆಯನ್ನು, ವೈಮನಸ್ಯವನ್ನು, ವರ್ಗಶೋಷಣೆಯನ್ನು
ಆ ಹಸೀ ಮನುಷ್ಯನದು.
ನೆಲವೆ,
ನಿನ್ನಲ್ಲಿ ಹಿಮವಿದೆ, ಅಗ್ನಿಯಿದೆ,
ಔನ್ನತ್ಯವಿದೆ, ಅಪಾರತೆಯಿದೆ,
ಮೈತುಂಬ ತಾಯಿ ಹಾಲಿದೆ.
ಕಡಲ ಕರುಣೆಯ ಕಣ್ಣರೆಪ್ಪೆಯಪ್ಪಳಿಸುತ್ತ
ಮುಲುಗುತ್ತಿ ನಿರಂತರ.
ಆದರೆ,
ಕೊರೆದಿದ್ದಾರೆ ಮೈ ತುಂಬ ಗಾಯಗಳನ್ನು
ಓಕಳಿಯಾಡುತ್ತಾರೆ ಬಂದೂಕ ತುದಿಯಲ್ಲಿ
ಜೀವಗಳನ್ನು

ಬಿತ್ತಿ ;
ಬೆಳೆಯುತ್ತ ದ್ವೇಷವನ್ನು, ಹಿಂಸೆಯನ್ನು
ಕಣ್ಣೀರನ್ನು,
ಪ್ರೀತಿಯ ಅರ್ಥವನ್ನು
ಹಿಮಾಲಯದಲ್ಲಿ ಹುಡುಕಿದೆ,
ಅಳೆಯಲೆತ್ನಿಸಿದೆ ಗ್ರ್ಯಾಂಡ್ ಕ್ಯಾನಿಯನ್‌ನ್ನು
ಕಡಲೆಡೆಗೆ ಬಂದು ನಿಂತೆ ದಿಗಿಲಾಗಿ
ನಿನ್ನ ತಂಗಾಳಿ ಕೈಯಲ್ಲಿ ಪ್ರಶ್ನೆ ರಾಚಿದೆ
ಜನಕ್ಕೆ, ಅಪಾರ ಜನಸ್ತೋಮಕ್ಕೆ,
ಹಕ್ಕಿಗಳ ಹಾಡಿದರ್ಥ ಏನೆಂದು
ಹರಿವ ತೊರೆಗಳ, ಎತ್ತಿದ ಬೆಟ್ಟಗಳ,
ಹಸಿರು ಹಾಸಿದ ನೆಲದ ಅರ್ಥವೇನೆಂದು ?
ಗುಡುಗಾಗಿ ರಾಚಿದೆ ಜನಕ್ಕೆ
ಹೇಳಿ ರಾಕ್ಷಸರೆ, ದೇವತೆಗಳೆ
ನೆಲ ಹಡೆದ ಮನುಷ್ಯನೆಲ್ಲಿ ?
ಎಲ್ಲಿ ?
ಪೀಪ್ರಾದ ಕಗ್ಗೊಲೆಯಲ್ಲಿ ?
ತಿರುಪತಿ, ಕಾಶಿ, ಹಂಪಿ ಗುಡಿಗಳಲ್ಲಿಯೇ ?
ಛಿದ್ರಗಳೆದುರು ಹೇಲು ಹಂದಿಗಳ ಜೊತೆ
ಕೂಳು ಕಬರುತ್ತಿದ್ದ ಇಲ್ಲಿ ಮನುಷ್ಯ
ಇಲ್ಲ
ಅಲ್ಲಿ ಮನುಷ್ಯ ಸಿಗಲಿಲ್ಲ
ಕುಷ್ಟ ದನಿಯಾಗಿ ಕೂಳೆಂದು ಕೂಗುತ್ತಿದ್ದ ಮನುಷ್ಯ
ಇಲ್ಲ
ಅಲ್ಲಿ ಸಿಗಲಿಲ್ಲ ಮನುಷ್ಯ
ನಿರುದ್ಯೋಗಿಯಾಗಿ ಬೀದಿಯಲೆಯುತ್ತಿದ್ದ ಮನುಷ್ಯ
ಇಲ್ಲ
ಅಲ್ಲಿ ಮನುಷ್ಯ ಸಿಗಲಿಲ್ಲ
ದುಡಿಯುತ್ತಲೆ ಇದ್ದ ನೆಲದಲ್ಲಿ ಅನಾಥನಾಗಿ ಮನುಷ್ಯ
ಇಲ್ಲ
ಅಲ್ಲಿ ಸಿಗಲಿಲ್ಲ ಮನುಷ್ಯ ;

೩೪೩/ಎಸ್. ಎಸ್. ಹಿರೇಮಠ

ಕಾರಖಾನೆಗಳಲ್ಲಿ ಹೊಗೆಯಾಗುತ್ತಿದ್ದ ಮನುಷ್ಯ
ಅಲ್ಲಿ ಸಿಗಲಿಲ್ಲ ಮನುಷ್ಯ
ಹಮಾಲಿಯಾಗಿದ್ದ, ಜೀತದಾಳಾಗಿದ್ದ
ಪ್ಯೂನಾಗಿದ್ದ ಡ್ರೈವರಾಗಿದ್ದ
ನೆಲದ ಒಡಲೆ, ಜೀವವೆ, ಸತ್ವವೆ
ಆಗಿದ್ದ ಮನುಷ್ಯ. ಆದರೆ
ಅಲ್ಲೆಲ್ಲೂ ಸಿಗಲಿಲ್ಲ ನನಗೆ
ಸಂಪೂರ್ಣ ಮನುಷ್ಯ.

# ದುಡ್ಡು

ಈ ದೇಶದ ರಕ್ತ ಹೀರುವವರಿಗೆ,
ದುಡ್ಡು ;
ಸಿಗರೇಟು, ಕಾರು, ಹೊಗೆಯಾಗಿ
ವಿಸ್ಕಿ, ಗ್ಯಾಸ್ಟ್ರಿಕ್ ಟ್ರಬಲಾಗಿ,
ಕ್ಯಾಬರೆ ಹೆಣ್ಣಾಗಿ
ಅಂಟೆ ಬಸಿದುಕೊಚ್ಚಿ
ಅಜೀರ್ಣವಾಗಿ ಹರಿಯುತ್ತಿದೆ
ಇವರಿಗಾಗಿ ; ರಕ್ತ-ಬೆವರನ್ನು
ಅನ್ನವಾಗಿಸುವ
ಕೂಲಿ, ಒಕ್ಕಲಿಗರಿಗೆ
ದುಡ್ಡು
ದಿನದಿನದ ಹೊಟ್ಟೆಗೆ, ತೊಗಲು ಮೈಗೆ
ಬೋಳು ಕೈಗೆ
ಸವಾಲಾಗಿ
ಹೆಣವಾಗಿ ಕೂಗಿ ಕೂಗಿ
ಅನ್ನ ಅನ್ನವೆಂದು ಅಣಕಿಸುತ್ತದೆ.

# ಕುಂ. ವೀರಭದ್ರಪ್ಪ

## ಈ ಜನ

ಈ ಜನ
ಮೂರು ಬಣ್ಣದ ಮುಂಡರುಗಪ್ಪೆಗಳ
ರಾಮರಾಜ್ಯದಲ್ಲಿ
ಭಾಷಣಗಳಿಗೆ ಮೈಕುಗಳು
ಹಸಿತಲೆಗೆ ಟೋಪಿಗಳು
ಬೊಜ್ಜಿನವರ ಹಿತ್ತಲ ತೋಟದಲ್ಲಿ
ಹೂಗಿಡ ಕಲ್ಪವೃಕ್ಷಗಳು. ಬಾಯಾರಿ ಗೋಣಿಳಿಬಿಟ್ಟಾಗ
ನೀರು ಸಾಗಿಸುವ ಕಾಲುವೆಗಳು
ಉಳ್ಳವರಿಗೆ ಜೇಬುಗಳು
ಅಳ್ಳೆದೆಯವರಿಗೆ ಹೃದಯಗಳು.

ಈ ಜನ
ನರಸತ್ತ ನೆರಳ ತೀರ್ಪಿಗೆ
ಕನ್ನಡಿಯನ್ನೇ ನಿಂದಿಸುವವರು
ದಿಕ್ಕುಗಳಿಗೆ ಅಪರಿಚಿತರು
ಮಣ್ಣು ಹೊತ್ತೂ ಹೊತ್ತೂ ಗುದ್ದಿನೊಳಗಣ
ಹೆಣಗಳಿಗೆ ಆಶ್ರಯವಿತ್ತ
ಮಹಾನುಭಾವರು
ವಿದೇಶೀ ವಿಸ್ಕಿಗೆ ದುಂಬಾಲುಬಿದ್ದ ನಾಲಗೆಗಳೊಳಗೆ ತುಳುಕಿ
ಕೋಟಿ ಕಿವಿಗಳನ್ನು ಪುಲಕಿಸುವ ಶಬ್ದಗಳು

ಹಬ್ಬ ಹರಿದಿನದ ಅಡುಗೆ ಮನೆಗೆ ಮೂಗಿರಿದ ಗವಾಕ್ಷಿಗಳು
ಟೇಬಲ್ ಕೆಳಗಿನ ವ್ಯವಹಾರಕ್ಕೆ
ಹೊಸ ಸೀರೆ ಕುಪ್ಪಸಗಳು ಇದ್ದಕ್ಕಿದಂತೆ ಹಳತಾದ್ದಕ್ಕೆ
ಮೂಕ ಸಾಕ್ಷಿಗಳು.
ಈ ಜನ
ಆಸ್ಪತ್ರೆ ವಾರ್ಡುಗಳ
ಪಿಳಿ ಪಿಳಿ ಕಣ್ಣು ಬಿಡುತ್ತ
ಕೆಳಗಿನಿಂದ
ನರಳುತ್ತಿವೆ ಸುಮ್ಮನೆ.
ಮೂಗಿನ ನೇರಕ್ಕೆ ತೂಗಾಡುತ್ತಿರುವ
ಚೂಪನೆ ಕತ್ತಿಗಳ ಕೆಳಗೆ
ಸಲಾಮು ಮಾಡುತ್ತ
ಕಟ್ಟು ಕಥೆ ಜುಂ ಎನ್ನುತ್ತ
ಕ್ಷಣಕ್ಕೊಂದು ಪಳಿಯುಳಿಕೆಗಳಾಗಿ
ಇತಿಹಾಸ ಕೊನರುತ್ತದೆ.

# ಅಕ್ಷರ

ಅಕ್ಷರ
ಕೆಲವರ ಪಾಲಿಗೆ ಅಂದವಾದ ಹೆಣ್ಣು
ಹೇಮಾ ಹೇಮಿ ಗಂಡುಗಳನ್ನು
ಕಣ್ಣು ಮಿಟುಕಿಸಿ ರಸ್ತೆ ನೆಕ್ಕಿಸುವಂತಹ ಕಣ್ಣು
ಗೊನೋರಿಯಾ ಸಿಫಿಲಿಸ್‌ಗಳಂಥ ಹುಣ್ಣು.

ಅಕ್ಷರ
ಕೆಲವರ ಪಾಲಿಗೆ ಆಟದ ಆಟಿಗೆ
ಜೀವರಹಿತ ಗೊಂಬೆಗಳ ಓಟ
ಮೊಳದಗಲ ಜಾಗದಲ್ಲೆ ಕುಸಿದು ಬಿದ್ದಾಗ
ಮುಸಿ ಮುಸಿ ನಗು.

ಅಕ್ಷರ
ಕೆಲವರ ಪಾಲಿಗೆ ಅರಳಿಸಿ ಹೊಡೆಯುವ ಗೊರಕೆ
ನಡೆಯುತ್ತಿದ್ದವರು, ಇದ್ದಕ್ಕಿದಂತೆ ತೂಕಡಿಸಿ
ಕಣ್ಣುಗಳ ಹಂದರದಲ್ಲಿ ಸೃಷ್ಟಿಸಿಕೊಳ್ಳುತ್ತಾರೆ
ಭ್ರಾಮಕ ಕನಸಿನ ಲೋಕಗಳನ್ನು.

ಅಕ್ಷರ
ಕೆಲವರ ಪಾಲಿಗೆ ಆಟಂಬಾಂಬುಗಳು
ನಕಲಿ ಮನುಷ್ಯನ ಹೃದಯ ಮೆದುಳುಗಳಲ್ಲಿ
ಇಟ್ಟು ಸ್ಫೋಟಿಸ ಬಯಸುತ್ತಾರೆ
ಮಹಡಿ ಮನೆ ಡೊಳ್ಳು ಹೊಟ್ಟೆ ಕೃತಕ ಮೀಸೆಗಳ
ಬುನಾದಿಗಳನ್ನು ಛಿದ್ರಿಸುತ್ತಾರೆ.

# ದಿವಿ ಸೀಮೆಯ ಹಾಡು

ಸಮುದ್ರ ಹೊಕ್ಕುಳ ಲಲಾಟದಿಂದೆದ್ದು ಹದ್ದುಬಸ್ತಿಲ್ಲದೆಯೆ
ನೆಲಕ್ಕು ಮುಗಿಲಿಗು ಏಕಾಗಿ ಬೆಳೆದು
ಬತ್ತಗದ್ದೆ ಕಾಡು ಮೋಡಗಳ ತಲೆತುಳಿದು
ಮನೆ ಮಠ ಚೊಕ್ಕಟ ಮಾಡುತ್ತ
ಜೀವರಾಶಿಯ ನೆತ್ತಿಗೆ ಕಾಲೂರಿ ನಡೆದ
ಚಂಡ ಮಾರುತದ ದಾಪುಗಾಲಿಗೆ
ಹಳ್ಳಕೊಳ್ಳ ತುಳುಕಿ ವರದ ಗೋದಾವರಿ ಚಾಚಿ ನಾಲಿಗೆ
ಸವರಿ ಹುರಿದುಂಬಿಸಿ ಕೋಟಿ ಆಕ್ರಂದನಗಳ ಕಣ್ಣೀರ ನೆರೆ
ಉಕ್ಕಿದ್ದರಿಂದ ಎದೆ ಸೆಟೆಸಿ ಬದುಕುತ್ತಿದ್ದ ದಿವಿ ಸೀಮೆ
ಈಗ ನೀರಿನಿಂದ ಹೊರ ಎಸೆದ ಆಮೆ
ಹಿಂಗಾಲು ಮುಂಗಾಲು ಸೆಟೆಸಿ ಬಾಯಾರಿ ಮಲಗಿದೆ
ಕೆಂಡ ಮುಕ್ಕಳಿಸುವ ಮುಗಿಲಿಗಂಗಾತ
ಬಾತ ಹೆಣ ಬಿರಿತ ಹೊಟ್ಟೆಯಿಂದ ಹೊರಡಿಸಿದ
ಕರುಳುಗಳು ತುಳುಕು ಬಿದ್ದು ಹಾಡುವುದ ಕೇಳುತ್ತ
ಕೆಳಗೆ ಮೊಸಳೆಗಳ ಹಲ್ಕಿರಿತ
ಕಾಗೆ ಹದ್ದುಗಳ ಮೊರೆತ
ದ ನಡುವೆ ಖಾಲಿ ಕಂಕುಳ ನಾಲಿಗೆ ಮಾಡದ ಬಾಯಿಗಳ ಹೊತ್ತು
ಪ್ರವಾಹಕ್ಕೆ ಮಣಿದು ಬೋರಲು ಬಿದ್ದಿರುವ
ಸಹಸ್ರಾರು ಹೆಣಗಳ ಮೇಲೆ ಗಸ್ತು ಹೊಡೆಯುವ
ಹೆಲಿಕಾಪ್ಟರು ವಿಮಾನಗಳಿಂದಿಣುಕುವ
ಅಶ್ರು ತರ್ಪಣ ಮಡುಗಟ್ಟಿ ನಿಲ್ಲುವುದ ನೋಡುತ್ತ
ಬುಡಕಿತ್ತು ಬಿಸುಟ ಹೆಮ್ಮರಗಳ ಬೇರುಗಳಲ್ಲಿ
ಗೂಡು ತೊಟ್ಟಿಲ ಕಟ್ಟಿ ನಾಲಗೆ ಚಪ್ಪರಿಸಿ
ಕೊಕ್ಕು ಎಸೆಯುತ್ತ ಹಾರಾಡುವ ರಣಹದ್ದು ಗೂಗೆಗಳ
ಉಲಿತಕ್ಕೆ ಎದೆಯೊಡೆದು
ವಿಲವಿಲನೆ ಒದ್ದಾಡುತ್ತಿದೆ ದಿವಿ ಸೀಮೆ.

೩೪೯/ಕುಂ. ವೀರಭದ್ರಪ್ಪ

## ಸ್ವತಂತ್ರ ಭಾರತದ ಜನರೇ

ತಿಪ್ಪೆಯೊಳಗಡೆ ಕೊಳೆಯುತ್ತಿರುವ ಮೆದುಳುಗಳೇ
ಇತಿಹಾಸದ ಜಿಡ್ಡಿನಲ್ಲಿ ನೆನೆಇಟ್ಟಿರುವ ನಾಲಿಗೆಗಳೇ
ಹೈಬ್ರಿಡ್ ರೊಟ್ಟಿ ಅಂಬಲಿಯುಂಡು ಮರುನುಡಿಯಲರಿಯದ
ನಿರ್ವಾತ ಪೆಟ್ಟಿಗೆಯಲ್ಲಿ 'ಜೀ ಹುಜೂರ್' ಎಂದಲ್ಲಾಡುತ್ತ
ಪ್ರಾರಬ್ಧಕ್ಕಂಟಿರುವ ಪಂಜರಸ್ಥ ಬದುಕುಗಳೇ
ಬದುಕಿರುವ ಗೋರಿಗಳೇ
ಅಪಭ್ರಂಶ ಕಣ್ಣುಗಳೇ ಮೈಲಿಗೆಗಳೇ

ಕೀವು ಸೋರುವ ಬೀದಿ ಚರಂಡಿ ಗಲ್ಲಿಗಳಲ್ಲೆಲ್ಲ
ಬೆನ್ನಿಗಂಟಿದ ಹೊಟ್ಟೆ ಬೋರಲು ಹಾಕಿ ಜೀಕುತ್ತ
ಜಾರಿದ್ದ ನೆಕ್ಕುತ್ತ
ಮುಖಂಡ ಮಿಂಡರಿಗೆಲ್ಲ ಬೆನ್ನು ಮಾಡುವ
ನಿರ್ಲಿಂಗ ಹಾಸಿಗೆಗಳೇ
ಬೆನ್ನೆಲುಬನ್ನು ಅಡವಿಟ್ಟು ಬಗ್ಗಿರುವ ಅಗ್ಗದ
ಸ್ವತಂತ್ರ ಭಾರತದ ಜನರೇ

ನಿಮ್ಮ ಆತ್ಮ ಮುಮ್ಮರ ಮೊರೆತಕ್ಕೇರದ ಅಳಲಿಗಿಳಿಯದ
ನಿಮ್ಮ ರಕ್ತದ ರುಚಿಯುಂಡೇ ಅಂಡಲೆಯುವ ಮಿಂಡರ ಕಾಣಿರೆ ?
ಎದೆ ಮೆದುಳುಗಳಲ್ಲಿ ಹಬ್ಬಿರುವ ಕ್ಷಯದ ಬಳ್ಳಿ ಕಾಣಿರೆ ?
ನಿಮ್ಮ ಮುಖಕ್ಕಚ್ಚೊತ್ತಿರುವ ಮೀಸೆಗೆ ಬಿದ್ದಿರುವ ಬೆಂಕಿಯ ಕಾಣಿರೆ ?
ಕಪಿಲಿಬಾವಿ ತಳದಲ್ಲಿ ಮಿಡುಕುತ್ತಿರುವ ಮೆದುಳುಗಳ ತನ್ನಿರಿ
ಮೂಗುಗಳಲ್ಲೇಣೆದಿರುವ ಮೂಗು ದಾರ ಕತ್ತರಿಸಿ
ಕಣ್ಣು ಕುಣಿಕೆಯ ಬಿಚ್ಚಿ ರಕ್ತಾಭಿಸರಣದ ಪ್ರೇತಗಳ ನೋಡಿರಿ
ನಿಮ್ಮ ಮೈಮೇಲೆಲ್ಲ ಬೆಳೆದಿರುವ ಜಸಿವಾರ ಶಿವದಾರಗಳ
ಮುಳ್ಳುಲಾಂಟಾನ ಪೊದೆಗಳ ಬೆಲೂನು ಹೊಟ್ಟೆಗಳ
ಒಡ್ಡಿಗೆ ಬೆಂಕಿ ಹಚ್ಚಲು ಉರಿವ ಒಡಲಿಂದ
ಹುಟ್ಟಿಬನ್ನಿ ಸ್ವತಂತ್ರ ಭಾರತದ ಜನರೇ.

# ಚಿ. ಶ್ರೀನಿವಾಸರಾಜು

---

## ಛಸನಾಲ ಬಂಧು

**ಕ್ಷಮಿಸು ಛಸನಾಲ ಬಂಧು**
ನೀನು ಬಂದರೂ ನಾವು ಗುರುತು ಹಿಡಿಯುವುದಿಲ್ಲ
ಏಕೆಂದರೆ
ನಾವು ನಿನ್ನನ್ನು ಮೊದಲು ಕಂಡಿರಲಿಲ್ಲ ಕೇಳಿರಲಿಲ್ಲ
ಈಗಂತು
ಕೊಳೆತ ಹೆಣವನ್ನು ಗುರುತು ಹಿಡಿಯುವುದಾದರೂ ಹೇಗೆ ?

**ಕ್ಷಮಿಸು ಛಸನಾಲ ಬಂಧು**
ಬೆಳಕಿರದ ಮನೆಯಲ್ಲಿ
ಬೆಳಕಿರದ ಗಣಿಯಲ್ಲಿ
ಬೆಳಕು ಕಳಿಸುತ್ತ ನೀನಲ್ಲಿ ಕಲ್ಲಿದ್ದಲಾದೆ.
ನಮ್ಮೂರ ಚಿಲ್ಲರೆಗಳ ಸದ್ದಿನಲ್ಲಿ
ನಮ್ಮೂರ ಬಂಗಲೆಗಳ ಗಲಭೆಯಲ್ಲಿ
ನೀನು ಉಸಿರಾಡಿದ್ದು
ನಿನ್ನ ಮಗ ಅತ್ತದ್ದು
ನಿನ್ನ ಹೆಂಡತಿ ನಿಟ್ಟುಸಿರು ಬಿಟ್ಟಿದ್ದು
ನಮಗೆ ಗೊತ್ತಾಗಲೇ ಇಲ್ಲ.

**ಕ್ಷಮಿಸು ಛಸನಾಲ ಬಂಧು**
ಸಾವಕಿಂಡಿಯಲ್ಲಿಳಿಸಿದ ಅಂತ ಅಪರಾಧಿಗಳು
ಎಂದೋ ಸತ್ತವನನ್ನು ಮಣ್ಣು ಮಾಡುವ ಬಂಧುಗಳು

ಸರ್ಕಾರಿ ಮರ್ಯಾದೆಯಿಂದ ಮುಸುಕೆಳೆದ ಮೇಧಾವಿಗಳು
ನಿನ್ನ ಕುಟುಂಬಕ್ಕೆ ಪರಿಹಾರ ನೀಡುತ್ತೇವೆ !
ನಿನ್ನ ಮಕ್ಕಳ ಕಣ್ಣೀರಲ್ಲಿ ಬೆಳಕು ಕಂಡಿದ್ದೇವೆ
ನನ್ನ ಸಾವಿನ ಮದ್ದಳೆಯಿಂದ ಎಚ್ಚರಾಗಿದ್ದೇವೆ
ನಿನ್ನ ಜಲ ಸಮಾಧಿಯಿಂದ ವಿಲಿವಿಲಿ ಒದ್ದಾಡಿದ್ದೇವೆ
ನಿನ್ನ ಸಾವಿನ ಸುದ್ದಿಯಲ್ಲಿ ಅನಾಥರಾಗಿದ್ದೇವೆ

**ಕ್ಷಮಿಸು ಛಸನಾಲ ಬಂಧು**
ಆದರೆ
ನಾಳೆ ಅರುಣೋದಯದಲ್ಲಿ
ನಿನ್ನ ಮಗ ಗಣಿ ಇಳಿದು ಮೇಲೆ ಬಂದಾಗ
ಅವನನ್ನು ಗುರುತು ಹಿಡಿಯುತ್ತೇವೆ.
ನಿನ್ನ
ಸಾವಿನ ಕಲ್ಲಿದ್ದಲಿಂದಲೇ
ನಮ್ಮ
ಇಂಜಿನ್ನು ಓಡಿಸುತ್ತೇವೆ
ಕುಲುಮೆ ಉರಿಸುತ್ತೇವೆ
ಬೆಳಕು ಬೆಳೆಯುತ್ತೇವೆ

**ಕ್ಷಮಿಸು ಛಸನಾಳ ಬಂಧು**

# ಜಗದೀಶ ಮಂಗಳೂರಮಠ

## ದುರಂತ

ಸತ್ಯಗಳು ಚುಚ್ಚುತ್ತಲೆ ಇರುತ್ತವೆ
ಕನಸ ಕೋಟೆಗಳು ಕುಸಿದು ಬೀಳುತ್ತವೆ
ಬದುಕೆಂದರೆ, ಇಲ್ಲಿ ಕನಸು ವಾಸ್ತವಗಳ ನಡುವೆ
ವಿಲವಿಲನೆ ಮಿಡಿದಾಡುವ ತುಡಿತದಾಯುಷ್ಯ.

ಅಂತೆಯೆ ಕೋಪ ತಾಪ ದ್ವೇಷ ಕಿಚ್ಚು ಸ್ವಭಾವಗಳಾಗುತ್ತವೆ
ಜಾತಿಮತ ಪಂಥ ಧರ್ಮಗಳು ಗೋಡೆಗಳಾಗುತ್ತವೆ
ಗೋಡೆಗಳು ಭ್ರಾಂತಿಯಾಗುತ್ತವೆ, ಭ್ರಾಂತಿ ಬದುಕಾಗುತ್ತದೆ
ಬದುಕು ವೇಷವಾಗುತ್ತದೆ.   ವೇಷ ಪಂಜರವಾಗುತ್ತದೆ
ಪಂಜರದ ನಾಗರೀಕತೆಯ ತ್ವಚೆಯೊಳಗೆ ತೂರಿಬಿಟ್ಟರೆ—
ಕ್ಷ ಕಿರಣ : ಒಂದು ತೋಳ ಒಂದು ಕುರಿಯನ್ನು
ಕಚ್ಚಿ ಬಗೆದು ನೆತ್ತರ ಕುಡಿವ ಚಿತ್ರವಾಗುತ್ತದೆ.
ತೋಳನ ನೆತ್ತರ ಡೇಗು ಕುರಿಯ ಕೊಲೆ
ವಾಸ್ತವ ಸತ್ಯಗಳಾಗುತ್ತವೆ ; ಸತ್ಯಗಳು ಚುಚ್ಚುತ್ತವೆ—
ಚುಚ್ಚುವ ಸತ್ಯಗಳ ಮಧ್ಯ ಕನಸುಗಳು ಕುಸಿಯುತ್ತವೆ.

## ಸ್ವಗತ

ಅಳಬುರುಕ ಕವಿತೆಗಳನ್ನೇ ಬರೆಯುತ್ತ
ನಿನ್ನ ವೇದನೆಗಳನ್ನೆ ಅಗಾಧವೆಂದು ಬಿದ್ದು
ಅದೇ ವರ್ತುಲದಲ್ಲಿ ಒದ್ದಾಡುತ್ತಿರುವ ನೀನೊಮ್ಮೆ
ಬಾ ಹೊರಗೆ.

ಗವಿಯ ಬಾಗಿಲನ್ನೊಡೆದು ಮುಚ್ಚಳವ ತೆರೆದು
ನಿನ್ನ ಚಷ್ಮ ಕಳಚು, ಕಣ್ಣ ಕೆಂಪು ಕರಗಿಸು
ಛಳಿ ಬಿಟ್ಟು ಮೈಧೂಳಿಯನ್ನೆಲ್ಲ ಝಾಡಿಸು
ಹದವಾಗು ಈ ಬಿಸಿಲಿನಲ್ಲಿ
ನಿಗಿ ನಿಗಿಯಾಗಿರುವ ಸೂರ್ಯ ಮುಗಿಲಿನಲ್ಲಿ.
ನಿನ್ನ ಶಕ್ತ ಎಲುವುಗಳಿಗಿಷ್ಟು ಕಿರಣಸ್ನಾನ ಮಾಡಿಸು–
–ಈ ಬೆಳಕ ಬಯಲಿನಲ್ಲಿ
ಉಸಿರಾಡು ಈ ಮಣ್ಣು ಗಾಳಿಯಲ್ಲಿ

ಈಚೆ ಬಾ ಈ ನಗರಗಳಲ್ಲಿ ಈ ಹಂಪೆ ಕೊಂಪೆಗಳಲ್ಲಿ
ರೈಲು ನಿಲ್ದಾಣಗಳಲ್ಲಿ, ರಾಜಮಾರ್ಗಗಳಲ್ಲಿ
ಇಕ್ಕಟ್ಟು ಬೀದಿಗಳಲ್ಲಿ, ಕಿರು ಓಣಿಕೇರಿಗಳಲ್ಲಿ
ಕಾಣು ಈ ಕೆದರು ತಲೆಗಳ
ಸುಕ್ಕು ಮುಖಗಳ ಎಲುವಿನ ಹಂದರಗಳ
ಗೂಡುಗಟ್ಟಿದ ಎದೆಗಳ, ಕಣ್ಣೀರು ಕುಡಿಯುವ
ಮುದಿ ಜೀವಗಳ ದಿನವಿಡೀ ದುಡಿದರೂ
ಹಲುಬುವ ಹೊಟ್ಟೆಗಳ ಬರೀ ಹೊಟ್ಟೆಗಳ—
ಜೀವಂತ ಪ್ರೇತಗಳ ದುಃಖಸಾಗರಗಳ
ತಪ್ತ ಮುಖಗಳ.

# ಇಲ್ಲಿ

ಕಾಳವಾಗಿವೆ ದಿನಗಳು ಕರಾಳವಾಗಿವೆ ರಾತ್ರಿಗಳು
ಈ ಬಾನಿನೀ ಬಯಲಿನೀ ವಿಶಾಲ ಸ್ವಚ್ಛಂದದಲ್ಲೆ
ನಾವು ದಿನ ನಿತ್ಯ ಕೈದಿಗಳು.
ಇಲ್ಲಿ ಹಗಲು ಮುಗಿಯುವುದು ನಿಟ್ಟುಸಿರಿನೊಂದಿಗೆ
ರಾತ್ರಿ ಕಳೆಯುವುದು ನಿಶೆ–ನಿರಾಸೆಯೊಂದಿಗೆ.
ಹಗಲೂ ಇರುಳಿನ ಮೈ ಹತ್ತಿ ಕುಣಿಯುವವು
ಬಿಡಿಸಲಾಗದ ಪ್ರಶ್ನಾರ್ಥಕಗಳು ಹುಟ್ಟು ಸಾವಿನ ನಡುವೆ
ಇಲ್ಲಿ ನಾವೆಂದಿಗೂ ಕೆಲವರ ಬಲಿ ಪಶುಗಳು.
ಎಲ್ಲರಂತೆಯೆ ಹುಟ್ಟಿ ಬಂದವರು ನಾವು ಎಲ್ಲರಂತಲ್ಲ
ಎಲ್ಲರಂತಾಗುವುದು ಕೆಲವರಿಗೆ ಬೇಕಿಲ್ಲ.
ಇಲ್ಲಿ ಧರ್ಮದ ಹೆಸರಿನಲಿ ಅಧರ್ಮವಿದೆ.
ಶಾಂತಿಯ ಹೆಸರಿನಲ್ಲಿ ಅಶಾಂತಿ ಒಂದೊಂದು
ಸವಿ ನುಡಿಯ ಹಿಂದೆ ಮಸೆದ ಚೂಪುಚೂರಿ
ಫಲವಂತ ಭೂಮಿಯೀ ಸಿರಿವಂತ ಕಾಡುಗಳೀ
ತುಂಬಿ ಹರಿಯುವ ಹೊಳೆಗಳೀ ಖನಿಜಗಳೀ ಗರ್ಭಿಣೀ
ಪರ್ವತಾವಳಿಗಳ ಸಾಗರಗಳ ನಡುವೆಯೆ ನಾವು ಅನಾಥರು
ನಿರ್ಮಿಸುವ ಕೈಗಳಿಗೆ ನಿರ್ಮಾಣದ ಫಲವಿಲ್ಲ ಇಲ್ಲಿ
ನಿರ್ಮಾಣದ ನುಡಿಮೊರೆವ ಬಾಯ್ಗಳಿಗೆ ಬಿಡುವಿಲ್ಲ.
ಬದುಕು ತುಂಬಿ ತುಳುಕುವುದಿಲ್ಲ ಇಲ್ಲಿ ಸಾವು
ಅಪೂರ್ಣತೆಗೆಂದೂ ಪೂರ್ಣ ವಿರಾಮವೀಯುವದಿಲ್ಲ.
ಹುಟ್ಟು ಭರವಸೆಯ ಹಾಡ ಹಾಡುವದಿಲ್ಲ.
ಗಂಡು ಗುಲಾಮನಾಗುವನಿಲ್ಲಿ ಹೆಣ್ಣು ಸೂಳೆಯಾಗುವಳು.
ಮನುಷ್ಯ ಹುಲಿಯಾಗುವನಿಲ್ಲಿ ಮನುಷ್ಯ ಕುರಿಯಾಗುವನು.
ಯಂತ್ರವಾಗುವನಿಲ್ಲಿ ಕಮರಿ ಕೊರಡಾಗುವನು
ಎಷ್ಟೆ ನುಂಗಿದರೂ ಬದುಕು ಹರಿವಲ್ಲೆಲ್ಲ
ನೋವಿನ ತೆರೆ ಮೊರೆಗಳೇಳುವವು ಇಲ್ಲಿ.
ಅರಸರಿಗೆ ಕೊನೆಯಿಲ್ಲ ರಾಜರಿಲ್ಲದ ನಾಡಿನಲ್ಲಿ
ಕೋಟಿ ಕೊತ್ತಲಗಳಿವೆ ದುರ್ಗಗಳು ಬಿದ್ದ ದೇಶದಲ್ಲಿ

ಪ್ರಭುಗಳ ಹಿಂದೆ ಮಹಾಪ್ರಭುಗಳುಂಟು ಇಲ್ಲಿ
ಬದುಕಿನ ಸರಕು ಪ್ರಭುಗಳ ದ್ರವ್ಯವಾಗುವದಿಲ್ಲಿ
ಹಣದ ಸಾಣೆಗೆ ನ್ಯಾಯ ಅನ್ಯಾಯಗಳ ಸಾಣಿಸುವದಿಲ್ಲಿ
ತುಂಬಿದ ಕಣಜದ ಬಳಿಯೆ ಉಪವಾಸ ಗತಿಯಾದಲ್ಲಿ
ಇಲ್ಲಿ ಕಾಯಲುಂಟು ಸೈನಿಕರು ಶಿಕ್ಷಕರು,
ತುಪಾಕಿಯಿಂದ ಹಿಡಿದು ಆಟಂಬಾಂಬುಗಳವರೆಗುಂಟು
ಇಲ್ಲಿ ದಿನರಾತ್ರಿಗಳೆಂದಿಗೂ ನಮ್ಮದಾಗಿಲ್ಲ,
ಸ್ವಾತಂತ್ರ್ಯದ ಹೆಸರೆಂದಿಗೂ ಸ್ವತಂತ್ರವಾಗಿಲ್ಲ.
ಸ್ಕೂಲುಗಳು ಗಿಳಿಪಾಠವಾಗುವ್ರದು ಇಲ್ಲುಂಟು
ಗಿಳಿಗಳಂತಹ ಕವಿಗಳಿಗೆ ತುಂಬ ಬೆಲೆಯುಂಟು
ಇಲ್ಲಿ ಹಗಲು ಮುಗಿಯುದು ನಿಟ್ಟುಸಿರಿನೊಂದಿಗೆ
ರಾತ್ರಿ ಕಳೆಯುವದು ನಿರಾಸೆ–ನಿಶೆಯೊಂದಿಗೆ.

# ವಿಜಯಶ್ರೀ ಸಬರದ

## ಜ್ವಲಂತ

ಶತಶತಮಾನಗಳಿಂದ
ತುಳಿಯಲ್ಪಟ್ಟ
ನಾವು–ನಮ್ಮಂತವರು
ಈಗ ಪುಟಿದೆದ್ದಿದ್ದೇವೆ.
ಎದ್ದು ತಿವಿಯುತ್ತೇವೆ.
ಬದುಕಿನ ಪುಟಗಳಲ್ಲಿ
ಬೀಳಲು ಬಿದ್ದ ಜಾಗೆಗಳಾಗಿ
ಎತ್ತರದ ಪಾದುಕೆಗಳನ್ನು
ತಲೆಯ ಮೇಲ್ಹೊತ್ತು ತಿರುಗಿ
ಕುಡಿತದಲ್ಲಿಯೇ ನಿಗಾ ಇಟ್ಟ
ನೀವು–ನಿಮ್ಮಂತವರಿಗೆ
ಅಮಲಿನೊಂದಿಗೆ ಕರಗುವ
ಮೋಜಿನ ಸರಕುಗಳಾಗಿ
ಕರಗಿ ಬಿಟ್ಟಿದ್ದೇವೆ.
ಕೊರಗಿ ಹೋಗಿದ್ದೇವೆ
ಮೈ ತಿಕ್ಕಿ ನೇವರಿಸಿ
ತಳಕ್ಕೊತ್ತಿ ಬಿಡುವ
ನಿಮ್ಮ ಮಿತಿ ಮೀರಿದ
ಆಸೆಗಳೊಂದಿಗೆ
ಸುಟ್ಟುಕೊಂಡಿದ್ದೇವೆ.
ಪೆಟ್ಟು ತಿಂದಿದ್ದೇವೆ

ಮುರಿದು ಹೋದ
ಮನಗಳಲ್ಲೀಗ
ಮುದವಿಲ್ಲದಿದ್ದರೂ
ರೊಚ್ಚಿನ ಕಿಡಿಗಳು
ಕೊಂಬೆ ಕೊಂಬೆಗೂ
ಕೊನರ ಹತ್ತಿವೆ.
ಅಂದು ಬರೀ ಹೊಟ್ಟುದುರುವ
ನಮ್ಮ ಮೈಯಲ್ಲಿಂದು
ಜ್ವಾಲೆಯ ಕಣ್ಣುಗಳು ಹುಟ್ಟವೆ
ಧಗ ಧಗಿಸಹತ್ತಿವೆ.

# ಹೊ. ಮ. ಪಂಡಿತಾರಾಧ್ಯ

## ಗುರುತು ಹತ್ತದವರು

ಹಂದಿ ನಾಯಿಗಳು ವಾಸಿಸಲು
ವಾಸಿಸಲೇಕೆ ಮೂಸಿನೋಡಲೂ
ಹಿಂದೆಸರಿವ ಸಂದಿಗೊಂದಿಗಳಲ್ಲಿ
ಊರಿನ ಕೊಳಚೆಯನೆಲ್ಲಾ ಗುಂಪಿಸಿರುವ
ತಿಪ್ಪೆಗುಂಡಿಗಳಲ್ಲಿ; ದಲಿತೋದ್ಧಾರದ
ಮಂತ್ರದ ಪಠನೆಯು ನಡೆಯುವ
ನೀರಮನೆ ಕಟ್ಟಡಗಳ ನೆರಳುಗಳಲ್ಲಿ
ಭಕ್ತಿಧರ್ಮಗಳೇ ಮೈವೆತ್ತಿ
ಗಂಗೆಯಾಗಿ ತುಂಗೆಯಾಗಿ ಗಟಾರಗಳಾಗಿ
ಹರಿಯುತ್ತಿರುವ ಗುಡಿಗೋಪುರಗಳ
ನೆರಳುಗಳಲ್ಲಿ, ಫುಟ್‌ಪಾತುಗಳಲ್ಲಿ
ಮರದಡಿಯಲ್ಲಿ ಹೂಡಿರುವ
ತೂತು ತೂತು ಬಿದ್ದಿರುವ ಟೆಂಟುಗಳಲ್ಲಿ
        ವಾಸಿಸುತ್ತಾ ಇವೆ
        ದೀಪಕ್ಕೆ ದಿಕ್ಕಿಲ್ಲದೆ
        ತಿನ್ನಲು ತುತ್ತಿಗೆ ಹಕ್ಕಿಲ್ಲದೆ
        ಭವ್ಯ ಭಾರತ ದೇಶದ
        ಸರ್ವಸ್ವತಂತ್ರ ಪ್ರಜೆಗಳು
        ಭಗ್ನ ಬದುಕ ಸಾಗಿಸುತ್ತ
        ಅನುಭವಿಸುತ್ತ; ಕತ್ತಲಿನಲೊಂದು
        ಬೆಳಕಿನ ರೇಖೆಗೆ ಕನವರಿಸುತ್ತ

ಇರುವ ಇವರು
ಗುರುತು ಹತ್ತದವರು
ಈ ಕಲ್ಯಾಣ ಸುಖೀರಾಜ್ಯದ
ಸರ್ವ ಸ್ವತಂತ್ರ ನಾಗರಿಕರು.

# ಉರಿಯುತ್ತಿರುವ ಜನ ನಾವು

ಜಾತಿ ಭೇದ ಪರಂಪರೆಗಳ ಉಗ್ರಾಣಗಳೇ
ಹಿರಿ ಹಿರಿದು ತಿಂದು ಬದುಕ ಸೂರೆಗೊಂಡಿರುವ ಹೆಗ್ಗಣಗಳೇ
ಸಹಿಸುವುದಿಲ್ಲ
ನಾವಿನ್ನು ಸಹಿಸುವುದಿಲ್ಲ
ಸಹಿಸಲಾಗುವುದಿಲ್ಲ
ಉರಿಯುತ್ತಿರುವ ಜನ ನಾವು.
ಪಲ್ಲಕ್ಕಿಯ ಏರಿ
ಎಷ್ಟು ದಿನ ನಮ್ಮ ಹೆಗಲುಗಳ ಮೇಲೆ
ಕಾರು ಭಾರು ಮಾಡುವಿರಿ ?
ಪಲ್ಲಕ್ಕಿಯ ಬುಡಮೇಲು ಮಾಡುತ್ತೇವೆ
ನಮ್ಮನೆಡೆಮುರಿಕಟ್ಟಿ ಹಾಕಿ
ಸುತ್ತಲೂ ಕಟ್ಟಿರುವ ನಿಮ್ಮ ಭದ್ರ ಕೋಟೆಯ ನಾವು
ಉಗುರಿನಿಂದಲೇ ಕೆರೆಕೆರೆದು ಕೆಡವುತ್ತೇವೆ.
ನಮ್ಮ ಕಾಲ್ಗಳಿಗೆ ಕಟ್ಟಿರುವ
ಕಬ್ಬಿಣ ತೊಲೆಗಳ ಲೆಕ್ಕಿಸದೇ
ನೀವು ನಿರ್ಮಿಸಿದ ಈ ಅಸ್ತವ್ಯಸ್ತ ಸಮಾಜದ
ಅವ್ಯವಸ್ಥೆಯ ಹೊಂಡಗಳ ಜಿಗಿಯುತ್ತೇವೆ
ನಮ್ಮೆಲುವುಗಳ ಕಲ್ಲುಗಳಾಗಿಟ್ಟು
ಮೈಯರಕ್ತವ ನೀರಾಗಿ ಕಲೆಸಿ
ಮಾಂಸವ ಕೆಸರಾಗಿ ಮೆತ್ತಿ
ನೀವು ಕಟ್ಟಿಕೊಂಡಿರುವ ನಿಮ್ಮರಮನೆಗಳ
ಕಂಬಗಳ ಹೊಡೆದುರುಳಿಸುತ್ತೇವೆ.
ಶತಶತಮಾನಗಳಿಂದಲೂ
ನಮ್ಮ ಬದುಕಿನ ತೋಟದೊಳಗೆ
ತೊತ್ತಳ ತುಳಿಯುವ ನಿಮ್ಮ ತುಡುಗುದನಗಳ
ಕೊರಳುಗಳಿಗೆ ಗುದ್ದಿಯಡ ಕಟ್ಟಿ
ಕೊಂಡವಾಡಕೆ ಅಟ್ಟಿ
ನಮ್ಮ ಬಂಧುರ ಕನಸಿನ ಹೂ ಅರಳಿಸುತ್ತೇವೆ.

೩೬೧/ಹೊ. ಮ. ಪಂಡಿತಾರಾಧ್ಯ

## ಬಿ. ರಾಜಣ್ಣ

---

### ಕೃಷ್ಣ ಪುರಾಣ

ಮೊನ್ನೆ :

ಮುಂಗೋಳಿಗೆ ಮುಂಜೆಯೆ ಎದ್ದ
ನನ್ನೂರ ಗೆಂಡೆಬೋರನ ಮಡದಿ ಮರಿಸಿದ್ದಿ
ಮಾದಿಗರ ಬುಂಡೆಕಾಳನ ಜತೆ ಓಡಿ ಹೋದಾಗ
ಹೊತ್ತು ಹುಟ್ಟಿದ ಮೇಲೆ ವಕ್ಕಲಗೇರಿಯಲ್ಲಿ ಗುಲ್ಲೋಗುಲ್ಲು
....ಹಾದ್ರುಗಿತ್ತಿ ಮುಂಡೆ ಚಲ್ಲಂಡೆ ರಂಡೆ
ಕೂಡುದ್ ಗಂಡುನ್ ಬುಟ್ಟೋಡೋಗ್ಬುಟ್ಳು
ಮಿಂಡಾಗಾರುನ್ ಕುಟ್ಟಿ, ಜಾತ್ಗೆಟ್ಟು ಕುಲ ಗೆಟ್ಟು
ಅದ್ನೆ ನೋಡಿ ಕಲೀಬೇಕು ಬಾಳೊ ಬದ್ಕೋ ಮಕ್ಳು
ಮೂರ್ನೂ ಬುಟ್ಟು........ಇತ್ಯಾದಿ.

ಸಂಜೆ :

ಬುಂಡೆಕಾಳನ ಅಪ್ಪ ಕರಡಿ ಕಟೇರನನ್ನು
ಹುಡುಕಿ ಹೆಡೆಕಟ್ಟಿ ಹಿಡಿತರಿಸಿ
ಪಂಚಾಯ್ತಿ ಕಟ್ಟೆ ಕಂಭಕ್ಕೆ ಕಟ್ಟಿ
'ಮರ್ಯಾದಸ್ತರು'
ಸಕತ್ತು ದಂಡ ಹಾಕುತ್ತಿದ್ದಾಗ
ಸುಂಯ್ಯನೆ ಬೀಸಿದ ಮೂಡಲ ಗಾಳಿಗೆ
ಪಂಚಾಯ್ತಿ ಗೋಡೆಯ 'ರಾಧಾಕೃಷ್ಣರ' ಕ್ಯಾಲೆಂಡರು

ಗೋಣು ತಿರುವಿ ಪಟಪಟಿಸಿತು.
ಬೆಟ್ಟದಾಚೆಯ ಹೊಂಗಿರಣದ ಹೊತ್ತು
ಪಂಚಾಯ್ತಿ ಕಟ್ಟೆ ಚಾವಡಿಯನ್ನು
ಕೆಂಗರಿಸಿ ನೋಡುತ್ತಿದ್ದಂತೆಯೇ
ಕಪ್ಪಾಗಿ ಹೋಯ್ತು
'ನ್ಯಾಯ' ಮುಗಿದು
ಕಂಬದ ಕಟ್ಟ ಬಿಚ್ಚಿದೇಟಿಗೆ
ಕಟೇರನ ರುಂಡ–ಮುಂಡ ಕೈಕಾಲೆಲ್ಲ
ಕವಿದ ಕತ್ತಲ ಸಿರಿಗರ್ಭದಲ್ಲಿ
ಒಂದೇ ಪಿಂಡವಾಗಿ ಬಿಟ್ಟವು : ಕೈಮಾ
ಉಂಡೆಯಂತೆ.

# ಜಿ. ಎಸ್. ಉಬರಡ್ಕ

## ಹೊತ್ತು ಮುಳುಗುವ ಮುನ್ನ

ಎತ್ತಿದ ಕೈಗಳ ಕತ್ತರಿಸಿ
ಹಿಡಿದು ಹೆಡೆ ಮುರಿಕಟ್ಟಿ
ಉರುಳಿಸಿ ಉರುಳಿಸಿ ಮೈಯ ಗಂಟುಗಂಟಿಗೆ ಹೊಡೆದು
ದರ ದರ ಎಳೆದುಕೊಂದು
ತಿಂದು ತೇಗಿದ್ದು ಸಾಲದೆ ನಮ್ಮ ತೇಜೋವಧೆಗೆ
ಚಂಡಾಲರೆಂದು ಬೈದು ಹೆಸರಿಟ್ಟು,
ತಮಟೆ ಬಡಿದು ಊರೆಲ್ಲ ಡಂಗು ಹೊಯ್ದ
ನರಭಕ್ಷಕ ಧುರೀಣರೇ, ನೀವು ಮತ್ತು ನಿಮ್ಮಂಥವರು
ದಲಿತೋದ್ಧಾರಕ ತಾರಕ ಮಂತ್ರ ಜಪಿಸುತ್ತ ಭಾಷಣಗಳಲ್ಲಿ
ವೃತ್ತ ಪತ್ರಿಕೆಗಳಲ್ಲಿ ರಾರಾಜಿಸುವ
ನಿಮ್ಮ ಆನೆ ಸವಾರಿಯ ಗತ್ತು ಗಮ್ಮತ್ತು
ಎಲ್ಲ ಮಸಲತ್ತು ಗೊತ್ತು, ಬಿಡಿ.
ನಿಮ್ಮ ಕಾಮ ಪಿಪಾಸೆ ಎಷ್ಟೆಂದು ಗೊತ್ತು ;
ಪೀಪಾಯಿ ಪೀಪಾಯಿ ಹೆಂಡಕ್ಕೆ
ಖಾಲಿ ಬಾಟಲುಗಳಿಗೂ ಕೂಡ ನಮ್ಮ ತಾಯಿ ತಂಗಿಯರ ಹಿಡಿದೆಳೆದು
ಕೊನೆಗೆ ಮಾರಿ ಕೊಂದವರು ನೀವು.
ನಮ್ಮ ಗುಂಡಿಗೆಯ ಬಿಸಿ ರಕ್ತ
ತಣ್ಣಗೆ ಕೂಡುವ ಗುಲಾಮಗಿರಿ ಖಂಡಿತ ಇದಲ್ಲ
ಕ್ಯಾಕ್ಟಸ್ ಸಮೇತ ಹಸಿರೆಲ್ಲ ಕತ್ತರಿಸಿ
ಹಿಡಿ ಹಿಡಿ ಮುಕ್ಕುವ ನಿಮ್ಮ ಕೆಟ್ಟ ಮುಸುಡಿಗೆ

ರಪ್ಪನೆ ಬಾರಿಸಿ ಬರೆಯೆಳೆಯುವ ನಾವು ಪಾಪಾಸುಕಳ್ಳಿ ಕಣೆಕಣೆ ಮುಳ್ಳು
ನಿಮ್ಮ ವಿಜಯಪತಾಕೆ ಪಟಪಟಿಸಿದಲ್ಲಿ ಸರಕ್ಕನೆಳೆವ ಕಠಾರಿ ;
ನಿಮ್ಮ ಹೆಣಗಳ ಮೇಲೆ ನಮ್ಮ ಕುದುರೆ ಸವಾರಿ—
ಹೊತ್ತು ಮುಳುಗುವ ಮುನ್ನ.

# ಚಂದ್ರಶೇಖರ ತಾಳ್ಯ

## ಒಂದು ತುಡಿತ

ಮುಗಿಲಿನಂಗಳದಲ್ಲಿ
ಎತ್ತಿ, ಆಡಿಸಿ, ತೇಲುವ ನನ್ನ
ಕನಸೆ
ಬಿದ್ದೇಳ ಬಾರದೆ
ಈ ಕೆಸರಿನಾಳಕ್ಕೊತ್ತ ದಟ್ಟ ವಾಸನೆಯಲ್ಲಿ
ಕಪ್ಪು ನೆಲದ ಈ ಉತ್ಕೃಷ್ಟತೆಯಲ್ಲಿ
ಇಲ್ಲಿ
ಮಾತುಗಳ, ಬೇರುಗಳ
ನಟ್ಟು ಕಳೆ ತೆಗೆದು
ತೆನೆ ಬಿಡಿಸಬೇಕು
ಕಪ್ಪು ಕಣ್ಣುಗಳಲ್ಲಿ
ನೆತ್ತರುಕ್ಕುವ
ವಾಸ್ತವ ಚಿತ್ರಕ್ಕೆ
ಮುನ್ನಡಿ ಬರೆಯಬೇಕು
ಕನಸಿನ ಡುಬ್ಬವನ್ನೊಡೆದು
ನೆಲಕ್ಕಿಳಿದು
ಮಣ್ಣ ಕಣ ಕಣದಲ್ಲು
ಸರಹದ್ದಿನಲ್ಲು
ಚರಗ ಚಲ್ಲಬೇಕು
ಜಂತುಗಳ ನಾಶ ಮಾಡಬೇಕು.

# ಕತೆ ಹೇಳಲೇನೋ ಕಂದ

ಕೆನೆ ಹಾಲು ಕೇಳುತ್ತಿ
ಕೆನೆ ಮೊಸರು ಕೇಳುತ್ತಿ
ಎಲ್ಲಿಂದ ತರಲವ್ವ
ಇಂಥ ಕಂದನನ್ನು.
ಅಡಿಗೆ ಮನೆಯೊಳಗೆ
ಒಲೆ ತಣ್ಣಗಾಗಿದೆ
ಮನೆಯೊಳಗೆ ಜೀವ ಸುಮ್ಮಗಾಗಿದೆ
ಕಂದ ನಿನ್ನಪ್ಪ ಬಿಸಿಲಿಗೆ ಹೋಗ್ಯಾನೆ
ಎಲ್ಲಿಂದ ತರಲಪ್ಪ ಕೆನೆಹಾಲು ಮೊಸರು
ಕಂದನ ಅಂಗಿ ಹರಿದ ಚಿಂದಿ
ಕಣ್ಣು ಹೊಳೆವ ಗುಲಗಂಜಿ
ನಕ್ಕರೋ ಹಲ್ಲು ಬಿಡುತಾವೆ ದಾಳಿಂಬೆ
ಹುಬ್ಬು ಬೀಸುತಾವೆ ತಂಗಾಳಿ ಚವರಿ
ಬೈಗಾದರು ಅಪ್ಪ ಹಿಂತಿರುಗಲಿಲ್ಲ
ಕತ್ತಲಾದರು ಅಪ್ಪ ಮನೆಗೆ ಬರಲಿಲ್ಲ
ಕೆನೆಹಾಲು ಮೊಸರು ತರಲಿಲ್ಲ
ಕಂದ ಅಪ್ಪನ ಮೈಯೊಳಗೆ ರಕುತಿಲ್ಲ
ಮತ್ತೂ ತೊದಲುವ ಕಂದ
ಕತೆ ಹೇಳಲೇನೋ
ಹಾಲು ಮೊಸರಿನ ಕತೆಯ
ಲಾಲಿ ಹೇಳಲೇನೋ
ಜೋಗುಳದ ಕಂದ
ನಿನ್ನಪ್ಪ ಸಿರಿವಂತರಿಗೆ
ತನ ಜೀವ ಮಾರಿ ಬಂದ.

# ಹೊರೆಯಾಲ ದೊರೆಸ್ವಾಮಿ

## ಈ ಚರಿತ್ರೆ ನಮ್ಮದಲ್ಲ

ಈ ಚರಿತ್ರೆ ನಮ್ಮದಲ್ಲ
ಇದು ನಮಗಲ್ಲ

ರಾಜಾಧಿರಾಜಮಾರ್ತಾಂಡ ಬಿರುದಂತೆಂಬರ ಗಂಡ
ಬಿರುದು ಹೊತ್ತ ಈ ದೇಶದ ಧರಿತ್ರೀಪಾಲನ ಚರಿತ್ರೆ
ಕೀವು ತುಂಬಿಕೊಂಡು
ಬದುಕು ಮುದುಡಿಕೊಂಡು
ನೆಲದ ಬಾಂಡಲೆ ಮೇಲೆ ಪಟಪಟನೆ ನುಲುಗಾಡಿ
ಬಾಳು ಹಳಿದುಕೊಂಡ
ಅತ್ತವರ ಸತ್ತವರ ಇತಿಹಾಸವಲ್ಲವಿದು.

ಭೋಜರಾಜನ ಹೆಂಡತಿಯರು ಲೆಖ್ಖಕ್ಕೆ ಆರು
ಮಕ್ಕಳು, ಸರಾಸರಿ ಹತ್ತು
ಉಳಿದವರ ಬಸಿರು ಅಳಿದಿತ್ತು
ಮೊದಲ ಮಗ ಅಪ್ಪನ ಇರಿದ
ಎರಡನೆಯ ಮಗ ಅವ್ವೆಯ ಕೂಡಿದ
ಕಿರಿಯವಳು ತನ್ನಣ್ಣನಿಗೆ ಬಸಿರು ಹಿರಿಯವಳು ತನ್ನಪ್ಪನ ಕೊಸರು
ನಡೆದದ್ದು ತಾಳಿಕೋಟೆ ಯುದ್ಧ
ಇಕ್ಕೆಲದ ಭಟರುಗಳು ಸಾಯುವುದಕ್ಕೆ ಸದಾಸಿದ್ಧ
ಯುದ್ಧಕ್ಕೆ ಬಂದ

ಗಜ ತುರಗ ರಥ ಪದಾತಿಗಳ ಸೈನ್ಯ ಲಕ್ಷೋಪಲಕ್ಷ
ಯುದ್ಧ ಹೂಡಲು ಬಂದ
ರಾಜಾಧಿರಾಜರಿಗೆ ಇದು ಯಾವ ಲಕ್ಷ್ಯ ?
ನಡೆಸಿದ್ದ : ಸಾಲುಮರ
ದೇಶದಲ್ಲೆಲ್ಲೆಲ್ಲೂ ನೀರಿನ ಬರ
ಅರವಟ್ಟಿಗೆಯಲ್ಲಿ ಕುಳಿತವರ ಬೊಜ್ಜು ಬೆಳೆದಿತ್ತು
ದೀನ ದಲಿತರ ಪಾಡು ತಮಟೆ ಹೊಡೆದಿತ್ತು
ಅರಮನೆಯ ದಾಸಿಯರೆಲ್ಲ
ರಾಜ್ಞಾಸ್ಥಾನದ ಸೇವೆಗೆ ವೈಚೆಲ್ಲಿ
ಗಂಡಮಿಂಡರು ಬಳಸೊಗೆದ
ನಾಯಿ ಮುಟ್ಟದ ಮಡಕೆ

ಇವರ ರಾಜ್ಯದಲ್ಲಿ ಹೆಣ್ಣಿಗೆ ಹನ್ನೆರಡಾಗಲಿಲ್ಲ
ಆದವರು ಉಳಿಯಲಿಲ್ಲ.
ಒರಲುತ್ತ ನರಳುತ್ತ ನರಳುತ್ತ ಸಾಯುತ್ತ
ಸತ್ತ ಜನಗಳ ಕೂಗು ಅರಮನೆಯ ಅರಸರಿಗೆ ಕೇಳಲಿಲ್ಲ
ಕೂಗು ಕೇಳಿದರೂ
ಬಿದ್ದ ರಾಜರ ದೃಷ್ಟಿಗುಳಿಯಲಿಲ್ಲ
ಯಾಕೆಂದರೆ
'ರಾಜಾ ಪ್ರತ್ಯಕ್ಷ ದೇವತಾ'
ಹೀಗಾಗಿ ಅತ್ತವರು ಹೇಗೇಗೊ ಸತ್ತವರು
ಆಗಿಹೋದರು ನಮ್ಮ ಇತಿಹಾಸದಲ್ಲಿ
ಹೀಗೆಯೇ ಉಳಿಯುವುದೆ ನಾವಿನ್ನು ಮುನ್ನ
ಕಟ್ಟಬೇಡವೆ ನಾವು ನಮ್ಮ ಮನೆಯನ್ನು ?

# ಸರಜೂ ಕಾಟಕರ

## ಸೂರ್ಯ

ಉರಿಯುವ ಸೂರ್ಯನನ್ನು ಹೊಡೆಯಲು
ಬಡೆಯಲು ಕಡೆಯಲು ಸನ್ನಾಹ ನಡೆಯುತ್ತಿದೆ
ಒಳ ಸಂಚುಗಳು ತುಡಿಯುತ್ತಿವೆ
ಎದೆಯಲ್ಲಿ ಹಾಲಾಹಲ ಎಲ್ಲೆಡೆಗೆ ಕೋಲಾಹಲ
ಬಿಡಿರೋ ಅವನನ್ನು ಬಿಡಿರೋ ಇಲ್ಲದಿರೆ
ಸುಟ್ಟು ಸಾಯುವಿರಿ ಬಾಯಿಗೆ ನೀರಿಲ್ಲದೆ
ಅವನನ್ನು ನುಗಿಸಿದ ಕತ್ತಲು ಕೋಣೆ
ಜಗ್ಗೆಂದು ಮಿಂಚು ಹಡೆಯುತ್ತಿದೆ
ಬೆಳಕು ಕಣ್ಣು ಕುಕ್ಕಿಸುತ್ತದೆಂದು ಬಾಗಿಲು
ಹಾಕಬೇಡಿರೋ ಅಸಾಧ್ಯ ಕತ್ತಲಾವರಿಸಿ ಇದ್ದ
ಎರಡು ಕಣ್ಣುಗಳೂ ಕುರುಡಾದವು
ಅರಿಯಿರೋ ಈ ಸತ್ಯವನು ಅರಿಯಿರೋ
ನೋಡಿಕೊಳ್ಳಿರಿ ಒಮ್ಮೆ ಎಡಬಲ :
ನಿಮ್ಮ ಕಣ್ಣಲ್ಲಿ ಸೂರ್ಯ ನಿಮ್ಮ ಮನದಲ್ಲಿ ಸೂರ್ಯ
ನಿಮ್ಮ ಉಸಿರಿನಲ್ಲಿ ಸೂರ್ಯ ನಿಮ್ಮ ಅಂಗಾಂಗದಲಿ ಸೂರ್ಯ
ಎಲ್ಲೆಡೆಗೆ ಸೂರ್ಯ ಸೂರ್ಯ ಸೂರ್ಯ ಸೂರ್ಯ
ಮೂಢ ಮತಿಗಳು
ಪಶ್ಚಾತ್ತಾಪ ಪಡದಿದ್ದರೆ ಬೂದಿಯಾಗುವಿರಿ
ಸಾಯಿಬಾಬಾನ ಜೋಳಿಗೆ ತುಂಬ.
ಇದು ಅನುಭವ
ತಪಿಸುವ ಸೂರ್ಯನ ಪ್ರಖರತೆ
ಎಂದಿಗೂ ತಣ್ಣಗಾಗುವುದಿಲ್ಲ.

# ಶೂದ್ರ ಶ್ರೀನಿವಾಸ್

## ಭಯದ ಸೆರಗಿನಲಿ

ಕೂಗಬೇಕೆಂದಾಗ
ಕೂಗಲಾರದ ಮಂದಿ
ಕಾಡುವ ನೆನಪಿನ ಸುಳಿಗೆ
ನೂರು ನೋವಿನ ತಂತಿಗಳ ಮಿಡಿತ

ಬಡಿಯುತ್ತವೆ ಜಾಗಟೆಗಳು
ಎದೆಯ ತಳಮುಳಕ್ಕೆ
ಧ್ವನಿಗೂಡಿಸುತ್ತವೆ.

ಹಕ್ಕಿಗಳಂತೆ ಚಿಲಿಪಿಲಿ ಗುಟ್ಟುವ
ಮಕ್ಕಳು–
ಅಸ್ಥಿಪಂಜರದ ಪ್ರೇತ–
ಸ್ವರೂಪಗಳು
ಹಾರುತ್ತವೆ ವಿಮಾನಗಳು
ಓಡುತ್ತವೆ ರೈಲುಗಳು
ಭಯಂಕರ ಚೀರಾಟದಲ್ಲಿ
ಕಪ್ಪು ಹೊಗೆಯ ಚೆಲ್ಲುತ್ತ
ಬಂದೂಕಿನ ತುದಿ
ರಕ್ತ ಹೆಪ್ಪುಗಟ್ಟಿಸುತ್ತದೆ.

# ಸಮಕಾಲೀನರು

ಬಿಸಿ ರಕ್ತದ
ಜೀವ ಹೊತ್ತ ದೇಹಗಳು
ಕೂಗುತ್ತವೆ ಬೀದಿ ಬೀದಿಯಲ್ಲಿ
ಬೆಂಕಿ ಕಾರುವ ಗುಂಡುಗಳು
ಕಾಕಿ ಬಟ್ಟೆಯ ಕಾವಲು
ನೂರು ಬೇಡಿಕೆಗಳ ಹೊತ್ತ
ಪ್ಲಕಾರ್ಡುಗಳು
ರಸ್ತೆ ಬದಿಯ ಚಿಪ್ಪುಗಳು—
ವಾಸನೆ
ಬೆತ್ತಲೆ ಬಿದ್ದವರು
ಕಿತ್ತು ತಿನ್ನುವ ನೊಣಗಳು
ಹೂಡಿದ್ದಾರೆ ಧರಣಿ ಮುಷ್ಕರ
ಅನ್ನ ಕಾಣದ ಜನರ
ಉಪವಾಸ ಸತ್ಯಾಗ್ರಹ.
ಗಾಂಧಿ, ಜೆ. ಪಿ.
ಸ್ವಾತಂತ್ರ್ಯ–ಪ್ರಜಾಪ್ರಭುತ್ವ
ಚುನಾವಣೆ—
ಯಾವುದನ್ನೂ ಅರಿಯದ ಮಂದಿಯ
ದೈನಂದಿನ ಸಾವು
ಕಾರ್ಪೊರೇಷನ್ನಿನ ಸರಪಳಿಗಳು
ಮುನಿಸಿಪಲ್ ತೊಟ್ಟಿಗಳು
ನಾಯಿಗಳು–ನರಿಗಳು–ರಣಹದ್ದುಗಳು
ಭಯಂಕರತೆಯಲ್ಲಿ
ಕತ್ತಲ ಸೀಳುತ್ತವೆ
ಹಸಿವಿಗೆ ನಿದ್ರಿಸಲಾರದ ಮಕ್ಕಳು
ಆರಿಸತ್ತ
ಅಮ್ಮ ಅಪ್ಪಂದಿರಿಗೆ
ದುಃಖ ತೋಡಿಕೊಳ್ಳುತ್ತವೆ.

# ಸುಂದರ ನಾಡಕರ್ಣಿ

## ಆಳು

ಊರಿಗೂರೇ ಹಳಿದು ಬಂದ ಅಪಸ್ವರ ಶಬ್ದ
ಕುಲಗೆಟ್ಟ ಗಾಳಿ ಕರಕರೆಕೊಟ್ಟು
ಕಿವಿಯ ದ್ವಾರವ ಒಡೆದು ಒಳಹೊಕ್ಕು
ಥಾಂದಲೆಬ್ಬಿಸುತ್ತಿದ್ದ ಧ್ವನಿ—
ಆಳು................ಆಳು
ಒಡೆಯರ ಮನೆ ಕತ್ತಿಗೆ ಕಾಯಂ ಗೋಳು
ಮೂರು ಗೇಣಿನ ಕಚ್ಚೆ ನೂರು ಗಂಟೂ ಕಡಿಮೆ
ಆಚೆಸರಿಪಡಿಸುತಿರೆ ಈಚೆ ನೋಡಾಡುತಿದೆ
ಮೋಜು ತುಂಬಿದ ನಗೆಯ 'ಖೋ–ಖೋ' ಆಟ
ಮರ್ಯಾದೆ ಬಿಚ್ಚದೆ ಬರಿ ಮೈಯ ಮುಚ್ಚದೆ
ಮಂದಿಯೆದುರಿಗೆ ಬರಿಯ ಕಸರತ್ತಿನಾಟ
ತುತ್ತು ಕೂಳಿನ ಚೀಲ ತಲೆಕೆಳಗೆ ಅಂತರ್ಲಾಗ ಹೊಡೆಯುತಿದೆ
ಹಂಗೇ ಇಲ್ಲದ ಮಂಕು, ದಿನದ ಪೀಡೆ,
ಬಯಕೆ ಗೂಡಿನ ಒಳಗೆ ಆಸೆ ತತ್ತರಿಸುತಿದೆ
ನೀರು ಗಾಣದ ಬಯಲು ಬಾಳೇ ಮಸಣ
ಅಚ್ಚು ಹಗಲಿನ ತಾಪ ಹುಟ್ಟು ಆಯಿತು ಶಾಪ
ಬೆಳೆದಾಸೆ ಜಗ್ಗುವಿಕೆ ಸೋತು ಬಂತು
ಎರಡು ಬಣಿವೆಯ ನಡುವೆ ಎಳೆವ ಗಾಣದ ಎತ್ತು
ಅಪರಾಹ್ನ ಹಸಿದೊಡಲು ತಪ್ತ ಶೂಲ
ಉಭಯ ಸಂಕಟ ಬಂತು ಕೆರಳಿಸುವ ದಿನಗೂಲಿ
ಮೌನಗೂಸಿಗೆ ದಿನವೂ ತೌರುಮನೆ ಹೆರಿಗೆ

ದುಡಿದುಣ್ಣು ಎಲೆ ಆಲಸಿಗಳಪ್ಪ
ಗೂಗೆ ಇನ್ನೂ ತುಂಡು ಆಲಾಪ ಎಳೆವಾಗ
ವಿಕೋಪಕ್ಕಿಳಿದ ವ್ಯಂಗ್ಯ ಚಳಿಯಲಿ ಎದ್ದೇಳು
ದಿಗಂಬರ ಹೊರಡು
ನೇಯ್ದು ಮಡಲಿನ ಗುಡಿಯ ನವಿಲುಗಣ್ಣುಗಳಿಂದ
ವಾಯು ದೇವರು ಅಸ್ತ್ರ ಮೈತುಂಬಿ ಬಿಟ್ಟಾಗ
ಬಿಟ್ಟ ದುಡಿತವೇ ಅದಕೆ ಎದುರಾದ ಪ್ರತ್ಯಸ್ತ್ರ
ಹೆಪ್ಪುಗಟ್ಟುವ ಮೈಯ ಕೊರಡುತನಕಂಜದಿರು
ಮದ್ದಿದೆ—
ಚಾಬೂಕಿನಗ್ಗಳಿಕೆಯಿದೆ
ಮೈಮೇಲೆ ತೀರ ಹೊಸ ಮಾದರಿಯ ಚಿತ್ರ ಬರೆಯುವ
ಹಸಿ ಬೆತ್ತವಿದೆ, ಬಿಸಿ ಲತ್ತೆಯಿವೆ, ಮತ್ತೆ ಇದೆ—
ಏನು ಬೇಕಾದರೂ ಹೇಳು
ಎಲ್ಲ ಗರಮಾಗರಮ್ ಸಿದ್ಧ
ಇದೇ ನಿನಗೆ ಬದ್ಧ
ಹೊತ್ತರ ಮುಂಚಿನ ಈ ಕೂಳು ಮುಗಿಸೇಳು
ಕಾದ ಕಲ್ಲಿನ ಮೇಲೆ ನಿಂತು ನಿಂತ ಕಲ್ಲನೇ ಕೆತ್ತಿ
ಮಧ್ಯಾಹ್ನವನು ನೂಕಿ ಸೇಡು ತೀರಿಸಿಕೋ
(ಊಟ ತೀರಿಸಿಕೋ)
ಸಂಜೆ ಹೆಣ್ಣನು ಕರೆ
ಹಟ ಹಿಡಿದು ಮನೆಬಿಟ್ಟ ಕತ್ತಲೆಯು ಬರಲಿ
ನಿನ್ನ ಬಾಳ ಸಂಗಾತಿ ನಿನ್ನಾಪ್ತ ಜೊತೆಗಿರಲಿ
ಜಗವಿರಲಿ ದೂರ

ವಂಶಪಾರಂಪರ್ಯ ಜೊಮ್ಮು ನೆತ್ತಿಗೆ ಏರಿ
ಮದೋನ್ಮತ್ತಿನ ಕಹಳೆ ಊರಿಗೂದಿತ್ತು
ಮಹಲಿನಂತಃಪುರದ ರಗ್ಗಿನೊಳಗಡೆ 'ಕಾಮಿ'
ಹಸಿದೆದ್ದು ಹಾಲಿಗಪ್ಪಣೆಯ ಕೊಡುತ್ತಿತ್ತು
ಬೃಂದಾವನದಿಂದಲೇ ರೋಕಡಾ ಇತ್ತು ತಂದಗಾಳಿ
ಮೈ ಕೈಗೆ ಮುದ್ದಿಟ್ಟು ಕಿವಿಯಲೇನೋ ಉಲಿದು
ತನ್ನನರಿಯದೆ ತಾನೇ ಅಲೆಯುತ್ತಿತ್ತು

ಆಳು
ಬೇಕಾದ ಹಾಗೆ ಅಳು
ಕೈಯಲ್ಲಿ ಇದೆ ಸತ್ತೆ.
ನೀನೇ ಮಾತೃಪಿತ, ನೀನೇ ದೇವರು ಸತ್ಯ
ನೀನವರ ಸರಕಾರ ಪೂರ ಪೂರ
ದೊರೆಯೇ ಎಂಬವರನ್ನು ಗೊಬ್ಬರ ಗುಣಿಗಿಟ್ಟು ಮೆಟ್ಟು
ಕುಟ್ಟು ತಲೆ ಜುಟ್ಟ ಹಿಡಿದೇ ದಬ್ಬು
ದೊಡ್ಡಸ್ಥಿಕೆಗೊಂದು ಮೇಲುಪ್ಪರಿಗೆ ಕಟ್ಟು
ಅಹ ಏನು ಸುಖವಿದೆ ಇಲ್ಲಿ ಬರಪೂರ ಗಮ್ಮತ್ತು.
ಆಳು, ಆಳಿಕೆ ಇರುವನಕ ಅಳು.
ಸಗ್ಗದೂರಿನ ತಿಂಡಿ ಬಾಯಿ ತಿಂಡಿಗೆ ಇಟ್ಟು
ಚಪಲ ತೀರಿಸಿಕೊಂಡು ತೃಪ್ತನಾಗು
ಜನುಮ ಜನುಮಾಂತರದ ಹಟ ಹಿಡಿದ ಹಾದಿ ಅದು
ಮಾತೇ ಕೇಳದು ಪಾಪ ಹುಚ್ಚು ಖೋಡಿ
ಚಹದ ಹೊತ್ತಿದು ಈಗ ಅಮೃತ ಪಾನದ ಗಳಿಗೆ
ಬಿಸಿಬಿಸಿಯ ಅಮಲಿಗೆ ಆಮ್ಲೇಟು ಒಂದು
ಹಿಚುಕು ಕೋಳಿಯ ಕೊರಳು ಕದ್ದು ಕೊಟ್ಟಿಗೆಯೊಳಗೆ
ಯಾವ ಬ್ರಾಂಡಿದೆ ನೋಡು ಬ್ರಾಂಡಿ ಬಾಟಲಿ ತೆಗೆದು
ಬ್ರಾಂಡು ಹೊಸದಿದೆ ಸ್ವಾಮಿ ಬ್ರಾಂಡಿ ಹಳತೇ
ಮೊಮ್ಮಗನಿಗೂ ಥೇಟು ಅಜ್ಜನದೇ ರೂಪ
ಒಡತನಕೆ ಒಗ್ಗರಣೆ ಇಟ್ಟು ಬಂದಿಹ ಧೀರ
ಹೊತ್ತು ಇಳಿಯುವ ಮೊದಲು ಭಾರಿ ಮೆಟನೀ ಆಟ
ಅದಕಿರುವ ಗಮ್ಮತ್ತು ಸವಿದು ಬಲ್ಲೆ
ಮನೆ ಹೊರಗೆ ಬೇನೆ ಸಂಕಟ ಹಸಿವು
ಕಸವಿಸಿ ಕಳವಳ ಕೊಳ್ಳೆ
ಮಳೆ, ಬಿರುಗಾಳಿ ಹೋಳಿ ಕೂಗುಧ್ವನಿ
ಕಾಲ ಕೆಳಗಿನ ಕಂಗಾಲರ ಗೋಳು
ಕೇಳಲಾಗದ ಪೀಡೇ—?
ಕದ ಮುಚ್ಚು, ಕಿವಿ ಮುಚ್ಚು,
ಕಿಡಕಿ ಬಾಗಿಲ ಮುಚ್ಚು
ಕೊಡು ಕಿವಿಗಳೆರಡನೂ ಆ ಬಂದ ಮೃದುಮಾತಿನರಗಿಣಿಗೆ

೩೭೫/ಸುಂದರ ನಾಡಕರ್ಣಿ

ಅನ್ನ ಪೀಡೆಯ ಗೋಡೆಯಾಚೆಗೆ—
ಆಡು ರಾಸ ಕ್ರೀಡೆ
ಬಯಕೆ ಬನದಲ್ಲಿರುವ ರಾಜಬ್ರಹ್ಮನ ಬಾಳು
ಹಗ್ಗ ಹುಸಿಯುವವರೆಗೆ ಜೋಕಾಲಿಯಾಟ.
ದಿನದ ಮಸ್ತಿನ ಆಟ ಸೂರ್ಯ ಗಸ್ತಿನ ಸಾಟಿ
ಇವನೊಬ್ಬ ನಿನ್ನಾಪ್ತ ನೀ ಇರುವ ತನಕ.
ಆತನಕ ಧೀರ ಜಗನಿನಗೆ ಪೂರ.

# ಯು. ಬಿ. ಫಕೀರಗೌಡ

## ಜೀತ–ಗೀತ

ಅಜ್ಜನ ಹಸಿದ ಒಡಲಿಗೆ
ಮೋಸಲಾದ
ಮುತ್ತಜ್ಜನ ರಕ್ತದ ಕಣಕಣದಲ್ಲಿ
ಹೆಪ್ಪುಗಟ್ಟದ
ಋಣದ ಹಾಸೀಲಿಗೆ
ಪ್ರತಿಯಾದ
ಆ........ಸತ್ತ
ದಿನಗಳ ಸುತ್ತ
ಸೆಣಸಾಡಿ–ಗಂಡಸುತನವನ್ನು
ಕಳೆದುಕೊಂಡ ಶಕ್ತಿಗೆ
ಬದಲಾಗಿ
ಈತನ ಮೊಮ್ಮಗನ
ಉಸಿರು–ಕುಸಿಯುವವರೆಗಿನ
ಬೆವರು ಹನಿಯ ಅಭಿಷೇಕ
ಮಾಡಿಸಬೇಕಿತ್ತು
ಮಣ್ಣಿನ ಮಗನ
ಬಿಸಿ ರಕ್ತದ ತುಡಿತಕ್ಕೆ
ಬೆಳೆದು–ಬಯಕೆಯ
ಬಸಿರೊಡೆದು
ಮೂಡಿದ ವಂಶವೃಕ್ಷಕ್ಕೆ
ಬದಲಾಗಿ ಹೆಸರ ಕೆತ್ತಿಸಬೇಕಿತ್ತು

ಆದರೀಗಿಲ್ಲಿ
ಬದಲಾವಣೆಯ ಕ್ರಾಂತಿಯ
ಅಡಿಯಲ್ಲಿ
ಜೀತಕ್ಕೆ ಶೋಕಗೀತ
ಬರೆದು ಮಂಗಳ ಹಾಡಿ ಹುಗಿದಿದೆ.

# ಮಹಾಂತೇಶ

## ನನ್ನವರು

ಇವರು ನನ್ನ ವರು
ಕೆದರಿದ ತಲೆಯ
ಸೂಡುಗಟ್ಟಿದ ಕೂದಲುಗಳ
ಕ್ಷಾರ ಕಾಣದ ನಿಸ್ತೇಜ ಮುಖದ
ತುತ್ತು ಕೂಳನೂ ಕಾಣದ
ಹಿಡಿ ಗಂಜಿಗೂ ಗತಿ ಇಲ್ಲದ
ನಿಲ್ಲಲು ನೆರಳಿಲ್ಲದ
ಸದಾ ಚಿಂದಿ ಚಿಂದಿ ಹರಿದ
ಅರಿವೆಗಳಲಿ ಮೆರೆಯುವ
ಆಶೆಗಣ್ಗಳಲಿ ಬೆಳೆವ
ಇವರು........ನನ್ನ ವರು
ಸಾವಿರಾರು ವರ್ಷಗಳ
ಸಂಸ್ಕೃತಿಯ ಕುರುಹು,
ನಿರಂತರವಾಗಿ ಬೆನ್ನು ಡೊಗ್ಗಿಸಿ
ಸಲಾಂ ಹಾಕುವ........
ಕೈಯೊಡ್ಡುವುದನೇ
ವೃತ್ತಿಮಾಡಿಕೊಂಡ
ಇವರು........ನನ್ನ ವರು........
ಬಾಯಿ ಬಿಡಲುಬಾರದು
ಹೊಲಿಗೆ ಹಾಕಿಕೊಳ್ಳಲು ಬಾರದು
ಇದಕ್ಕೆಲ್ಲ ಈ ಗತಿ ಇಲ್ಲದ

ಹೊಟ್ಟೆ ಕೇಳಬೇಕಲ್ಲ
ಮತ್ತೆ ಅದೇ ಅದೇ ಅದೆ........
ಧಮನಿಧಮನಿಗಳಲಿ
ಹರಿವ ಈ ರಕ್ತ, ಶಕ್ತಿ ಸಂಪೂರ್ಣ ನಿಸ್ತೇಜ
ಸಚೇತನವಾಗಲು ಏನು ಮಾಡಬೇಕು ?
ಹೇಗೆ ನಿಲ್ಲಬೇಕು ?
ಪ್ರಳಯವೇ ? ಜಗದುದ್ಧಾರವೇ ?
ಇಲ್ಲಾ ಕ್ರಾಂತಿಯೇ........!
ಏನು........ಎಂತು........ಎನ್ನಲೂ
ತಿಳಿಯದ ಏನು ಮಾಡಲೂ,
ಬಾರದ,
ಸದಾ ಹಲ್ಲು ಗಿಂಜಿ
ಕೈಗಟ್ಟಿ ನಿಲ್ಲುವ
ಇವರೇ ನನ್ನವರು.

# ಬಾಬಾಜಾನ್ ಅತ್ತಾರ

## ಭುಂಗಾ

ಬೆಳಗು ಮುಂಜಾನೆ
ಆರರ ಭುಂಗಾ ವದರಿದಾಗ
ತಮ್ಮಾ ಏಳೋ, ವದರಾಖತೈತಿ
ಭುಂಗಾ ಅಂತ, ನಮ್ಮವ್ವಾ ನನ್ನ ಎಬ್ಬಸತಾಳ
ಏಳತೀನಿ ;
ತೆಂಬಗಿ ತೊಗೊಂಡು ಹೋಗಿ ಬಂದು
ಹಲ್ಲ ತಿಕ್ಕಿ, ಜಳಕಾ ಮಾಡಿ,
ಚಾ ಕುಡಿಯೋದರೊಳಗೆ
ಬುತ್ತಿ ಗಂಟು ರೆಡಿ ಆಗಿರತೈತಿ.
ಅರವಿ ಹಾಕ್ಕೊಂಡು ಕಂಪನಿಗೆ ಹೊಂಟೆರತೀನಿ
ದಾರ್‍ಯಾಗ ಚರ್ಚಿನ ಗಂಟೆ
ಢಂಣ್....ಢಂಣ್....ಢಂಣ್....ಢಂಣ್
ಅಂತಿರತೈತಿ.
ಮಸುತ್ಯಾಗ, ಅಲ್ಲಾ....ಹು ಅಕಬರ
ಅಂತ ಅನ್ನು ಆವಾಜ ಬರತಿರತೈತಿ.
ಮತ್ತ
ಗುಡ್ಯಾಗಿನ ಗಂಟೆ–ಶಂಕದ ಸಪ್ಪಳಾ ಕೇಳಸತಿರತೈತಿ.

ಇವೆಲ್ಲಾ ತಮ್ಮ ತಮ್ಮ ಜಾತಿಯವರನ್ನ
ಕರಿತಿರತಾವು.

ಆದರೆ ;
ನಾವೆಲ್ಲ ಜಾತಿಯವರೂ ಕೂಡಿ
ಕಾರಖಾನೆ ಕಡೆ ಹೊಂಟೆರತೀವಿ.
ಆವಾಗ,
ಈ ಚರ್ಚು, ಮಸೂತಿ
ಮತ್ತ ಗುಡಿ–ಗುಂಡಾರದಾಗಿಂದ ಬರುವ
ಆವಾಜಿನ ಕಡೆ ನಮ್ಮ ಲಕ್ಷಾ ಇರುದಿಲ್ಲಾ
ನಮ್ಮೆಲ್ಲಾರ ಲಕ್ಷಾ ಕಾರಖಾನೆಯ
ಯೋಳರ ಭುಂಗಾದ ಕಡೆ ಇರತೈತಿ.

ಖರೇ ಹೇಳತೀನಿ : ಅದರ ಭುಂಗಾ ವದರಿದಾಗ
ನನ್ನ ಕೂಡ ದುಡಿಯುವ
ಡೇವಿಡ್‌ನ ಅಪ್ಪಾ
ಏಳೋ ಭುಂಗಾ ಆಗಾಖತೈತಿ
ಅಂತ ಅವಂಗ ಎಬ್ಬಿಸತಾನ ಅಂತ.
ಬಸ್ಯಾನ ಮನ್ಯಾಗ, ಅವನ ಹೆಂಡತಿ
ಏಳ್ರಿ, ಕಂಪನಿ ಭುಂಗಾ ವದರಾಖತೈತಿ
ಅಂತ, ಎಬ್ಬಿಸತಾಳ ಅಂತ.
ಹೌದು. ಇವರೆಲ್ಲರೂ
ಈ ಕಂಪನಿ ಭುಂಗಾದ ಆವಾಜು ಕೇಳಿ
ಯಾಕ ಎಬ್ಬಿಸತಾರ ?
ಯಾಕಂದರ ಅವರಿಗೆ ಗೊತ್ತೈತಿ
ಬ್ಯಾರೆ ಆವಾಜು ಬರುವಲ್ಲೆ ಕಳಸಿದರ
ಹೊಟ್ಟೆಗೆ ಕೂಳು ಸಿಗುದಿಲ್ಲಾ ಅನ್ನುದು.

ನಮ್ಮ ದೇಶದಾಗ
ಎಲ್ಲಾರಿಗೂ ನೌಕರಿ ಸಿಗುವೌಂಗ ಆದರ
ಕೆಲಸಾ ಕೊಡಲಾರದ ಬುದ್ಧಿವಾದಾ ಹೇಳುವ
ಆ—ಈ
ಧರ್ಮಗಳ ಆವಾಜು ಬಂದ ಆಗಿ

ಎಲ್ಲಾ ಜಾತಿಯವರ ಲಕ್ಷಾ
ಯೋಳರ ಭುಂಗಾದ ಕಡೆ ಹೊಕ್ಕೈತಿ.
ಆಗ, ಹದಿನೆಂಟ ಜಾತಿ ಹೋಗಿ
ದುಡಿಯುವವರದ ವಂದ ಜಾತಿ ಆಗತೈತಿ.

## ಶೈಲ ಜಗದೀಶ್ ಕೊಪ್ಪ

### ನಾವು ಬರೆಯುತ್ತೇವೆ

ನಾವು ಬರೆಯುತ್ತೇವೆ
ಮುಟ್ಟಾಗಿ ಹೊಸ್ತಿಲಾಚೆ ಕುಳಿತವರು
ಮುಳ್ಳಿನಾಸಿಗೆಯಲಿ ಮಲಗಿದವರು
ದಟ್ಟಾರಣ್ಯದಲ್ಲಿ ದಿಕ್ಕೆಟ್ಟವರು
ಹರಿವ ನೀರಿನಲಿ ತೇಲಿಬಿಟ್ಟವರು
ನಿಮ್ಮೀ ವರ್ಗವ್ಯವಸ್ಥೆಗೆ ಬೆಂಕಿಯಿಟ್ಟು
ಮೈಸುಟ್ಟುಕೊಂಡವರು
ಬಿಸಿ ತುಪ್ಪ ನುಂಗಿದವರು
ನಿಮ್ಮೀ ಕಾಲಿಗೆ ಚಪ್ಪಲಿಯಾಗಿ ಸವೆದವರು
ಹರಕು ಬಾಯಿಗೆ ಆಹಾರವಾದವರು
ನಿಮ್ಮೊಡನಿದ್ದೂ ಇಲ್ಲವಾದವರು
ಬದುಕಿಯೂ ಸತ್ತವರು
ಸ್ವಾಮೀ
ನಾವು ಬರೆಯುತ್ತೇವೆ.
ಲುಚ್ಚಾ ಬದುಕಿಗೆ ಮುಖವಾಡ
ಹೊರಲಾರದೆ ಉಳಿದುದಕ್ಕೆ
ನಿಮ್ಮೆಲ್ಲರ ರಾಗ–ತಾನ, ಪಲ್ಲವಿಗೆ
ಕಥಕ್ಕಳಿಯಾಡದೆ ನಿಂತದ್ದಕ್ಕೆ
ಮಾಯದ ಗಾಯದ ಮುಲಾಮಿಗಾಗಿ
ನಿಮ್ಮ ತೂಗು ಕತ್ತಿಯ ಕೆಳಗೆ

ನಾವು ಬರೆಯುತ್ತೇವೆ
ನಮ್ಮೆದೆಯ ನೆತ್ತರನು ಬಸಿಯುತ್ತೇವೆ.
ಹ–ನಿ–ಹ–ನಿ–ಯಾ–ಗಿ
ಸಾ–ಲು–ಸಾ–ಲಾ–ಗಿ.

# ಕೆ. ಕೇಶವಶರ್ಮ

## ಕೋಲಾಗಬೇಕು

ಗೀತೆ : ಶತಶತಮಾನಗಳಿಂದ
ನೊಂದು ಬೆಂದು
ಇದ್ದು ಇಲ್ಲದೆಯೇ
ಉಳಿದೂ ಸತ್ತವರು ಎದ್ದರವರು

ನುಡಿ : ಕ್ರಾಂತಿ, ಆಕ್ರೋಶ ಸ್ವಂತ ಸೊತ್ತು
ಸ್ಥಾನ ಪಲ್ಲಟಗೊಂಡ ಕಣ್ಣೀರ ಒರಸು
ಕೆಂಡ ಕೆಂಡ ಮಾತು ತೋರಿಸು

ಗೀತೆ : ಸಮಾಜದ ಮೂಲೆ
ಮೂಲೆಯಲ್ಲಿ ತಪ್ಪು
ಅಲ್ಲಲ್ಲಿ ಬೆವರ ಕಪ್ಪು
ಮನ ಬೇಗುದಿ ಒಲೆ

ನುಡಿ : ಕತ್ತಲೆಯ ಮೂಲೆಯಲ್ಲಿ
ಸೂರ್ಯ ಕಿಡಿ ಉರಿಉರಿದು
ಖಾಲಿ ಕುರ್ಚಿಯೆಡೆಗೆ ನೋಟ
ಬೀರುತ್ತಲೇ ಇದ್ದಾರೆ.

ಗೀತೆ : ಚೀರು ಚೀರು
ಹೀರು ಹೀರು
ಏಳು ಏಳು
ಎಂಬುದರ ಬೇರು.

ನುಡಿ : ತಾಳ್ಮೆಯಿಂದ ನಾವಿದ್ದು
ಅದರ ಕಣ್ಣು ಕಿಡಿಯ ತೊಡೆದು
ಆನು ಪ್ರಾಸಕೆ ನಾಂದಿಯಿಡಿದು
ಗೌಜಿಯ ಡೋಲಿಗೆ
ಈಗ ಸದ್ಯ ಕೋಲಾಗಬೇಕು.

## ಹಣಮಂತ ತೆಗ್ಗಳ್ಳಿ

### ಕೂಲಿಯುವರ ಕೂಗು

ನೆಲದಾಳದಲಿ ಕೆಳಗೆ
ಕುದಿಯುತಿದೆ........ಗೊತ್ತೆ ?
ಸಾಗರದ ಹೊಟ್ಟೆಯಲಿ
ಉರಿಯುತಿದೆ........ಗೊತ್ತೆ ?
ಸೂರ್ಯ ಬಿಂಬದ ತುಂಬ
ತುಂಬಿಕೊಂಡಿದೆ........ಗೊತ್ತೆ ?
ಕಾರ್ಮೋಡದಲಿ ಅಡಗಿ
ಗುಡುಗುತಿದೆ........ಗೊತ್ತೆ ?
ಬಿರುಗಾಳಿಯಲಿ ಮಡಗಿ
ನುಗ್ಗುತಿದೆ........ಗೊತ್ತೆ ?
ಚಂಡಮಾರುತ ಚಕ್ರ
ತಿರುಗುತಿದೆ........ಗೊತ್ತೆ ?
ಕೊನೆಗೊಮ್ಮೆ ಪ್ರಳಯಾಗ್ನಿ
ಉಕ್ಕುತಿದೆ........ಗೊತ್ತೆ ?
ಕೂಲಿಯುವರದು ಕೂಗು
ಹೇಗೆ ಬರುತಿದೆ........ಗೊತ್ತೆ ?

# ಶಿವಪ್ರಕಾಶ್

## ನಿನ್ನ ಚಿತೆ ಬೆಳಕಲ್ಲಿ

ಮುಚ್ಚಿಕೊಂಡಿದ್ದ ಬಾಗಿಲನೊದ್ದು, ಒಳನುಗ್ಗುವ ಮಂದಿ
ಗಂಟಲನೊತ್ತಿ ಬಾಯಿ ಹೊಲಿಯುವವರೆಗೆ ಸುಮ್ಮನಿರುವಂತಿಲ್ಲ
ಒದ್ದಾಗ ಮಾತು ಗೊತ್ತಿರದ ನಾಯಿ ಕುನ್ನಿಗಳೂ ಕುಯ್‌ಗುಟ್ಟಿ
ಹಲ್ಲುಗಳ ಮಸೆಯುವುವು ಮಾಂಸ ಹರಿಯುವ ಹಾಗೆ
ಚಾಣಕ್ಯ ವರ್ಣದ ಗೂಬೆ
ಮನೆಯ ಹೆಂಚಿನ ಮೇಲೆ ಮಲೆಯುನೆತ್ತಿಯ ಮೇಲೆ ರೆಕ್ಕೆ ಹಾಕಿದ್ದಕ್ಕೆ ರಾಜ್ಯ ನಡೆಸಿದ್ದಕ್ಕೆ
ಪೋಲೀಸು ದೂತ ಗುಮ್ಮ ಬಂದಿದೆ ನಿಮ್ಮ ಹುಡುಗಿ ಬೀದಿಗೆ, ಇಳಿ
ಇನ್ನು ಹಸಿರೆಲ್ಲಿ ವನವ ತೊರೆದು ಹೋಗುತ್ತದೋ ಎಂದು
ಹಣ್ಣುಗಳ ಸಿಹಿಯೆಲ್ಲಿ, ಹೂವುಗಳ ಮೆತುವೆಲ್ಲಿ ನುಣುಪೆಲ್ಲಿ
ಕಾಲಕೂಟವನೊಸರುತ್ತದೋ ಎಂದು
ನೆರೆದವರ ನಡುವೆ ಅರೆಬಿರಿದ ಕಣ್ಣಿನ ನೀನು ಬಂದೆ,
ನೀನು : ಕಿತ್ತಲೆ ತಂಗಿ ಎಳೆ ನಿಂಬೆಕಾಯಿ ;
ನೀನು ಅರಿವೆಯ ತುಂಬ ಮಲ್ಲಿಗೆ ಬಳ್ಳಿ
ನೀನು ಚಿಗುರಿಡಿದ ಶಿಶುಗಳ ತೂಗುವ ತೋಟ ;
ಆಗ ಕೊಲೆಗಡುಕತನದ ಹಾಡಹಗಲನ್ನು
ಮೂಲೆಗುಂಪಾದ ಮುದುಕಿಯರ ಹುಡುಗಿಯ ಭೀತರೋದನವನ್ನು
ಗೋಲಿಗಳು ಬರೆದವು
ಗೋಡೆಗಳ ಮೇಲೆ, ನಿನ್ನ ಜೀವದ ಮೇಲೆ,
ಹೊಗೆಗೆ ಚದುರಿದ ಕಾಲುತಲೆಗಳ ಮಧ್ಯ
ನಿನ್ನ ಚಿತೆ ಬೆಳಕಲ್ಲಿ
ಪ್ರತಿ ಬಡಿವ ಎದೆ ಮೇಲೆ ಬಂದೂಕು ನೆರಳಿನ ಭಾರ

ಪ್ರತಿಗಿರಿಯ ಮೇಲೆ ಗೂಬೆ ಪಾಳಿಯ
ಕೊಲ್ಲುವರ ಅಳಿಸುವರ ಕದಿಯುವರ ಬೂಟುಗಾಲಿನ ಒದೆತ
ತಾಕಿದ ಸುತ್ತ ಪ್ರಜ್ಞೆಯ ನಾಯಿಕುನ್ನಿಯ ಭಾಷೆ ಬಂದಿದೆ ನನಗೆ :
ನನ್ನ ಬಿಸಿಲಿಂದ ನಿನ್ನ ಉಸಿರನ್ನು, ನೆರಳನ್ನು ಕೊಂಡು ಹೋಗಿದ್ದಕ್ಕೆ
ನನ್ನ ನೀರಿನ ಮೇಲೆ ನಿನ್ನ ತುಟಿಯಚ್ಚನ್ನು ಅಳಿಸಿಹಾಕಿದ್ದಕ್ಕೆ
ನನ್ನ ನೆಲದೆರೆಡು ಜೀವಂತ ತಾರೆಗಳ ಕದ್ದುಕೊಂಡಿದ್ದಕ್ಕೆ
ನಂಜು ತುಂಬಿದ ನನ್ನ ದನಿಯ ಜೊತೆ
ತನ್ನ ಹಂಚಿಕೊಳ್ಳಲ್ಲಿ ಕೊರಕಲಿನ ಗಾಳಿ ಮೊರೆತ ;
ಬೆಂಕಿ ಬಿದ್ದಂತೆ ಎಚ್ಚರವಾದ ಎಳೆಗಂಟಲುಗಳಿಂದ
ಈ ಭೋರ್ಗರೆತ :
ಬಂದೂಕುಗಳ ಭಾಷೆ ನಾವು ಸಹಿಸುವುದಿಲ್ಲ
ಜೀವ ಮೊಗ್ಗುಗಳ ಹೊಸಕುವ ಬೂಟುಗಾಲ ತಾಳುವುದಿಲ್ಲ.

# ಎಂ. ಮುಕುಂದ

## ಅವಶೇಷಗಳು

ಪೀಠಿಕೆ :

ಶೋಷಿತರ ಬದುಕಿಗೊಂದು ನೆಲೆಗಟ್ಟು
ರೂಪಿಸುವ ಸನ್ನಾಹ ;
ಹರದಾರಿ ದೂರ, ಕಾಡುಮೇಡಿನಲ್ಲಿ
ನಾಗರೀಕತೆ ಸಂಪರ್ಕ ಕಡಿಮೆ,
ಮತ್ತೆ ಆದಿವಾಸಿಗಳಾಗಿಸುವ ಮತ್ತೊಂದು ಚತುರೋಪಾಯ

ಪರಿಚಯ :

ಮೊಹೆಂಜೋದಾರೋವಿನ ನೆನಪು ತರುವ ಪಾಳು ಅವಶೇಷಗಳು,
ನಿರ್ಮಾಣಹಂತದಲ್ಲೇ ಪಾಳುಬಿದ್ದ ಮನೆಗಳು ;
ಹರಿಜನೋದ್ಧಾರದ ಘೋಷಣೆಯ ಪ್ರತೀಕಗಳು—
ಕಿಟಕಿ ಬಾಗಿಲುಗಳೊಂದು ಕಾಣದೆ
ಮಾಡಿನೆಂಚುಗಳು ಹಣವಂತರ ಅಟ್ಟವೇರಿ,
ಅಳಿದುಳಿದದ್ದು ಕಳ್ಳಕಾಕರ ಗಂಟಾಗಿ,
ಕಡೆಗುಳಿದದ್ದು ಬರೀ ಶಿಥಿಲ ಗೋಡೆಗಳು ;
ಪ್ರಯೋಗಶಾಲೆಯ ರಕ್ತಮಾಂಸವಿಲ್ಲದ ಅಸ್ಥಿಪಂಜರಗಳಂತೆ

ಹತ್ತಾಳು ಕಡಿದರೂ ಜಲಕಾಣದ ಬಾವಿಯಲಿರುವ
ಕಾಡು ಹಕ್ಕಿಗಳು ಹಣವಂತ ಪ್ಯಾರಾಲೈಸಿಸ್

ರೋಗಿಗಳ ಪುನಶ್ಚೇತನ ಮುದ್ದಾಗಿದ್ದು
ಇದು ಕಟ್ಟುಕತೆ
ಅಲ್ಲ ; ನಮ್ಮೂರ ಹೊಲೆಯರಿಗೆಂದೇ
ಹತ್ತಾರು ವರ್ಷಗಳ ಹಿಂದೆ ನಿರ್ಮಾಣವಾಗಬೇಕಾಗಿದ್ದ
ಜತ್ತಿನಗರದ ದುರಂತ ಕತೆ.

ಪರಿಹಾರ :

ಶತಶತಮಾನಗಳಿಂದ ಶೋಷಣೆಗೊಳಗಾಗಿರುವ
ಇವರು ಎಚ್ಚೆತ್ತಾಗ,
ಇವರ ರಕ್ತ ಕುದಿದಾಗ,
ಇವತ್ತಿನ ವ್ಯವಸ್ಥೆಯ ವಿರುದ್ಧ
ಸಂಘಟಿತರಾಗಿ ಬಂಡೆದ್ದಾಗ.

# ಡಿ. ಎಸ್. ನಾಗಭೂಷಣ

## ನೆಲ ನೀರು ಆಕಾಶವೆಲ್ಲ ಒಂದಾಯಿತು

ಮೊರಾದಾಬಾದ್‌ನ ಈದ್ಗಾದ ಬಿಳಿ ಸುಣ್ಣದ ಗೋಡೆಗೆ
ಕಣ್ಮುಚ್ಚಿ ಒರಗಿದ ಒಂಟಿ ಹಸುಳೆಯ
ದೇಹವನೆತ್ತಿ ಸಾಗಿಸಲು ಬಂದ ಪೋಲೀಸು
ಹಸುಳೆ ಧಿಗ್ಗನೆ ಕೆಂಪುಕಣ್ಣು ಬಿಟ್ಟದ್ದು ಕಂಡು
ಕಿರುಚಿ ಓಡಿದ.

ಕ್ಷಣದಲ್ಲೀ ಪೂರಾ ಬೆಟಾಲಿನ್ನು ಬಂದೂಕಗಳೊಂದಿಗೆ ಬಂದು ನಿಂತಾಗ
ಹಸುಳೆಯ ಇಡಿ ದೇಹ ರಕ್ತವಾಗಿ ಎದ್ದು ಬಂತು.
ಮೂರನೇ ದಿನವೇ ದಿಲ್ಲಿಯಿಂದ ಇಡೀ ಮಿಲಿಟರಿ ಸೇನೆ ಸುತ್ತುವರೆದಾಗ
ಹಸುಳೆ ಅಲಗುವ ಕೆಂಡದ ಹುಡಿಗಳಾಗಿ
ಗಾಳಿಯೊಂದಿಗೆ ಬೆರೆಯಿತು
–ಬೆಳೆಯಿತು.    ನೆಲ ನೀರು ಆಕಾಶವೆಲ್ಲ ಒಂದಾಯಿತು.

## ಬಿ. ಆರ್. ಪಾಂಡುರಂಗ ರೆಡ್ಡಿ

### ದುಡಿಯುವ ಹೆಣ್ಣೆಂಬ

ಕೆಲಸಕ್ಕೆ ಸೇರುವ ಮುನ್ನ
ಹೆಣ್ಣೊಂದು ಬೆಟ್ಟ ಕಡಿದಿಲ್ಲ
ಕೂತು ಉಂಡ ಕೂಳು ದಂಡಕ್ಕೆ
ಕಂಡವರ ಕಾಲು ಕಟ್ಟುವ ಕೆಲಸ
ನಾಯಿಪಾಡು.

ತಂದೆ ತಾಯಿಗಳ ಆಸೆಗೆ ಕಂಕಣ ಕೂಡಿಬರದ
ಬದುಕೆಂಬ ಬವಣೆಗೆ ಬಣ್ಣಬಣ್ಣದ ಕನಸೂ ಮುಗಿಯದ
ಬೇಸರದ ಅಲೆದಾಟ.

ಕೆಲಸಕ್ಕೆ ಸೇರಿದ ನಂತರ
ಹೊಸ ಕಣ್ಣುಗಳ ಹೊಸ ಭಾಷೆಯು ಹೊಸ ಅನುಭವ
ಹೊಸ ಹೊಸತರಲ್ಲಿ ಸಾಕ್ಷಾತ್ ಕರ್ಮಯೋಗಿ.

ಜೀತಕ್ಕೆ ಜೀವ ಬಂದು
ಅಪ್ಪಿ ಮುತ್ತಿಟ್ಟು ವಸ್ತುಗಳ ಉತ್ಪನ್ನ
ಹೊರಗೆಲ್ಲಾ ಬಲು ಚೆನ್ನ.

ಮುಂದೊಂದು ದಿನ
ಒಳಗೊಳಗೇ ಸಲಿಗೆ ಬೆಳೆದರೂ
ಕೂಡಿ ಮಾತಾಡದೆ
ಕೊಟ್ಟ ಉಡುಗೊರೆಯು
ಚಹರೆ ಕೂಡಾ ತೋರಿಸದೆ

ತೆಂದ ದುಡ್ಡಿಗೆ ತಾಯಿ ಹುಟ್ಟಿಕೊಂಡವು ಬಾಯಿ
ಮನೆತನದ ಪ್ರತಿ ಬಾಯಿಗೂ ಇವಳು ಮಾಯಾವಿ
ತೇಪೆ ಹಾಕದ ತೂತು, ತುಳಿದ ಸಂತೆಯ ಜಾಡು
ಕೊಂಡದ್ದು ಮುಗಿದಿಲ್ಲ ಮರುಳು ಕರಗಿಲ್ಲ.

ಮದುವೆಯಾಗುವ ಮಾತು ಆಸ್ತಿ ಅಳತೆಯ ಕಂತೆ
ಜಾತಿ ಜೋಳದ ಕೂಳೆ ವಿಕ್ರಾಂತ ಗೀತೆ
ಒಡಲಲ್ಲಿ ಉರಿದೆದ್ದ ಬೆಂಕಿಯ ಜಾಡ ಕೇಳಿದರೂ
ಬಾಡಿ ಹೋದಾಳೋ ಬಸವಳಿದು ಬಾಲೆ ಎಚ್ಚರಿಕೆ

ಕಂತೆ ಒಗೆಯುವ ಮುನ್ನ ಹುಟ್ಟಿಕೊಂಡವು ಗುಳ್ಳೆ
ಕ್ಷಣದಲ್ಲಿ ಕಟ್ಟಿ ಗೂಡು ಎಲೆ ಪದರ ಮುಳ್ಳು ಚುಚ್ಚಿ
ಗಂಡ ಹೆಂಡತಿ ಇವರೇ ಏನು ?

ಸಾಗರದಲ್ಲಿ ನೌಕೆ ತೇಲಿತೋ ? ಮುಳುಗಿತೋ ?
ಕಾಳಜಿಯು ಬೇಕು ಯಾರಿಗಾದರೂ,—ಏಕೆ ?
ಕಬ್ಬು ಹೀರಿದ ಕಥೆಗೆ ಕಲ್ಲು ಜೇನಿನ ಕಥೆಗೆ
ಹೂವುಗಳು ಕಿಲಕಿಲನೆ ನಲುಗುವಾ ಕಥೆಗೆ.

ನೋಡಲ್ಲಿ ಜೇಡ ಸುತ್ತುವುದು ಬಲೆಯಲ್ಲಿ
ನೆನೆಯದ್ದು ನೆನೆದದ್ದು ಬೇವು ಬೆಲ್ಲದ ಹಾಗೆ
ನೂರೆಂಟು ದಾರಿಗಳು ಇವಳ ಮನದೊಳಗೆ
ನೂರೆಂಟು ಬಣ್ಣಗಳು ಮುಖದ ಹೊರಗೆ.

೩೯೫/ಬಿ. ಆರ್. ಪಾಂಡುರಂಗ ರೆಡ್ಡಿ

# ಋಣದ ಮಕ್ಕಳು

ಚಾಪೆ–ದೀಪ–ತಂಗಳು
ಮೂರಾಬಟ್ಟೆಗೆ
ನಮ್ಮನ್ನು ಸಿಕ್ಕಿಸಿ
ಹಗೆ ಬಂದದ್ದು ಒಂದು ಮಾತಿಗೋ
ಒಂದು ಆಜ್ಞೆಗೋ–ಇಂದು ದೀನರು ನಾವು ;
ದುಡ್ಡಿದ್ದವರು ನಮ್ಮನ್ನು ಕೊಂಡಿದ್ದಾರೆ.

ನಮ್ಮ ವಿಲಾಸ—
ಮೋಟು ಬೀಡಿಗೆ,
ಮುರುಕು ಮುದ್ದೆಗೆ ;
ಸೋತು ಕಾಮನ ಲೀಲೆಗೆ.

ಸರ್ಕಾರ ಕೊಟ್ಟ
ಬೆಣಚುಕಲ್ಲ ನೆಲದಲ್ಲಿ
ಬೆಳೆದಿದ್ದೇವೆ ಮುಸುಕಿನ ಜೋಳ
ನಮ್ಮ ಅಂಬಲಿಗೆ.

ನಾವು–ಸಂದ ಋಣದ ಎತ್ತುಗಳು
ಸಮನಲ್ಲ ನಮಗೆ ನಮ್ಮ ಮಕ್ಕಳು ;
ನಮ್ಮ ಸ್ವಂತ ಪಣಗಳು
ಸಾಲಕ್ಕೆ ತೀರಿಸುತ್ತೇವೆ.
ನಮ್ಮ ಪೀಳಿಗೆಯೇ ಹೀಗೆ
ಅವರ ಪೀಳಿಗೆ ಹೇಗೋ ?

ಕಟ್ಟಿಕೊಂಡು ಬರಲಿಲ್ಲ
ತುಳಿದವರ ಉರಿಸಲೂ ಸಲ್ಲದ
ನಮ್ಮ ನಾತಕ್ಕೆ ಹೇಸಿಗೆ ಪಟ್ಟು
ದಮನ ಮಾಡಿದರು ;

ಸಾವಿನಲ್ಲೂ ನಾವು ಶಕ್ತರಲ್ಲ.

# ಎಲ್ಲಾ ಅವನ ಲೀಲೆ

ತಿಪ್ಪಮ್ಮನ ಮಾನ ಹೋಗುತ್ತಿರುವಾಗ
ಅವಳಪ್ಪ ಧಣಿಯ ಜಮೀನು ಉಳುತ್ತಾನೆ

ಜೀವ ಬರದ ನೆರಳ ದಿಟ್ಟಿಸುತ್ತಾ
ನೀರಿಗಾಗಿ ಬೆವರಿ ನೀರಾಗುತ್ತಾನೆ.
ಕನಿಷ್ಠ ಹಳಸಲು ಮುದ್ದೆಯಾದರೂ ಸಿಕ್ಕೀತೇನೋ
ತೀರದ ತಳಮಳ ಹೊಟ್ಟೆಯಲ್ಲಿ.

ತನ್ನ ರಟ್ಟೆ ಕುಸಿದಂತೆ ದುಡಿದೂ ದುಡಿದೂ
ಧಣಿಯ ಆಸ್ತಿ ಅಂತಸ್ತು ಡೊಳ್ಳು ಹೊಟ್ಟೆ
ದೊಡ್ಡದಾದದ್ದು ಸುಳ್ಳೇ ?

"ಎಲ್ಲಾ ಅವನ ಲೀಲೆ" ಎಂದುಕೊಂಡರೂ,
ಹೊಟ್ಟೆ ಒಳಕ್ಕೆ ಇಳಿದು ಬೆನ್ನಿಗಂಟಿರುವಾಗ
ರಟ್ಟೆಗಳಿಗೆ ಯಾರು ಕೊಡುತ್ತಾರೆ ಬಲ ?

ಸ್ಥಾನವಿದ್ದವರಿಗೆ ಮಾತ್ರ
ಮುಕ್ತಿ ತೋರಿಸುವ ಮಹಾದ್ವಾರ,
ಹೊಳ್ಳೆಗಳ ನಿಡಿದುಸಿರು.
ಚಿಂತೆಯಷ್ಟೇ ಹಿರಿದಾದ ಹೊರೆ
ಭಾರ ಹೊತ್ತ ತೊಡೆಗಳಲ್ಲಿ ನಡುಕ.

ಚಳಿಯಲ್ಲ ; ಆಳಗವಿ ಕಣ್ಣುಗಳು
ಕೆಂಪು ಕೆಂಡಗಳಲ್ಲ, ರೆಪ್ಪೆಯಿಕ್ಕಿ
ಸುಖದ ಬದುಕನ್ನೆಲ್ಲ ಒತ್ತೆಯಿಕ್ಕಿ
ತಿಪ್ಪಮ್ಮನ ಹೋದ ಮಾನಕ್ಕೆ ಗೋರಿಕಟ್ಟಿ
ಉಗುರಲ್ಲಿ ಗುಡ್ಡೆಗುಡ್ಡೆ ಕೊಳೆ ತೆಗೆಯುತ್ತಾನೆ.

ಮುಂದಿನ ಸಾಲುಗಳ ಭಕ್ತಾಗ್ರಣಿಗಳ ಚಪ್ಪಾಳೆಗೆ
ಪೆಚ್ಚು ನಗೆ ನಗುತ್ತಾನೆ.

೩೯೭/ಬಿ. ಆರ್. ಪಾಂಡುರಂಗ ರೆಡ್ಡಿ

ರಕ್ತ ಹೀರುವ ತಿಗಣೆಗಳ ಸೊಳ್ಳೆಗಳ
ಹುಡುಕಿ ಹೊಡೆದ ತಪ್ಪಿಗೆ ಕೈಗಳೇ ಸುಸ್ತು.

ಬಂಧನಕ್ಕೆ ಹಕ್ಕಿ ಹಾರುವುದನ್ನ
ಕಾಲು ಕೆರೆಯುವ ಕಡಿವಾಣಗಳ ಎಳೆದಾಟವನ್ನೆ
ನೋಡುತ್ತಾ ಸಾಕ್ಷಿ ಕೇಳುತ್ತಾನೆ.
ಮನಸಾರೆ ಅತ್ತು ಕರೆದರೂ ಆತ್ಮ ಸಿಕ್ಕಲಿಲ್ಲ
ತಿಪ್ಪಮ್ಮನ ಧಣಿಯ ಹೊಲದಲ್ಲಿ
ಒಳಕ್ಕಿಳಿದ ಹೊಟ್ಟೆಯ ತೊಗಲಿಗೆ
ನೇಗಿಲತಾಗಿಸಿ ಉಳುತ್ತಾ
ಕಂಗಾಲಾಗಿ ನೋಡುತ್ತಾನೆ
ದೂರ ದೂರ
ಬರುತ್ತಾರೋ—ಯಾರಾದರೂ
ಮುದ್ದೆ ತರುತ್ತಾರೋ—

ಕಾಯುತ್ತಲೇ ಇದ್ದಾನೆ,
ಕರಗುತ್ತಲೇ ಇದ್ದಾನೆ ;
ಅಂತೂ ಇದ್ದಾನೆ.

# ಮಹೇಂದ್ರ ಪ್ರಸಾದ್

## ದಣಿಗೀತೆ

ಒಂದು ಬೆಳಗಾದ ಎಳೆ ಬಿಸಿಲಿನಂಗಳದಲ್ಲಿ
ಚಾದಂಗಡಿಯ ಸುತ್ತಮುತ್ತಿದ ಕಪ್ಪು ಮುಖಗಳು
ಬತ್ತಿದ ಮುಖವೆಲ್ಲಾ ಚಾ ಹೀರುವ ಸದ್ದು
ಕಂಡ ತ್ರಾಣವಿಲ್ಲದ ದನಿಗಳು
ದನಿಗಳ ಬದಿಗೆ ಕಾರಕಾನೆಯ ಅವರಸದ ಕರೆ,
ಹಗಲೆನ್ನದೆ ದುಡಿವ ಕಾಯಕ ಯಂತ್ರ
ಹೊಟ್ಟೆಯ ದಣಿ–ಕುದುರೆ ಏರುವ
ಖರಪುಟ ಕೆರೆತ–ಎದ್ದ ಕೆಂದೂಳಿನಲ್ಲಿ
ಹಾರಿದ ಕುದುರೆ,
ಕವುಚಿದ ಕಪ್ಪು ಮೋಡಗಳ ಕಂಡು
ಬೆದರಿ ಓಟಕಿತ್ತು, ದಣಿದು
ಕೆಡವಿತು ಬೆಟ್ಟದಡಿಗೆ
ಸವಾರನ ಒಡೆದ ಎದೆಗೆ–ತನ್ನ ಭೂಮಿಯ
ಹೊಂಚುವ ಕಳ್ಳಕಾಕರ ಚಿಂತೆ !
ಜೀವ ಹಾರುವ ಗಳಿಗೆ
ಕಟ್ಟ ಕಡೆಯ ಮಾತು ಕೇಳಲೂ ಇಲ್ಲದ ಮಂದಿ
ಕೆಡವಿ ಹೊಂಟ ಕುದುರೆ ನೀರಿನತ್ತ ನೆಗೆಯಿತು
ಕೆನೆಯಿತು–ಗುಲಾಮತನ
ಕಿತ್ತು
ವಿಶಾಲ ಪೊದರು, ಗಿಡ ಮರ ನೀರು
ಹಸಿರು ಹತ್ತಿರಾದ ಆಸೆಗೆ
ಬೆಳಗಿದ ನೆನಕೆ ಬಳ್ಳಿಯಾಸರೆ.

# ಕ್ರಾಂತಿಮಾತು

ಪುಟ ಪುಟ ಬರೆದು
ಅಳಿಸಿ
ಏನನೂ ಉಳಿಸದ ನಿರ್ಲಿಪ್ತ ಮಾತುಗಳಲ್ಲಿ
ಯಾರೂ–ಒಲವು–ಬದುಕು ಮರೆವುದು ಕಷ್ಟ
ಈ ಜೀವ ಬಸಿದ ಕಾರ್ಪಣ್ಯವನುಂಡು
ಅಲ್ಲಲ್ಲೇ–ಹಾದಿಗಳಲ್ಲಿ
ಹಕ್ಕಿಗಳಾಗುವ ಹಿಂಡು
ಬದುಕ ಹಿಡಿಯುವ ಗೂಢ
ನೆಟ್ಟ ನೋಟಕೆ ದೂರಸಾಗಿ
ಜೀವ ಜೀವಗಳಲ್ಲಿ ಒಂದಾಗಿ
ನೆತ್ತರು ಹೊಸ ಶಕ್ತಿ ಪಡೆವ ಹುಟ್ಟು
ದನಿ ಹೊರಟು ಚೀರಿ
ಗಾಳಿಯಲೆಗಳಲಿ ತೂರಿ
ಗಿಡ–ಮರ ರೌರವಗಳಲಿ ಬೆರೆತ ಸತ್ಯ
ದಿಟವಾಗುವ ಕ್ರಾಂತಿ ಮಾತು
ನೊಂದ ಮನಗಳ ತುತ್ತು
ದೇಶ–ಕಾಲದಲ್ಲಡಗಿದ ಸ್ವತ್ತು.

# ಗಂಗಾಧರ ಮೂರ್ತಿ

## ದೇವತೆ

ಅಲಲಾ ಬಂತು ; ಆಹಾ ಬಂತು
ಹುಲಿಯ ನಡೆ ಬಂತು
ಮುನಿಯ ಜಡೆ ಬಂತು, ಕೀ—ಹಾ—
ಬಂತು ಹುಲಿವೇಷ ದಾರಿಯಗಲಕ್ಕೂ
ಮರಳು ಮಣ್ಣಗಿಳಿಯದಂಥ ಗಿಜಿಗಿಜಿಯ ಮೋಡಿ.
ಊರಿಗೂರೇ ಬಂತು ಮುದುಕ ಮೋಟರ ಕೂಡ
ಹಗ್ಗ ಹಿಡಿದವರದೆ ಜಗ್ಗು ನಲಿವೋ ನಲಿವು ಪರಿಷೆ ನೋಡಿ
“ಖಂಡವಿದೆಕೋ ಮಾಂಸವಿದೆಕೋ
ಗುಂಡಿಗೆಯ ಬಿಸಿರಕ್ತವಿದೆಕೋ”
—ತಳಿಗೆ ನಿಂತವರ
ಮೈ ಮುಡಿಯ ತಾಗಿ
ಅವರ ತೋಳನು ತೂಗಿ
ಅದ ತಿನ್ನುವ ಇದ ತಿನ್ನುವ ತಹತಹ, ಕೋರೆಮೊಳೆತ
ಕುಣಿಸುತ್ತ ಬಂತು ಮಣಿಸುತ್ತ ಬಂತು
ಮೇವು ಬೆಳೆದವರನ್ನು ಪಟ್ಟಿ ಹುಲಿ ಎಣಿಸುತ್ತ ಬಂತು.
ಅತ್ತ ವಾಲುತ್ತ ಇತ್ತ ವಾಲುತ್ತ
ಚಾಚಿ ನಾಲಗೆ ಬಾಚಿ, ಮೂಡಿ ನೂರು ಮುಖ
ತೇಗಿ ತೊಡೆ ಕೊಬ್ಬಿನ ಪಲಾವ ಮಿಕ
ಮೈತುಂಬ ಪಟ್ಟಿ, ವೃಕೋದರ ಹೊಟ್ಟೆ ಅಹಾ !
ನೆರಳು ಬೀಳದ ಹುಲಿ ಮೊಹರಮ್ಮ ಹುಲಿ ನುಗ್ಗಿ ಬಂತು.
ಅಂಥ ಮುಖ್ಯ ವ್ಯತ್ಯಾಸ ಕಾಣುವುದೇ ಇಲ್ಲ.

ಗಂಗಾಧರ ಮೂರ್ತಿ/೪೦೦೮

ಆದರೂ ಸದಾ ಮಡಗಿಂದಗಿರುವ ನಮ್ಮ ಬಡಕಲು ಕತ್ತೆಗೆ
ಅಪರೂಪಕ್ಕಾದರೂ ಕೋಪ ನೆತ್ತಿಯಲ್ಲುಕ್ಕಿದಾಗ
ದಮ್ಮು ಕಟ್ಟಿ ತನ್ನ ಗಟ್ಟಿ ಕಾಲುಗಳನ್ನು
ಜೋಡಿಸಿ ಝಾಡಿಸಿ ಒದೆಯುತ್ತದೆ.
ರಣವಾದ್ಯದಂತೆ ದನಿ ಮಾಡಿ ಓಡಾಡಿ ತುಳಿಯುತ್ತದೆ.
ತನ್ನ ಸುತ್ತೇಳು ಬಳಗಕ್ಕೆ ಸುದ್ದಿ ಕೊಡುತ್ತದೆ.
ಬಳಗವೇ ನಿಂತಾಗ—
ತುಂಬಿದ ಸಂತೆಯು ನಡುವೆ ಯಾವ ತುಂಡಂಗಿ ಪಡೆ ನಿಮ್ಮದು ?
ನಿಮ್ಮ ಆಡಿಗೆ, ಅಡಿಗೆ ಕಾವ್ಯ, ಉಪ್ಪಿನಕಾಯಿ ಪುರಾಣ,
ತಲೆದಿಂಬು, ತೋಪಿ, ಮುಸಿಕುಡಿಕೆ, ಕಾರು, ಕತ್ತರಿ,
ಫೋನು, ಪತ್ರಿಕೆ, ರೇಡಿಯೋ ಹುಡುಕುತ್ತೀರೋ ?
ಒಣ ಜೋಡಿ ಕಾಲುಗಳ ಬಿಸಿಲಾತ ತಿನ್ನುತ್ತಾ
ಸಣ್ಣಕ್ಕಿ ಚಪಾತಿ ಸ್ನೋ ಪೌಡರಿನ ನಿತ್ಯ ಸೇವೆಯಲ್ಲಿ ಸುಖಿಸಿದ
ನಿಮ್ಮ ಮೃದು ಚಕ್ಕಳ ಮಾಂಸಖಂಡಕ್ಕೊದಗಿದ
ದುರವಸ್ಥೆಗಾಗಿ ಕಿರಿಚಾಡುತ್ತೀರೊ ನೋಡೋಣ.
ಅಲ್ಲಿಯತಂಕ
ಈ ನಿರಾತಂಕ ನೀರಿಳಿಯದ ಗಂಟಲ ಸ್ಥಿತಿಯಲ್ಲಿ
ನಿಮ್ಮದು ಪ್ರಸನ್ನ ವದನದ ಸಿಹಿಜೋಕು.
ಕಾಣದ ಕಾಡಿನ ಕತ್ತಲ ಕಾಲು ದಾರಿಯಲ್ಲಿ
ಇತ್ತ ಕತ್ತೆಯ ಯಾಂತ್ರಿಕ ಬದುಕು.

# ರಂಗಾರೆಡ್ಡಿ ಕೋಡಿರಾಂಪುರ

## ಶಾಪ

ದುಂಡು ಮಲ್ಲಿಗೆ ಮಾಲೆಯಂಥ
ನಿನ್ನ ನಗೆಯ ಹೊನಲು
ಕಟ್ಟೆ ಒಡೆದ ಮರುಭೂಮಿ ನೀರಿನಂತೆ
ದಣಿಗೆ ದಾಹ ಬರಲು

ಕೋಟಿ ತಾರೆಗಳ ಮೀಟನಿಂತ
ಹುಣ್ಣಿಮೆಯ ಕಣ್ಣನೋಟ
ರೆಪ್ಪೆಯಲುಗಿಗೆ ಕಪ್ಪೆಕುಣಿತದಲಿ
ಕಾದುಕುಂತ ಹುಲಿಯ ಬೇಟ
ತೊಂಡೆ ಹಣ್ಣಿನ ಹೋಳಿನಂಥ
ನಿನ್ನ ತುಟಿಯ ಬಣ್ಣ
ನೆತ್ತರಾಯ್ತು ಬಿದ್ದಾಗ ದಣಿಯ
ಕಾರೆಮುಳ್ಳಿನ ಕಣ್ಣ
ಹದವಾದ ಹಲಸಿನ ಸಿಹಿಯ್ನಾದ ಜೇನಿನ
ಗಿಳಿಯಂಥ ನಿನ್ನ ಮಾತು
ಮದಿಸಿದ ಗುಂಗಿಗೆ ಇಂಗಿಹೋಯ್ತು
ಕೊರಳಿನಲ್ಲೇ ಹೂತು

ಸಖೀ ಮೈಮನ ಕುಗ್ಗಿದೆ ದಿನದಿನ ಸರಿಯುತಿದೆ
ಇನ್ನಿಲ್ಲದ ನಗೆನೋಟ ಮಾತಿಗಾಗಿ
ತೀರದ ದಾಹದ ಆರದ ಜ್ವಾಲೆಯ
ಕೆಂಗಣ್ಣು ಕಾಯ್ದಿದೆ ಆ ಪಾಪಿ ದಣಿಗಾಗಿ.

# ಸು. ರುದ್ರಮೂರ್ತಿ ಶಾಸ್ತ್ರಿ

## ಬೇಲಿ

ನನ್ನ ಸುತ್ತಲೂ ಒಂದು ಬೇಲಿಯಿದೆ
ಹೊರ ನೋಟಕ್ಕೆ ಬಹಳ ಸುಂದರ
ಕತ್ತರಿಯಾಡಿಸಿ ಮಟ್ಟ ಮಾಡಿದ ಮೈ
ಸುವಾಸನೆ ಸೂಸುವ ಹೂ ಹಂದರ.

ಆಗಾಗ ಬೇಲಿಯಾಚೆಯ ಜನ ಬಂದು
ಬಂಗಾರದಂಥ ಮಾತಾಡಿ ಮೂಗ ಚಾಚುತ್ತಾರೆ
ಹೂ ಕಂಪಿನೊಳಗಿನ ನನ್ನ ಅಪಾದ ಮಸ್ತಕ ಅಳತೆ ಮಾಡಿ
ತಮಗಿಲ್ಲದ ನನ್ನ ಸುಖ ಕಂಡು ನಾಚುತ್ತಾರೆ.

ಲೆಕ್ಕ ಮಾಡುತ್ತಾರೆ ಬೇಲಿ ಸುತ್ತಳತೆ ಎಷ್ಟಿರಬಹುದು
ಎಷ್ಟು ಬಗೆ ಬಣ್ಣ ಹೂಗಳಲ್ಲಿ ?
ಆದರಿಂದ ನನ್ನ ಬೆಚ್ಚಗೆ ಬದುಕ ಕಲ್ಪನೆ ಮಾಡಿ
ಬರೆಯುತ್ತಾರೆ ಗಾಳಿ ಪುಟಗಳಲ್ಲಿ.

ನನ್ನ ಸುತ್ತಲೂ, ಹೌದು ಒಂದು ಬೇಲಿಯಿದೆ ;
ನನ್ನ ನೋಟಕ್ಕೆ ಬಹಳ ವಿಕಾರ
ಮಟ್ಟ ಮೈಯೊಳಗೆ ನೂರು ಜಳ್ಳಿ ಹೆಣಿಕೆಗಳ
ಇದು ಬರೀ ಸಮಸ್ಯೆಗಳ ಹಂದರ.

ಯಾರ ಮಾತೂ ಕೇಳಿಸುವುದಿಲ್ಲ ನನಗೆ
ಅಷ್ಟೊಂದು ಗಲಭೆಗೊಂದಲ ಒಳಗೆ

ದೊಡ್ಡ ಬಾಗಿಲಿಗೆ ಗುಡ್ಡದಂಥಾ ಬೀಗ
ಕ್ಷಣಕಾಲ ತೆರಳುವಂತಿಲ್ಲ ಹೊರಗೆ.

ಬಿರುಕು ಬಿಡುತ್ತಿರುವ ನನ್ನ ನೆಲ
ಎಂದಾದರೂ ಒಮ್ಮೆ ನುಂಗಬಹುದು
ಬೆಳೆಯುತ್ತಿರುವ ಬೇಲಿ ಬಳ್ಳಿಯ ನೇಣಿನಲಿ
ನನ್ನೆದೆಯ ಜೀವರಸ ಹಿಂಗಬಹುದು.

ಎಂಬ ಭಯ ದಿನದಿನವು ; ಬೇಲಿಯಲಿ
ಇರುವೆ ನುಸುಳಲು ಕೂಡ ಜಾಗವಿಲ್ಲ
ರಾತ್ರಿ ನಿದ್ದೆಯ ನಡುವೆ ಬೇಲಿ ಕವಿವುದು ಮೇಲೆ
ಉಸಿರು ಮುಡುಕುವ ವೇಳೆ ಕಪ್ಪು ಕನಸು.

ಕನಸಿನಲ್ಲೇ ಸತ್ತು ಮುಳ್ಳು ಬೇಲಿಯ ನುಗ್ಗಿ
ಮೈ ತರಚಿಕೊಂಡರೂ ಚಿಂತೆಯಿಲ್ಲ ;
ಗೆದ್ದ ಸಂತಸದಲ್ಲಿ ನಕ್ಕು ಎಚ್ಚರಗೊಂಡೆ
ಮತ್ತೊಂದು ಬೇಲಿಯಲಿ ನಾನು ಬಂಧಿ.

೪೦೩/ಸು. ರುದ್ರಮೂರ್ತಿ ಶಾಸ್ತ್ರಿ

# ವಿ. ಎಸ್. ಕಾಶೆಟ್ಟಿ

## ದಿಗ್ಬಂಧನ

ಚಿನ್ನದರಮನೆ ಬಾಗಿಲಲಿ
ಬಯಕೆ ಬಳ್ಳಿಯ ತೋರಣ
ಸುಪ್ರಭಾತದ ಹೊಸ್ತಿಲಲಿ
ತಾಜಮಹಲಿನ ರಂಗವಲ್ಲಿಯ
ಕನಸಿಗೂ ದಿಗ್ಬಂಧನ.

ಹಾಳು ಹಂಪೆಯ ಕಲ್ಲಾಗು ತೆಪ್ಪಗೆ
ಜೀವ ಬಾಯಿಗೆ ಬಂದರೂ
ಸುರಿಸುರಿದು ರಕ್ತ ಮಡುಗಟ್ಟಲಿ
ಹಾಕು ಬಾಯಿಗೆ ಬೀಗ
ತುರ್ತು ಆಣತಿ ಈಗ

ಬಂದಿಹರು ಹುಷಾರ್ ! ಪ್ರಜಾ
ಪತಿತೆಯರು ಖಾದಿ ಸೀರೆಯನುಟ್ಟು
ಕುರಿ ಕುನ್ನಿಗಳು ಹರೋಹರಃ !
ಎಂದರೂ ಬಿಡಬೇಡ ಬಾಯಿ
ಒತ್ತು ಈ ಎ–ಹೆ. ಗುರ್ತು

# ಅಶೋಕ ಶೆಟ್ಟರ

## ನನ್ನ ನೆಲದ ಸಾವುಗಳು

ನನ್ನ ನೆಲದಲ್ಲಿ
ಅಂದರೆ ಇಂಡಿಯಾದಲ್ಲಿ ಸಾಯುತ್ತಾರೆ.
ಎಲ್ಲೆಲ್ಲೂ ಸಾಯುತ್ತಾರೆಂದಿರ ?
ಹೌದು.
ಆದರೆ ಸುತ್ತ ಸರಿ ಸರಿದೋಡುವ
ಅನ್ನದ ತಟ್ಟೆಗಳ ಅಟ್ಟಹಾಸದ ಮಧ್ಯೆ
ಸಾಯುವ ಈ ದುರಂತದ ಸಾವುಗಳೇ ಬೇರೆ—

ಈ ಸಾವುಗಳು ಪತ್ರಿಕೆಯ ಕಾಲಂನಲ್ಲಿ
ಅಚ್ಚುಮೊಳೆಗಳಾಗುವುದಿಲ್ಲ.
ಸ್ಮಶಾನದಲ್ಲಿ ಬಣ್ಣದ ಗೋರಿಗಳಾಗುವದಿಲ್ಲ,
ನರಿನಾಯಿ ಹದ್ದುಗಳಿಗೆ ಭೋಜನವಾಗುವುದಿಲ್ಲ
ಏಕೆಂದರೆ ಈ ಹೆಣಗಳೊಳಗೆ
ಹಸಿ ಮಾಂಸವಿಲ್ಲ, ಬಿಸಿ ರಕ್ತವಿಲ್ಲ, ರುಚಿ ಚರ್ಮವಿಲ್ಲ.

ಸದ್ದಿಲ್ಲದೇ ಸುದ್ದಿಯಾಗದೇ
ನೆಗೆದು ಬೀಳುವ ಸಾವುಗಳಿವು
ಕಣ್ಣೀರು ಕುಡಿಕುಡಿದು
ಹುಡಿಗೂಡಿ ಹೋಗುವ ಈ ಸಾವುಗಳಿಗೆ
ಕಣ್ಣೀರು ಎಲ್ಲಿಯೂ ಹರಿಯುವುದಿಲ್ಲ
ಚರಮಗೀತೆ ತೇಲುವದಿಲ್ಲ
ದಹಿಸಲು ಕಟ್ಟಿಗೆಯೂ ಕೂಡಲಿಕ್ಕಿಲ್ಲ.

ಈ ಸಾವುಗಳು
ಊರು ಕೇರಿ ಬಿಟ್ಟು ದೂರ ಹೋಗಿ ಚೀತ್ಕರಿಸಿ
ಸೌಧಗಳ ನಿದ್ರೆ ಕೆಡಿಸುವುದಿಲ್ಲ.
ರಾಜಧಾನಿಯ ರಾಜರ ಕಿವಿ ಮುಟ್ಟುವದಿಲ್ಲ.
ಮುಟ್ಟಿದರೂ ಹೃದಯ ತಟ್ಟುವದಿಲ್ಲ.
ಏಕೆಂದರೆ ಅಲ್ಲಿ ಹೃದಯವೇ ಇಲ್ಲ.

ತಲೆ ಒಡೆಯದೇ ಗುಂಡಿಕ್ಕದೇ, ರಕ್ತ ಹರಿಸದೆ
ಸತ್ತು ಹೋಗುವ ವಿಚಿತ್ರ ಸಾವು
ಎಲ್ಲದರ ಸಮ್ಮಿಶ್ರಿತ ಅದ್ಭುತ ಪೂರೈಕೆ
ಈ–
ಇಂಡಿಯದ ಹಸಿವಿನ ಸಾವು.

# ಜಯಪ್ರಕಾಶ ಮಾವಿನಕುಳಿ

## ಬೂಟುಪಾಲೀಷ್ ಹುಡುಗನಿಗೆ

ಗೆಳೆಯಾ —
ಹಸುಳೆಯೇ ಹಾಲುಹಲ್ಲು ಉದುರದೆ
ಮೊಲೆ ಹಾಲು ಚೀಪುವ ಈ ಗಳಿಗೆಯಲ್ಲಿ,
ಪಾಲೀಷ್‌ಗೆ ಇಳಿದೆಯಲ್ಲ.
ನಿನ್ನ ಬಳಗವನೆಲ್ಲ ಪಾಲೀಸು ಮಾಡುತ್ತಾ
ಅದನ್ನೇ ಮಾಡುತ್ತಾ ಬಂದಿರುವ,
ಈ ಭಂಡ ಜನರ ಬೂಟು ಪಾಲೀಷು ಮಾಡುವ
ಗೆಳೆಯ ಎದ್ದೇಳು.
ಅದೇ ಮರದಡಿಯಲ್ಲಿ
ಅದೇ ಜಾಯಿಕಾಯಿ ಪೆಟ್ಟಿಗೆಯಲ್ಲಿ
ಅದೇ ಗಮಗಮಿಸುವ ಚರಂಡಿಯ ಬದಿಯಲ್ಲಿ
ಹೆರುತ್ತ, ಹೊರುತ್ತ, ಸಾಯುತ್ತಿರುವ,
ಗೆಳೆಯನೇ—ಬಾ ನಾನು ಕರೆದೊಯ್ಯುತ್ತೇನೆ.
ನಮ್ಮ ಪಾದನೆಲ ತಾಗುವುದೆಂದು,
ನನ್ನ ಹೊಳಪು ಕಡಿಮೆಯಾಗುವುದೆಂದು,
ತಲೆ ತಗ್ಗಿಸಿ ತಿಕ್ಕುತಿಕ್ಕುತ್ತಲೇ ಇರುವ
ನಿನ್ನೆಲ್ಲವನ್ನು ಪಾಲೀಷು ಮಾಡುತ್ತ,
ರಕ್ತ ಹೀರುತ್ತ ಬಂದಿರುವ ನಿನ್ನೆಲ್ಲ
ಗೆಳೆಯರನ್ನು ಒಮ್ಮೆ ಮುಖ ಎತ್ತಿ ನೋಡು.

# ಸಿದ್ಧಲಿಂಗ ದೇಸಾಯಿ

## ಕಣ್ಣೀ ಉಚ್ಚು ಅಗಳೀತಗಿ

ಎಷ್ಟು ನಿನ್ನ ಹಿರೇತನ ?
ನಿನ್ನ ರೊಟ್ಟಿ ಬ್ಯಾಡ, ಬೆಣ್ಣಿ ಬ್ಯಾಡ
ಕೈಗೆ ಕಟ್ಟದ ಕಣ್ಣೀ ಉಚ್ಚು
ಬಾಯಿಗಿ ಜಡದ ಅಗಳೀತಗಿ
ಒಂದಿಷ್ಟು ಮಾತಾಡತೇನಿ, ಉಸರಾಡಸ್ತೇನಿ.

ಮನಿಯಾಗೆಲ್ಲ ನಿಂದ ಕಾರ ಭಾರ
ನೀ ಮಾಡಿದ್ದ ದರಬಾರ
ನೀನ ಮಾಡಿವಂತ್ಯಾ ಹಿರೇತನಾ
ವಯಸ್ಸಿಗೆ ಬಂದ ಮಗನ್ನ
ಹಿಂಗ ಎಷ್ಟು ದಿನಾ ಚುಪ್ಪಂತ
ಗಪ್ಪನ ಕುಂಡರಸ್ತಿ ?

ಇನ್ನಷ್ಟು ದಿನಾ ಹಿಂಗ ಮುಂದೂಡಿದ್ರ
ಕಣ್ಣೀ ಬಿಟ್ಟು ಸರಪಣಿ ಕಟ್ಟಿದ್ರೂ
ಕಿತ್ತು ಒಗಿತೇನಿ
ಅಗಳಿ ಬಿಟ್ಟು ಬಾಯಾಗ ಕಾಸಿದ
ಕಬ್ಬಿಣ ಸುರವಿದ್ರೂ
ನಾಲಗಿ ಆಡಸ್ತೇನಿ.

# ಬಸವರಾಜ ಸಬರದ

## ಹೊಸ ಸೂರ್ಯ

ದಿನಗಳೆಷ್ಟೊ ಉರುಳಿವೆ
ರಾತ್ರಿಗಳೆಷ್ಟೋ ಹಗಲುಗಳನ್ನು
ಹಡೆದಿವೆ.
ಆದರೆ ಎಲ್ಲವೂ ನಿರರ್ಥಕ
ಕಾಣುವದೆಲ್ಲಾ ಕತ್ತಲೆ–ಇಲ್ಲಿಯ ತನಕ
ಈಗ ಎಲ್ಲೆಲ್ಲೂ
ಹೋರಾಟದ ಉಸಿರು
ಹೊರ ಹೊಮ್ಮಿದೆ.
ತಲೆತಲಾಂತರದಿಂದ
ನೊಂದ ಜೀವಗಳು
ಕತ್ತಲಲ್ಲೇ ಅರಳಿ ನಿಂತಿವೆ.
ಮುಳುಗಿ ಹೋದ ಸೂರ್ಯನನ್ನು
ಹೊತ್ತು ತರಲು
ಹುರುಪುಗೊಂಡಿವೆ
ನಾಳೆ ಅರಳುವ
ಮೊಗ್ಗುಗಳಿಗೆ
ಭರವಸೆಯ
ಮಾತುಕೊಟ್ಟಿವೆ.

# ಪ್ರಹ್ಲಾದ ಎಲ್. ಎಸ್.

## ನನ್ನ ದಣಿಗೆ ನನ್ನ ದನಿ

ನಾನು ನನ್ನ ಹೆಂಡತಿ ಮತ್ತು ಮಕ್ಕಳು
ಬಂಜರು ನೆಲದಲ್ಲಿ ಬೆವರ ಬಸಿದು
ರಂಟೆ ಕುಂಟೆ ಗೇಯುತ್ತಿದ್ದರೆ
ನೀನು ನಿನ್ನ ಹೆಂಡತಿ ಮಕ್ಕಳು
ಮಹಡಿಗಳಲಿ ಕೂತು ಮೃಷ್ಟಾನ್ನಗಳ ಮುಕ್ಕುತ್ತೀರಿ
ನಾನು ನನ್ನ ಹೆಂಡತಿ ಮತ್ತು ಮಕ್ಕಳು
ರಾಕ್ಷಸದಂತ ಕಾರ್ಖಾನೆಗಳಲ್ಲಿ
ಬಿಳುಪಾದ ಕಾಗದಗಳನ್ನು ನವಿರಾದ ಬಟ್ಟೆಗಳನ್ನು
ನೇಯುತ್ತಾ ಸುಣ್ಣಗಾದರೆ
ನೀನು ನಿನ್ನ ಹೆಂಡತಿ ಮಕ್ಕಳು
ಗರಿಗರಿಯಾದ ಸೂಟುಗಳನ್ನುಟ್ಟು
ಗರೀಬರ ಬಗ್ಗೆ ಗರಮ್ಮಾಗಿ ಮಾತಾಡಿ
ದಿನಪತ್ರಿಕೆಯಲಿ ಅಚ್ಚಾಗುತ್ತೀರಿ
ದಲಿತರ ದನಿಯೆಂದು ಕಥೆ ಕವನಗಳ
ಗುಡ್ಡೆ ಹಾಕುತ್ತೀರಿ.
ನಾನು ನನ್ನ ಹೆಂಡತಿ ಮತ್ತು ಮಕ್ಕಳು
ಆಳವಾದ ಗಣಿಗಳಲ್ಲಿ ಕರಾಳ ಸುರಂಗಗಳಲಿ
ಮಣ್ಣು ಹೊತ್ತು ಮೈಗೆ ಮುಪ್ಪು ತಂದುಕೊಂಡರೆ
ನೀನು ನಿನ್ನ ಹೆಂಡತಿ ಮಕ್ಕಳು
ಮೈಮೇಲೆ ಮಣಭಾರ ಚಿನ್ನ ಹೇರಿಕೊಂಡು
ಮೈಸವೆದೀತೆಂದು ಮಾಲೀಷ್ ಮಾಡಿಸಿಕೊಳ್ಳುತ್ತೀರಿ

ದುರ್ಬಲರಾದ ನನ್ನ ತಬ್ಬಲಿ ಮಕ್ಕಳು
ನೀನುಂಡ ಎಂಜಲು ಎತ್ತಲಿಕ್ಕೆ
ನಿನ್ನ ಮಕ್ಕಳ ಕಕ್ಕಸು ಕ್ಲೀನ್ ಮಾಡಲಿಕ್ಕೆ
ನಿನ್ನ ಮನೆಗೆ ಕೂಲಿ ಬಂದರೆ
ನಿನ್ನ ಮಕ್ಕಳು ಕಿಲಕಿಲ ನಗುತ್ತಾ
ಕಲಿಯಲು ಶಾಲೆಗೆ ನಡೆಯುತ್ತಾರೆ.
ಧಣಿ,
ಹಗಲಿನ ಕೋಪೋದ್ರಿಕ್ತ ಸೂರ್ಯನ ಕೆಂಗಣ್ಣುಗಳು
ನೀರವ ರಾತ್ರಿಯ ನೀಲ ನಕ್ಷತ್ರಗಳು
ನನ್ನವಳ ನಿಟ್ಟುಸಿರುಗಳು, ನನ್ನ ಬೆವರ ಹನಿಗಳು
ಹಾಗೂ ನನ್ನ ಮಕ್ಕಳ ಮಲಿನ ಮುಖಗಳು
ನನ್ನ ಚುಚ್ಚಿ ಚುಚ್ಚಿ ಕೇಳುತ್ತಿವೆ
ನನ್ನ–ನಿನ್ನ ನಡುವಿನ ನೂರು ಯೋಜನೆಗಳ ಅಂತರದ ಬಗ್ಗೆ
ನೂರು ಬೆಂತರದಂತ ಪ್ರಶ್ನೆಗಳನ್ನ,
ಹೇಳು ಧಣಿ,
ನಾನು ಎದೆ ಸೆಟಸಿ ಗೋಣೆತ್ತಿ ಪ್ರಶ್ನೆ ಹಾಕುವ ಮುನ್ನ
ನನ್ನೆಲ್ಲಾ ಪ್ರಶ್ನೆಗಳಿಗೆ ಸಲೀಸಾಗಿ ಉತ್ತರಿಸಿಬಿಡು ಧಣಿ
ಉತ್ತರಿಸಿಬಿಡು.

೪೧೧/ಪ್ರಹ್ಲಾದ ಎಲ್. ಎಸ್.

## ರುದ್ರಪ್ಪ ಕಾಯಿ

### ನಿಮಗೊಂದು ಕರೆ

ಉಳುವವನಿಗೆ ಹೊಲ, ಫಸಲು
ದುಡಿತಕ್ಕೆ ಕೂಲಿ, ಮಗ್ಗುಲಿಗೆ ನೆಲ,
ಸಮತೆ ಸ್ವಾತಂತ್ರ್ಯ ಬೇಕೆಂದಿರೊ—
ನಿರ್ಬೀಜೀಕರಣಕ್ಕೆ ದಂಡು ಬರುತ್ತದೆ
ಗುಂಡು ಹಾರಿಸುತ್ತದೆ, ಕೊಲೆ ಮಾಡುತ್ತದೆ.
ನೇಣುಗಂಬಗಳ ನಡುವಿಂದ
ಕಿತ್ತು ತಂದಿರುವಂಥ ಜನ ಪ್ರಭುತ್ವಕೆ
ತತ್ವದಾಚೆಗೆ ನಿಂತು ಗುಂಡೇಟು ಹೊಡೆಯುವ
ಗುಪ್ತ ಫಿತೂರಿಗಳ ಕಾಲ, ಗೆಳೆಯರೆ ಹತ್ತು ಜನ ತಿರುಗುವ
ಹೆದ್ದಾರಿಗಳ ಮೇಲೆ ನಮ್ಮೆದೆ ಗುಂಡಿಗೆಗಳ
ಸೀಳುತ್ತಾರೆ–ರೊಟ್ಟಿ ಬೇಕೆಂದರೆ
ಶೂಲಕ್ಕಿಕ್ಕುತ್ತಾರೆ ಶಾಂತಿ ಎಂದರೆ.
ಏಳಿ ಜೀವ ರಕ್ಷಿಸಿಕೊಳ್ಳಿ
ಪ್ರಜರಾಳಿಕೆ ರಕ್ಷಿಸಿಕೊಳ್ಳಿ
ಇಲ್ಲಾ—
ನಮ್ಮ ನೆತ್ತರಿನ ಮಡವು ಕಟ್ಟುತ್ತಾರೆ
ಅಲ್ಲಿ ಗಿಡ ಬೆಳಸುತ್ತಾರೆ
ಕೊಡ ತುಂಬ ಕುಡಿದು ಮೋಜು ಮಾಡುತ್ತಾರೆ
ಬಿರ್ಲಾದಿ ಫೋರ್ಡರಿಗದನು ಸರಬರಾಜಿಸುತ್ತಾರೆ
ಊರು ನೆತ್ತಿಗಳ ಮೇಲೆ
ಗುಬ್ಬಿ ಕಾಗೆಗಳ ಬದಲಾಗಿ ಹದ್ದುಗಳೆರಗುವುದಕ್ಕೆ ಮುನ್ನ
ಬಂಧುಗಳೇ ಬನ್ನಿ.

# ಬಿದರಹಳ್ಳಿ ನರಸಿಂಹಮೂರ್ತಿ

## ಕಣ್ಣಾರೆ ಕಂಡು ಧನ್ಯನಾದೆ

ಅಷ್ಟಮಠಗಳ ನಡುವೆ ಕೃಷ್ಣಮಠದೇಳು ಸುತ್ತಿನಕೋಟೆ
ಭಕ್ತ ದನ ಜನ ಜಾತ್ರೆ ಕಸಮುಸುರೆ ಪಾಚಿಗಟ್ಟಿದ
ಮಧ್ವ ಸರೋವರ ಕಪ್ಪಿಟ್ಟ ಕನಕನ ಕಿಂಡಿ ಕಗ್ಗತ್ತಲ ಪಾರಾಯಣ.

ಚೌಕಿಯ ಊಟದ ನಾಟಕ ಲಲ್ಲೆಗೈಯುವ ಸ್ವಯಂಸೇವಕ
ಗೊಲ್ಲರ ಕಣ್ಣು ಕೋಳಲಾಟ ಬೊಜ್ಜು ರೇಶಿಮೆ ಮುಗುಟ
ಕಟ್ಟಿದ ಜುಟ್ಟಿನ ಪಾರುಪತ್ಯೇದಾರ ಸಂಜೆಯಾದರೆ ಸಾಕು
ಸರ್ಕಸ್ಸು ಧಡಂ ಧುಡಂ ಹುಸಿ ಗುಂಡು ಹೂಮಳೆ ಚಕ್ರ
ಚಮತ್ಕಾರ ಝಗ ಝಗ ತೆಪ್ಪೋತ್ಸವ ಅಷ್ಟೋತ್ತರ ರಥೋತ್ಸವ
ಆಸುಪಾಸಿನ ಯುವಕಯಾದವರೆಲ್ಲ ಗಮ್ಮತ್ತಾಗಿ ಗುಂಡು ಹಾಕಿ
ರಾಧೆಯರನರಸಿ ಬರುವ ಗಿಜು ಗಿಜು ರಾಸಕ್ರೀಡೆ ಮಧ್ಯರಾತ್ರಿ
ಇದೆಲ್ಲ ಆ ಶ್ರೀಕೃಷ್ಣನ ಜರಿ ಅಂಚಿನ ಕಣಜ ತುಂಬಿಸಿ
ಲಪಟಾಯಿಸುವ ಸಂಚಿನ ಒಂದು ವರ್ಣರಂಜಿತ ಅಂಕ.

ಅಬ್ಬರಿಸುವ ಈ ಬದುಕಿನುತ್ಸಾಹದ ಗಮ್ಯ ಸಂಭ್ರಮದಂತರಾಳ
ದಲ್ಲೊಂದು ಎಳೆ ಜೀವ ಬದುಕ ಕಾಣುವ ಮುಂಚೆ ಸಾವು.
ತಾಯ ಮಡಿಲಿಂದಲೇ ಕಸಿದುಕೊಂಡಂತೆ ಬಾಲ್ಯದ ಹೊನಲು
ಹೊಳೆ ಮರಳು ಚೆಲ್ಲಾಟ ಕಾಡು ಕನಸಲೆವುದರ ಮುಂಚೆ
ವ್ಯವಸ್ಥಿತ ಚಕ್ರ ಭೀಮನ ಕೋಟೆಯೊಳಗಡೆ ದಿಗ್ಬಂಧಿತನಾಗಿ
ಸನ್ಯಾಸ ಪಂಜರದಲ್ಲಿ ಸಂಕಟ ಪಡುವ ಗಿಣಿಮರಿಯಾಗಿ

ಹಿಂದೆ ಹೀಗೇ ಬಲಿಯಾಗಿ ಜೀವಂತಿಕೆ ಸುಟ್ಟುಕೊಂಡವರಂತಾಗಿ
ಅತೀಂದ್ರಿಯನಾಗಿ ಮೃತನಾಗಿ ಧ್ಯಾನ ಅರ್ಚನೆ ಹೋಮಾಗ್ನಿ
ಶಾಂತಿಪಾಠ ಊಟ ಶೌಚಗಳ ನಿಯಂತ್ರಿತ ಯಾಂತ್ರಿಕತೆಯಲ್ಲಿ
ಪ್ರೇತ ಕಳೆ ತಳೆದ ನಿರ್ಭಾವ ಮುಖ ಕಂಡು ಉಮ್ಮಳಿಸಿ ಬಂದು
ಕಣ್ಣೊಳಗೆ ಕಣ್ಣಿಟ್ಟು ಅವನ ಒಳಗಿನಾಳಕ್ಕಿಳಿದೆ
ಬೆದಕಿದೆ ಆ ಬಾಲ ಜೀವದ ಪದರುಗಳ ಬಿಡಿಸಿ.

ಹತ್ತು ಹಲವೆಡೆ ಹರಿವ ಹುಚ್ಚು ಹುಡುಗಾಟಕ್ಕೆ ಬಿಗಿವ ಸಂಕೋಲೆ
ನೋವು ನೆಡುವಷ್ಟು ಬಲಿಯುದ ಎದೆಯು ತುಂಬೆಲ್ಲ ಶೂನ್ಯಾಂಧಕಾರ
ಈ ಪುಂಡ ಗೋಕುಲದಲ್ಲಿ ಬಾಲಲೀಲೆಯ ಸಹಜ ಪ್ರವೃತ್ತಿಗೇ ಸೊನ್ನೆ
ಭಕ್ಷ್ಯ ಭೋಜ್ಯಾಗಾರದಲ್ಲಿ ವ್ರತೋಪವಾಸ ದಂಡಿಸುವ ಜೀವ
ಸೊಂಪು ಬದುಕಿನ ಮಧ್ಯದಲ್ಲಿ ಸಾವಿನ ಸಂಕೇತ
ಕಾಮಕೇಳಿಯ ವೃತ್ತದ ನಿರ್ವೀರ್ಯ ಕೇಂದ್ರ
ಕಂಡು ಪುನೀತರಾಗಲು ಬರುವ ಭಕ್ತರ ಕಣ್ಮುಚ್ಚಿ ದ್ವೇಷಿಸುವ ಬಾಲಯೋಗಿ
ಯ ಬಲಹೀನ ಹೆಗಲ ಮೇಗಡೆ ಮೈವೆತ್ತು ಮೆರೆವ ವೈಭವದ ತಾಂಡವ
ಉರುಳುತ್ತ ಸಿಕ್ಕಿದ್ದನ್ನೆಲ್ಲ ಅಪ್ಪಳಿಸಿ ರಾಚುತ್ತ
ಶತಶತಮಾನಗಳಿಂದ ಗಡಗಡಿಸುತ್ತಿರುವ ಪರಮಾತ್ಮನ ಮಹಾರಥದ
ದೈತ್ಯ ಚಕ್ರದಡಿ ಅಸಹಾಯಕ ಮೂಕ ಬಲಿ ಬಿದ್ದ ಪರಿ
ಎಲ್ಲ ನನ್ನ ಕಣ್ಣಾರೆ ಕಂಡು ಧನ್ಯನಾದೆ.

# ನಿರ್ಮಲ. ಎಸ್. ರೆಡ್ಡಿ

## ಕತ್ತಲ ನಡುವಿನ ಆಶಯಗಳು

ನಿಮಗೆ ಗೊತ್ತಿರುವ
ಆ ಮನೆಗೆ ಕಿಟಕಿಗಳು
ಒಂದು ತೆರೆದಾಗ ಮತ್ತೊಂದು—
ಮುಚ್ಚಿಕೊಳ್ಳುತ್ತೆ
ತೆರೆದ ಕಿಟಕಿಯಲ್ಲಿ ಹಾದು ಬರುವ
ಬಿಸಿಯುಸಿರು—
ಕಾಸಗಲದ ಕುಂಕುಮವಿಟ್ಟ ಗರತಿಯರ
ರಾಗಕ್ಕೆ ನಾಂದಿಯಾಗುತ್ತೆ
ಮದುವೆಯಾದ ಮೂರು ದಿನಕ್ಕೆ
ಗಂಡಸತ್ತನಂತೆ !
ಸತ್ತದ್ದು ಇವಳ ಪಾಪ ಕರ್ಮದಿಂದ
ಎಂದು ವಟಗುಟ್ಟುತ್ತವೆ
ಕೆಲಸವಿಲ್ಲದ ಬೊಚ್ಚುಬಾಯಿಗಳು
ನಿಟ್ಟುಸಿರು ! ಬದುಕಿನ ಅನಂತತೆಯಲ್ಲಿ
ಕೊರಗಿ ಸಾಯಲಾರದ ಮುನ್ನ
ಎದ್ದೇಳಲಾರದ ಸಾವಿನ ಬದುಕು
ಯಾರಿಗೆ ಬೇಕು, ನಿಮ್ಮ ಪರಂಪರೆ ಎಂದು
ಎದ್ದು ನಿಲ್ಲುವಾಗಲೆಲ್ಲ ಜಗ್ಗಿ ಹಿಡಿದಿರುವ
ಈ ಸಂಬಂಧಗಳು—ಮನದ ಆಶಯಗಳನ್ನು
ನುಚ್ಚು ನೂರಾಗಿಸುತ್ತದೆ.

# ಎಂ. ವೆಂಕಟಸ್ವಾಮಿ

## ಶತವರ್ಷಗಳ ಗತವೈಭವ

ಇಗೋ ಆಚರಿಸುತ್ತಿರುವೆವು
ಶತವರ್ಷಗಳ ಗತವೈಭವ........?
ಶತವರ್ಷಗಳಿಂದ ಮಣ್ಣು ಮುಕ್ಕಿದವರು
ನಾವು ಹತಭಾಗ್ಯರು.

ಸಾವಿರಾರು ಅಡಿಗಳ ಕೆಳಗೆ, ಆಳದೋಳಗೆ
ಪಾತಾಳದೊಳಗೆ, ನಿಮ್ಮ ಕೆಳಗೆ,
ತೆವಳಿ ತೆವಳಿ ಸವೆದವರು.

ಇಂದಿಗೂ ನಮ್ಮ ಹೊದಿಕೆ ಬಿದಿರು ದಟ್ಟಿಗಳು
ಗರಿಗೆದರಿದ ಸೈನಾಟ್ಸ್ ವಿಷ ಕಣಗಳು
ವೈತೂರಿ ಉಸಿರುಗೂಡುಗಳ ಕುಕ್ಕುತ್ತಿವೆ

ಮಳೆ ಇಲ್ಲದೆ ತೊಯ್ದವರು
ಗಾಳಿ ಇಲ್ಲದೆ ಉಸಿರಾಡುವವರು.

ಜೀವನವೆ ಕತ್ತಲ ಹೊತ್ತು ಹುಡುಕುತ್ತಿರುವೆವು
ಇನ್ನೂ ಬೆಳಕನ್ನು ಕಪ್ಪು ಸುರಂಗಗಳಲ್ಲಿ
ದೇಶದ ಪ್ರತಿಷ್ಠೆಗೆ ಪಾತ್ರರಾದ ನಾವು
ಅಂತರಾಳದ ನೋವ ಹೊತ್ತು, ಕಂದರದಲ್ಲಿರುವ
ನಮ್ಮ ರಕ್ತ ಎಲುಬುಗಳೇ

ನಿಮ್ಮ ಶೃಂಗಾರ ಎರಕವಾದ ಚಿನ್ನ
ಬತ್ತಿಹೋದ ಪಿಳಿ ಪಿಳಿ ಕಣ್ಣುಗಳ ಹಿಗ್ಗಿಸಿ
ಸ್ಮಶಾನ ಮೌನದಲ್ಲಿ ಹುಡುಕುತ್ತಿರುವೆವು
ತೊನ್ನ ತುಣುಕುಗಳನ್ನ

ನಮ್ಮಾಸೆ ಈಡೇರುವುದಿಲ್ಲ
ಈ ಸೈನಾಟ್ಟಿನ ವಿಷದ ಮಣ್ಣಲ್ಲಿ.

ಎಲುಬುಗಳನ್ನೆ ಏಣಿ ಮಾಡಿ
ಪೃಥ್ವಿಯ ಆಳವಾದ
ಚಿನ್ನದ ಗಣಿಯಲ್ಲಿ
ಕಗ್ಗತ್ತಲ ಸಾಗರದಲ್ಲಿ
ಚಲಿಸುವ ಪರ್ವತಮಯ ಬೆನ್ನು ಹೊತ್ತು
ನಾವ್ ಬಂದಾಗ
ಮೈ ಪರಚಿ ಹುಡುಕುವರು
ಗಟ್ಟಿಗಳ ಗುಟ್ಟಾಗಿಸುವರ ನೋಡಿ
ಸೆಲ್ಯೂಟ್ ಹೊಡೆದು ದೂರ ಸರಿಯುವರು.

ಕಪ್ಪು ಜನರ ಆಸೆಗಳ
ಬಸಿದ ರಕ್ತವು
ಪದರು ಗರ್ಭಕ್ಕಿಟ್ಟ ಮಿಂಚಿನ
ಬರೆಗಳೊಂದಿಗೆ ಬತ್ತಿಹೋಗಿದೆ,
ವೆಂಟಿಲೇಟರ್‌ಗಳಿಂದ ಚೆಲ್ಲುವ ಹೊಗೆಯೆ
ನಾವ್ ಬಿಟ್ಟ ಬಿಸಿಯುಸಿರು.
ನಾವು ಸುರಿಸಿದ ಬೆವರ ಹನಿಗಳನೆತ್ತಲು
ಹೆಣಗುತ್ತಿವೆ ಶಕ್ತಿಯುತ ಪಂಪುಗಳು.

ಆದರೂ ಸದ್ದು ಗದ್ದಲವಿಲ್ಲದೆ
ಎಳಸು ಕಪ್ಪು ಪೀಳಿಗೆ ಕಾತೆಗಳೊಂದಿಗೆ
ಪಳಯುಳಿಕೆಗಳಾಗಲು
ಪಂಕ್ತಿಯಲ್ಲಿಡಗಿದೆ

೨೨ ಉಸಿರೊಡನೆ ನುಗ್ಗಿ ಗುಪ್ಪಿಸಿವೆ
ಸ್ಕೈನಾರ್ಟ್ಸ್ ಗುಡ್ಡಗಳು
ಹಿಮಾಲಯ, ಆಲ್ಪ್ಸ್, ರಾಕಿಗಳನ್ನು
ಮೀರತೊಡಗಿವೆ.

ಸುಯ್ಯನೆದ್ದ ಸ್ಕೈನಾಟ್ಟಿನಡಿಯಲ್ಲಿ
ನಮ್ಮ ಜೋಪಡಿಗಳು
ಸಹರಾ ರಾಮೇಶ್ವರಗಳಾಗತೊಡಗಿವೆ.

ಎತ್ತಲಿಂದಲೋ ಇತ್ತ ಬಂದವರು
ಎಲ್ಲಿಯೋ ಇರುವವರು
ಕಪ್ಪು ಸುರಂಗಗಳ ಕತೆಗಳನ್ನೆ
ಅರಿಯುವವರು.
ಮಿಂಚುತ್ತಿರುವರು ವೈಭವದ ಹೊಸ್ತಿಲಲ್ಲಿ.

"ಇಗೋ ಆಚರಿಸುತ್ತಿರುವೆವು
ಶತವರ್ಷಗಳ ವೈಭವ"

# ಶ್ಯಾಮಸುಂದರ ಬಿದರಕುಂದಿ

## ದುಡಿಮೆಯವರು

ಹೊಂಟಾರ ಜನ ಎದ್ದು ದುಡಿಯಾಕ
ಮಣ್ಣಾಗ ಮೈಮುರಿದು ಗಳಸಾಕ
ಕೆಸರಾಗ ಅದ್ದಿಸಿ ಕೈಯ ಕಂಡವರ
ಹೊಲದಾಗ ಸುರಿಸುತ್ತ ಮೈ ಬೆವರ

ಗುಳೆಯೆದ್ದು ಹೊಂಟಾರೋ ಮನಿ ಮಾರು ಬಿಟ್ಟು
ದುಡಿಮೆಯ ಗುಂಡನ್ನ ಹುಡುಕುತ್ತ
ಮುಗಿದಿಲ್ಲ ನಿಲ್ಲದ ಹುಡುಕಾಟ ಎಂದೆಂದೂ
ಸಾಗಿಲ್ಲ ಈ ಒಗೆತನ ಪೂರಾ ನಿಶ್ಚಿಂತ

ಬಿಸಿಲೀಗೆ ಬರದೈತಿ ನೆಲದ್ಯಾಂಗ ಈ ಮೈ
ನೆಂದೈತಿ ಮಳಿಯಾಗ ತೊಯ್ದು ತಪ್ಪಡಿಯಾಗಿ
ಥಂಡ್ಯಾಗ ನಡಗೈತಿ ಗದಗದಾ ಥರ್ರಂತ
ಗಾಳೀಗೆ ಕುಸಿ ಬಿದ್ದೈತಿ ಇವರ ಬಾಳೀವು

ಹಾಸ್ಯಾರ ಕಂಬಳಿಯ ಮ್ಯಾಲೊಂದು ಕಂಬಳಿ
ಮ್ಯಾಲೆ ಮಲಗ್ಯಾರೆ ಹಾಂವೂ ಕಂಬಳಿ ಹಂಗ
ನಡನಡಸಿ ನಡಸ್ಯಾರ ಥಂಡ್ಯಾಗ ಮೈಯೆಲ್ಲಾ
ಎದ್ದಾವ ಕಂಬಳಿ ಹುಳದಂಥ ಮುಳ್ಳು

ಎಂದೋ, ಯಾರೋ, ಮುಚ್ಚಿದ ಬಾಯಿ ತೆಗೆದಿಲ್ಲ
ಇವರ ನಾಲೀಗಿ ಹ್ಯಾಂಗೈತಿ ?  ನಾ ನೋಡಿಲ್ಲ
ದವಡ್ಯಾಗ ನುರಸುತ್ತ ಒಣಗೀದ ರೊಟ್ಟೀ ತುಂಬ್ಯಾರ
ತಮ್ಮ ತುತ್ತೀನ ಚೀಲ ಇಸ್ನ್ಯಾರೂ ಕಸಗೊಳ್ಳಧಾಂಗ

# ಪಿ. ವಿ. ಅಜಿತಾ

## ಗಣಿ

ಸ್ವರ್ಗಕ್ಕೆ ಬೇಲಿ
ನರಕದ ದಾರಿ
ನಿನ್ನ ರಕ್ತ ನಿನಗೆ ಕೊಟ್ಟ
ಹೆಸರು.
ಆಸೆಗಳ ಗೋರಿ
ತಪದ ನೇಣು
ಹೀಗೆ ಏನೇನೋ
ಕರೆದರು ನಿನ್ನ.
ರೋಸಿ ಸಾಯಲಿಲ್ಲ
ಎದ್ದು ಒದೆಯಲೂ ಇಲ್ಲ
ಪಗಡೆ ಚಟಕ್ಕೆ
ಒತ್ತೆ ಇಟ್ಟು, ಬತ್ತಲೆಗೆ
ತಲೆ ಇಳಿಸಿ, ಸತ್ಯವನು
ಗೂಟಕ್ಕೆ ಕಟ್ಟಿ
ಅಜರಾಮರರು
ಸೂರ್ಯನಾಣೆ.
ಗಾಳಿ ತುಂಬಿದ ಚಂಡು
ಮುಂಡಾಡದೆ ಬಿಟ್ಟಾಗ
ಹಲವು ಅಂಗಳದಲ್ಲಿ ಬೆಳಗಿದ ವಜ್ರ
ನಿನ್ನಲ್ಲು ಬೆರೆತ,
ಕಲ್ಲಾದೆ–ಪುಣ್ಯಾತ್ಮನ

ಶಾಪಕ್ಕೆ, ತಪದ ಕೊಪಕ್ಕೆ.
ಅಫೀಮು ನಾಲಿಗೆಯಲ್ಲಿ
ಕೇಕೆ ಹಾಕಿದ ಗಂಡು,
ಊರೂರು ಸುತ್ತಿ ನಿನ್ನ ಮಾರಿ
ಸತ್ಯ ಉಳಿಯಿತು ಎಂದ.
ರಂಗು ರಂಗಿನ ಬಾವುಟ
ನಿನ್ನ ತಲೆಗೆ
ಕೊಂಬು ಕಹಳೆಗಳೆಲ್ಲ
ಜೊತೆಗೆ.
ಭ್ರಮೆಯ ಕೊಪದಲಿ
ಕಲ್ಲಾದ ಬಿಳಿಕೂದಲಿಗೆ
ನಾಚಿ ಮಿಂಚು ಸುಳಿದಾಗ,
ಮನ ಮಿಡುಕಿ, ತೊಡೆ
ಕುಣಿಯಿತು ; ಕರುಳು
ತಲೆ ಕಡಿಯಿತು.
ಶೀಟಿ ಶೀರವ ಶರಣ ಹುಡುಗಿ ಇಲ್ಲವೆ ಮಲಗ
ಕರೆಗೊಪ್ಪಿ ಒಳಸೇರಿದೆ
ಹೆಸರಬಲೆ—ಮುಗಿಲಿನುದ್ದ.
ಬುದ್ಧ ಮುಳಿದು
ಬಿದ್ದ ; ಕೊಡಲಿಲ್ಲ
ಜಾಗ ನಿನಗೆ.
ಆಗ, ಈಗ ಅದೇ ಮಾತು
ನೀನು ವಿಷ, ಅಫೀಮು, ಹೆಂಡ.
ಕೇಳುತ್ತಲೇ ಇದ್ದಿ
ಯಾರು ಕದ್ದರು ನಿನ್ನ ಬುದ್ಧಿ ?
ಚಕ್ಕಳದಲ್ಲೆ ಚಕ್ಕಾಬಾರ
ಚಿನ್ನದಲ್ಲೇ ಚಮತ್ಕಾರ
ಚಂದ್ರ, ಮಲ್ಲಿಗೆಯಲ್ಲೇ
ಮುದುಡಿತು ನಿನ್ನ ಮೂಳೆ.
ನಿನ್ನ ಕಣ್ಣು ಒಡೆದಿವೆ
ಬಣ್ಣ ಮಾಸಿವೆ, ಆದರೂ

ಬದುಕಿದ್ದೀಯೆ
ನಿನ್ನೆ–ಇಂದು ಹೀಗೆಯೇ
ಕಳ್ಳು ಕುಡಿಸಿದ್ದು ನಿನಗೆ.
ನಿದ್ದೆ ತಿಳಿದದ್ದು
ಬೇಲಿ ಕಿತ್ತೆಸೆದು
ಬರಬಾರದೇ
ಹೊರಗೆ.

# ಚೊಕ್ಕಮೂರ್ತಿ ಪಾಟೀಲ

## 'ನಾನು'–ಕೊಲೆಯಾಗುತ್ತಿರುತ್ತೇನೆ

1

ನನ್ನನ್ನು ಪರಿಚಯಿಸಲು ನನ್ನ ಪರಿಚಯ
ಯಾರಿಗೂ ಇಲ್ಲದುದರ ವ್ಯಥೆಯಿಂದ—
ನನ್ನನ್ನು ನಾನೇ ಬಿಚ್ಚಿಕೊಳ್ಳುವ ದುರಂತಕ್ಕೆ ಬಲಿ
ಆದ ನಾನೊಬ್ಬ ಮನುಷ್ಯ.
ಇಪ್ಪತ್ತು ವರ್ಷಗಳ ನವನಾಗರೀಕ,
ತಲೆ ತುಂಬಾ ಕನಸುಗಳ ಹೊತ್ತ ಯುವಕ.

2

ಮೂರು ದಶಕಗಳಿಂದಲೂ ನಮ್ಮ ದೇಶ,
ದೇಶದೊಳಗಿನ ಜನರಿಗೆ ಸ್ವಾತಂತ್ರ್ಯ (?)
ದೊರೆತಿದ್ದರೂ........;
ನಾವಿನ್ನೂ ಸ್ವಾತಂತ್ರ್ಯೋತ್ತರದ ಕನಸುಗಳ
ಮೆಟ್ಟಿಲುಗಳ ಇಳಿದೇಯಿಲ್ಲ
ಅಲ್ಲಿಂದಾ ಇಲ್ಲಿಯವರೆಗೂ—'ನಾವು' ?
ತುಳಿದಿರುವ ಹಾದಿ
ಹೊಟ್ಟೆಗೆ ಹಿಟ್ಟಿಲ್ಲದ
ಜುಟ್ಟಿಗೆ ಮಲ್ಲಿಗೆಯನ್ನು ಮರೆಯದ,

ದುಂದು ವೆಚ್ಚದ ದಾರಿ
ನನ್ನಂಥವರ ಸಾವಿನ ಸಾವಿರ ಸಾವಿರ ಗೋರಿ ;
ಈಗ ನನಗನಿಸುತ್ತದೆ:
ನನ್ನಂಥವರ ಗೋರಿ ಮಾಡಿ ಅದರ ಸುತ್ತಲೂ
ಗುಲಾಬಿವನ ನಿರ್ಮಿಸುವ 'ನಿಮ್ಮ'ಂಥವರ ಡಂಗುರ ಕೇಳಿ,
ಚರಿತ್ರೆ ಪುಟಗಳಲಿ ನೀವು ಮೂಡಿಸಿದ ಹೆಜ್ಜೆ
ಗುರುತುಗಳನು ಕಚಪಚನೇ ತುಳಿದು
ಗಂಟು ಮೂಟೆಯ ಕಟ್ಟಿ ಹಾಳುಬಾವಿಗೆಸೆಯಬೇಕಾಗಿದೆ.

3

ನನ್ನನ್ನು ಕಂಡು ನೀವು,
ಅಷ್ಟೇ ಅಲ್ಲ ಮತ್ತ್ಯಾರೂ ಹೆದರಬೇಕಿಲ್ಲ
ಹೆದರಿಸಲು ನನ್ನ ಕೈಯಲ್ಲೇನಿದೆ?
ಬಾಂಬೆ? ಬಂದೂಕ? ಅಧಿಕಾರವೆ?
ಹೀಗಾಗಿಯೇ ನನ್ನನ್ನು—ನಿನ್ನೆ,
ಇಂದು ಕಂಡಲ್ಲಿ ಗುಂಡಿಕ್ಕಿ ಕೊಂದರು
ನನಗೆ ಗೊತ್ತು: ನಾಳಿನ ಗರ್ಭದಲ್ಲೂ ನಾನು
ಗುಂಡಿಗೆ ಬಲಿಯಾಗುತ್ತೇನೆಂದು
ನನ್ನಂಥವರೇ ನನ್ನ ಮಾತ ಕೇಳಿರಿ ;
ನಿನ್ನೆ—ಇಂದು ಮತ್ತು ನಾಳೆ ನನ್ನನ್ನು
ಕೊಂದವರು, ಕೊಲ್ಲುವವರು
ಯಾರೆಂಬುದನ್ನ ಜಗಜ್ಜಾಹೀರ ಮಾಡಲು
ನಾನು ಜೀವಂತವಾಗಿದ್ದೇನೆ. ಬದುಕಿಲ್ಲ!
'ನಾನು' ಬದುಕಿದ್ದರೆ, "ಅವರನ್ನು" ಕಾರಿ
ನನ್ನ ಬಸುರಿನ ಅಸಲು ನೋವನ್ನು ಬಯಲುಗೊಳಿಸುತ್ತಿದ್ದೆ.
ನಾನು, ನನ್ನಂಥವರು ಅವರ ಮಧ್ಯೆ ಹುಟ್ಟಿ
ಮೂಕರಾಗಿದ್ದೇವೆ,
ಕಿವುಡರಾಗಿದ್ದೇವೆ.

4

ನಿಮ್ಮ ಕಪ್ಪನೆಯ ಕಣ್ಣುಗಳಲಿ ನಾನು
ಅಕಸ್ಮಾತ್ ಕಂಡರೆ,........ಅಥವಾ,
ನೀವು ನನ್ನನ್ನು ಗುರುತಿಸಿಕೊಳ್ಳುವ ತನಕ ನಾನು
ನಾನಾಗಿಯೇ ಉಳಿಯಬೇಕಾಗುತ್ತದೆ.
ಆದರೆ........, ಅಲ್ಲಿಯವರೆಗೂ ಕಾಯುವುದೆಂತು ?
ನನ್ನನ್ನು ಕೊಂದುದರ, ಕೊಲ್ಲುವುದರ ಬಗ್ಗೆ
ಸೂರ್ಯ ಬೆಳಕನ್ನು ಬಿತ್ತಿದಂತೆ–
ನನ್ನಂಥವರಲಿ ಕ್ರಾಂತಿಯ ಬೀಜ ಮೊಳೆತು
ಬೆಳೆದು ಹೆಮ್ಮರವಾಗಿ ಭೂಮಿಯುದ್ದಗಲಕೂ
ರೆಂಬೆ–ಕೊಂಬೆಗಳನು ಚಾಚಿ, ಚಚ್ಚಿಸಿದರೂ,
ನೀವಿನ್ನೂ ಎಚ್ಚರಾಗದಿದ್ದರೆ,........
ನಿಮ್ಮ ಡನ್‌ಲಪ್ ಹಾಸಿಗೆಗೆ—
ಆಕಾಶ ಚುಂಬಿಸುವ ಮಹಲುಗಳಿಗೆ
ನಿಮ್ಮ ಕಾರಾಸ್ಥಾನದ ಪೀಠಗಳಿಗೆ
ಪೆಟ್ರೋಲ್ ಬಳಿದು ಬೆಂಕಿಕಾರಿ,
ಶೋಷಣೆಯ ಕತ್ತಲೆಗೆ ಬೆಳಕನ್ನು ಪರಿಚಯಿಸುತ್ತೇವೆ
ಎಂದು–ವಾಸ್ತವಿಕತೆಯ ಬಗ್ಗೆ ನಾನು—
ಪ್ರತಿಕ್ರಿಯಿಸಿದಾಗಲೆಲ್ಲಾ—
ಕೊಲೆಯಾಗುತ್ತಿರುತ್ತೇನೆ.

5

ನಾನು ನನ್ನಂಥವರ ಕೊಲೆಯಿಂದ
ಏನಾಗುತ್ತೆ ? ಹೇಗಾಗುತ್ತೆ
ಎಂದೆನ್ನುವ ಕುಂಭಕರ್ಣರಿಗೆ,
ದಿನದಿನಕೂ ಹಚ್ಚನೇ ಹಬ್ಬಿ ಕೊಬ್ಬುವ
ಕರಕಿ ಬೇರಿನ ಕತೆ ಹೇಳಬೇಕೆನಿಸುತ್ತದೆ
'ಯುದ್ಧ ಮತ್ತು ಶಾಂತಿ'ಯ ಬಗ್ಗೆ ಟಾಲ್‌ಸ್ಟಾಯ್‌ನ
ಮಾತಿನ ಬುಗ್ಗೆ ಹರಿಸಬೇಕೆನಿಸುತ್ತದೆ

ಇಷ್ಟಕ್ಕೂ ಎಚ್ಚರಾಗದಿದ್ದರೆ.......
ನೆಳದೊಳಗಿನ ಬೆಂಕಿ ಆಗಿ,
ನೀರೊಳಗಿನ ದಾವಾಗ್ನಿಯಾಗಿ
ಜ್ವಾಲಾಮುಖಿಯಾಗಿ ಸಿಡಿಯಬೇಕೆನಿಸುತ್ತದೆ
ಸಿಡಿಯುತ್ತೇನೆ ಕೊಲೆಯಾಗುತ್ತೇನೆ.
ಕೊಲೆಯಾಗುತ್ತಾಯಿರುತ್ತೇನೆ.

## ಚಾರುಕೀರ್ತಿ

---

### ನುಗ್ಗಿ ಮುಂದೆ

ನುಗ್ಗಿ ಮುಂದೆ ನುಗ್ಗಿ ಮುಂದೆ
ಶ್ರಮಿಕರೆಲ್ಲ ಒಂದೇ
ಒಂದೆಗುರಿ ಒಂದೆ ಮನ
ಶ್ರಮಿಕ ಪ್ರಭುತ್ವವ ಕಟ್ಟಲು ಇಂದೇ
ಗಡಿಯಿಲ್ಲ ಗುಡಿಯಿಲ್ಲ
ದೇಶಕೋಶಗಳಿಲ್ಲ
ಶೋಷಿತರು ನಾವೆಲ್ಲರೊಂದೇ
ಮಿಂಚಾಗಿ ಹೊಳೆದು
ಸಿಡಿಲಾಗಿ ಸಿಡಿದು ನಿಲ್ಲಿ
ಮುಗಿಲೊಡೆದು ಬನ್ನಿ
ಕೆಂಬಾವುಟವ ಹಿಡಿದು ತಿನ್ನಿ
ಗುಡ್ಡಗಳನೊದ್ದು
ಬೆಟ್ಟಗಳ ಕಿತ್ತು
ಸಮತೆ ಬಿತ್ತ ಬನ್ನಿ
ಸುಳಿಗಾಳಿಯಾಗಿ
ಬಿರುಗಾಳಿಯಾಗಿ
ಕಡಲುಕ್ಕಿ ಬನ್ನಿ
ಉಳುವನೆಲದೊಳಗಿಂದ

ಕುದಿವ ಕುಲುಮೆಗಳಿಂದ
ಕೆಂಡದುಂಡೆಗಳಾಗಿ
ಕುಡುಗೋಲು ಸುತ್ತಿಗೆಯ
ಹಿಡಿದು ಬನ್ನಿ.

## ಅಕಾರಾದಿಯಾಗಿ ಕವಿತೆಗಳ ಮೊದಲ ಸಾಲು ಮತ್ತು ಪುಟಸಂಖ್ಯೆ

ಆಕೆಯಿದ್ದಳು ಕೂಸು, ಈತನಿನ್ನೂ ಹುಡುಗ ೧೦೩
ಆಗೆರ ಸೋಮೂ ಮುಕ್ರೀ ಓಮೂ ೧೫೦
ಆದಿಪುರಾಣ ಅಸುರರಿಗೆ ಮಾರಿ ೩೦
ಆಲಿಂಗನವ ಕೊಡಲು ಬಡತನದ ರಂಡೆ ೧೫೩
ಆವ ಕುಲವಾದರೇನು ೫೨
ಆಳೋನಿಗಾರು ಕಾಸು ಉಳೋನಿಗೊಂದು ಕಾಸು ೩೩೧

ಇಗೋ ಆಚರಿಸುತ್ತಿರುವೆವು ೪೧೬
ಇಟ್ಟಿಗಿ ಬಸಪ್ಪನ ರೀತಿಗಳನ್ನು ನೆಟ್ಟಗೆ ಪೇಳುವೆನಾ ೭೪
ಇದರ ಚೆಂದವನ್ನು ಎತ್ತಕಡೆಯಿಂದ ನೋಡಿದರೂ ೩೦೦
ಇಪ್ಪತ್ತು ವರುಷ ಮಾಡಿದರು ಪ್ಲ್ಯಾನಿಂಗು ೧೫೩
ಇರಿಯಿಸುವೆ ತಂದೆ ಮಕ್ಕಳ ೧೫
ಇವನ ಮನೆಯೊಳಗಿಲ್ಲ ಸಾಕಷ್ಟು ಅಕ್ಕಿ ೧೫೩
ಇವರ ಸಮತಾವಾದ ಕೃತಿಗಿಳಿದು ಮೊನ್ನೆ ೧೫೩
ಇವರು ನನ್ನವರು ೩೭೯
ಇಷ್ಟಲಿಂಗಕ್ಕೆ ತೋರಿ ಮೃಷ್ಟಾನ್ನವ ಹೊಡೆದವರಿಗೆ ೨೭
ಇಸ್ವಿಯಿತ್ರಿ ಆ ವರ್ಷ ಎಪ್ಪತ್ತೆರಡಿನ್ನಾ ೧೧

ಈ ಅಭಯಾರಣ್ಯದಲ್ಲಿ ಭಯವೇ ಇಲ್ಲ–ಮೃಗಗಳಿಗೆ ಭಯ ೩೨೫
ಈ ಆಳೋ ನನ್ನ ಮಕ್ಕಳಿಗಿ ಏನಾಗೇತಿ ? ೨೯೬
ಈಂಟೆದರೀಟೆ ಸರಿ ; ಇರಲಿಲ್ಲ ತಂಬಾಕು ೨೯೩
ಈ ಚರಿತ್ರೆ ನಮ್ಮದಲ್ಲ ೩೬೮
ಈ ಜನ ಮೂರು ಬಣ್ಣದ ಮಂಡರುಗಪ್ಪೆಗಳ ೩೪೬
ಈ ದೇಶದ ರಕ್ತ ಹೀರುವವರಿಗೆ ೩೪೫
ಈ ಪ್ರಜಾರಾಜ್ಯದಲಿ ಪ್ರಾಮುಖ್ಯ ರೊಕ್ಕ ೧೫೩

ಉತ್ತಮ ಕುಲದಲ್ಲಿ ಹುಟ್ಟಿದನೆಂಬ ಕಷ್ಟತನದ ಹೊರೆಯು ೨೮
ಉಪವಾಸ ಉಪವಾಸ ೧೭೧

ದುಡ್ಡಿನಾ ದೊಡ್ಡಪ್ಪ ಬೇಡವೇ ಬೇಡವೆನುಗೆ ೨೨೫
ದೇಭ ಕೇಳು ; ಈಗಷ್ಟೆ ಕಂಡೆ– ೨೮೨
ದೇವರಿಗೆ ಪರಮಾನ್ನ ನೀ ಮನು ೬೧
ದೇಶದಾದ್ಯಂತ ಅಣೆಕಟ್ಟುಗಳ ಕಟ್ಟಿ ನಾವು ೨೫೭
ದೇಶ ಪ್ರೇಮದ ಗಾಳಿ ಬೀಸುತಿಲ್ಲ ೨೯೭
ದೇಹದೊಳಗೆ ದೇವಾಲಯವಿದ್ದು ಮತ್ತೆ ಬೇರೆ ೨೭
ದೊಡ್ಡ ದೊಡ್ಡ ಶೆಟ್ಟಿಗಳ ಕಂಡು ೩೩
ದೊಡ್ಡೋನ್ಗ್ ಎಚ್ಗೆ ಸಂಬ್ಳಾಂತ್ ಅಂದ್ರೆ ೧೫೫
ದೊಡ್ಡೋರ ಮಕ್ಳೋಗೆ ಬೆಲ್ಲ ಬಾಳಿಯ ಹಣ್ಣು ೧
ದೊರೆಯೋನಂ ಪಿಡಿದಿರ್ಪನಂತದನೆ ಲೋಕಂ ಮೆಚ್ಚುಗಂ ತದ್ಧರಾ ೬೪

ಧನಧನವೆನುತಿರೆ ನಿಶ್ಚೇತನವಾದ ೭೭
ಧನಹೀನಂ ಧೃತಿಹೀನಪ್ಪನದರಿಂದಕ್ಕುಂ ತಿರಸ್ಕಾರಮುಂ ೭೮
ಧಮನಿಯಲಿ ಬಿಸಿತೆತ್ತರುಕ್ಕದೆ ನೆನೆಯಲಾರೆ ೧೨೦
ಧಮನಿಯಲಿ ಬಿಸಿ ನೆತ್ತರುಕ್ಕುತಿಹ ಹೇ ಯುವಕ ೨೯೧
ಧರ್ಮದ ಹೆಸರಿನಲಿ ಮಾಯವಾಯ್ತು ೧೪೧
ಧರಣಿಯಮರರು ಮಂತ್ರ ತಂತ್ರೋಚ್ಚ ೫೯
ಧರೆಯುಂ ಪುಟ್ಟಿಸಿದಾತನೊರ್ವ್ವನದನಾಂತಿರ್ಪಾತ ನೊರ್ವ್ವಂ ೭೯
ಧೀರನಪ್ಪನುಮಂ ಹಾಸ್ಯ ಮಾಳ್ಪಳ್ಮರುಳೆಂಬಿನಂ ಪಾವೆಂದು ದಾಂಟುವಳಭಿಜಾತನಂ ೧೮

ನೆಗೆಗಂ ನಾಚದೆ ನಮ್ಮನೊಲ್ಲದೆ ಪರಸ್ತ್ರೀಗೊಲ್ದಪಳ್ ೪೨
ನಟ್ಟಿರ್ದಕಲ್ಲಿಂಗೆ ಒಟ್ಟಿರ್ದ ಮಣ್ಣಿಂಗೆ ೬೫
ನಡೆನುಡಿ ಸಿದ್ಧಾಂತವಾದಲ್ಲಿ ಕುಲಹೊಲೆಸೂತಕವಿಲ್ಲ ೨೬
ನಡೆ ಮುಂದೆ, ನಡೆಮುಂದೆ ೧೨೧
ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು ೬೫
ನನಗೆ ಬೇಡ : ಈ ಭೂಮಿಯ ಸೆಳೆತ ಮೀರಿ ೩೧೮
ನನ್ನ ದೇಶವೆ ಏಳು, ಎದ್ದೇಳು ೨೬೧
ನನ್ನನ್ನು ಪರಿಚಯಿಸಲು ನನ್ನ ಪರಿಚಯ ೪೨೪
ನನ್ನ ನೆಲದಲ್ಲಿ ಅಂದರೆ ಇಂಡಿಯಾದಲ್ಲಿ ಸಾಯುತ್ತಾರೆ ೪೦೫

ನೆರದೆಲ್ಲರ್ ಕಳ್ಗುಡಿಯುತ್ತಿರೆ ೨೧
ನೆರವೀಯುರೆವುಗಿಲ್ಲಿ ೨೨೮
ನೆಲದಾಳದಲಿ ಕೆಳಗೆ ೩೩೮
ನೆಲವೆ ನಿನ್ನನ್ನು ಪ್ರೀತಿಸುತ್ತೇನೆ ನಾನು ೩೪೨
ನೆಲವೊಂದೆ ಹೊಲಗೇರಿ ಶಿವಾಲಯಕ್ಕೆ ೨೯
ನೇಸರುಯೆಂದೂ ಮುಳುಗದ ರಾಜ್ಯದಿ ೨೨೨
ನೊಗ ಹೊತ್ತ ಎತ್ತುಗಳು ಎಲ್ಲೋ ಫರಾರಿ ! ೩೦೮

ಪಟ್ಟೆ ವಿಭೂತಿ ಕಂಗೆಸೆಯೆ ಪಾವಡ ಕಟ್ಟುವುಲುಂಗೆ ಪೊಂಗೆ ೬೩
ಪಡೆಯೊಳ್ಬಲ್ಲಿದನಾದೊಡಾ ಪಡೆಯಿನೇಂ ಪಾಪಾರಿಯಂ ಗೆಲ್ವನೇ ೬೩
ಪಡೆವೆನೆಂಬ ಪೊನ್ನನೆ ಪಡೆವುದು ಸರ್ವ ಪ್ರಕಾರದಿಂ ೧೯
ಪರಿಮಳದ ಚಂದನದ ತರುವಿಗೆ ೫೯
ಪಸಿವುದೆ ತಕ್ಕು ಕೊಟ್ಟಳಿಪಿ ಕೊಳ್ವುದೆ ಮಂತಣಮನ್ಯನಾರಿಗಾ ೧೨
ಪಾಚಿಗಟ್ಟಿದೆ ತೀರ್ಥ ೨೬೨
ಪಾಲುತ್ತಮಂಗ ಮಾ ಚಾಂಡಾಲಗಂ ೪೪
ಪಾವನಕ್ಷೀರಮಂ ಕೊಡುವ ಕೆಚ್ಚಲ ಮಾಂಸ ೪೬
ಪಿರಿದಪ್ಪಕೋಲ್ಗಳಿಂದಂ ೪೪
ಪುಟಪುಟ ಬರೆದು ೪೦೦
ಪೃಥ್ವಿಗೆ ಹುಟ್ಟಿದ ಶಿಲೆ, ಕಲ್ಲುಕುಟಿಕಂಗೆ ಹುಟ್ಟಿದ ಮೂರುತಿ ೨೭
ಪೆಣ್ಣಲ್ಲವೆ ತಮ್ಮನೆಲ್ಲ ಪಡೆವ ತಾಯಿ ೬೮
ಪೆರರಂ ಪೇಳ್ದೊಡೆ ನೋವರಾನೆನಗೆ ಪೇಳ್ದಿಂ ಕಾಮಿನೀ ಮೂತ್ರದೊ ೬೩
ಪೆಸರುಂ ರೂಪುಂ ನುಡಿಯುಂ ೨೧
ಪೊಗಳೆಂ ಮಿಕ್ಕಿನ ಚಕ್ರಪಾಣಿ ಸರಸೀಜೋದ್ಭೂತ ಸಂಕ್ರಂದನಾ ೪೫
ಪೊಡೆದುದು ಗರವತಿಕೋಪಡೆ ೧೮
ಪೊಡವಿಯೊಳನ್ಯರ ಪೊಗಳ್ವ ೨೩
ಪೊಡೆವೆಡೆ ಪರಸದೆ ಬಿನ್ನವಿ ೧೫
ಪೊಲೆಯರ್ ಭಾವಿಸುಪೊಡೆದು ೨೧
ಪೋಂತಾದೆನಿಲ್ಲಿ ಸಗ್ಗ ೪೧
ಪೋಗೆನೆ ಪೋಪ ಬಾರೆಲವೊ ಬಾರೆನೆ ಜೀಯ ಹಸಾದವೆಂದು ೪೫

# ಈ ಸಂಕಲನದ ಕವಿಗಳು

**ಪಂಪ** (ಸು. ಕ್ರಿ.ಶ. ೯೪೧)

ಕನ್ನಡದ ಆದಿ ಮಹಾಕವಿ. ಹುಟ್ಟೂರು ವೆಂಗಿಮಂಡಲದ ವೆಂಗಿಪಳುವೆಂಬ ಅಗ್ರಹಾರ. ಚಾಲುಕ್ಯ ಅರಿಕೇಸರಿಯ ಆಶ್ರಯದಲ್ಲಿದ್ದು ಅವನನ್ನು ಅರ್ಜುನನಿಗೆ ಸಮೀಕರಿಸಿ "ವಿಕ್ರಮಾರ್ಜುನ ವಿಜಯ" ಬರೆದ. ಜೈನನಾಗಿ ಹುಟ್ಟಿದುದರ ಬಗ್ಗೆ ಹೆಮ್ಮೆಯಿಂದಿದ್ದ ಪಂಪ "ಆದಿಪುರಾಣ"ವನ್ನೂ ಬರೆದ. ಇಲ್ಲಿರುವ ಕೆಲವು ವೃತ್ತಗಳನ್ನು ಎರಡೂ ಕಾವ್ಯಗಳಿಂದ ಆರಿಸಿಕೊಳ್ಳಲಾಗಿದೆ.

**ರನ್ನ** (ಸು. ಕ್ರಿ. ಶ. ೯೪೯)

ಮುದವೊಳಲು ಇವನ ಹುಟ್ಟೂರು. ಚಾಳುಕ್ಯ ತೈಲಪನ ಆಶ್ರಯದಲ್ಲಿದ್ದವನು. 'ಅಜಿತನಾಥಪುರಾಣ' ಮತ್ತು 'ಸಾಹಸ ಭೀಮ ವಿಜಯ' (ಗದಾಯುದ್ಧ) ಇವನು ರಚಿಸಿರುವ ಎರಡು ಚಂಪೂಕೃತಿಗಳು. ಗದಾಯುದ್ಧ ಕಾವ್ಯದಿಂದ ಇಲ್ಲಿನ ಪದ್ಯಗಳನ್ನು ಆಯ್ಕೆ ಮಾಡಲಾಗಿದೆ.

**ನಾಗವರ್ಮ** (ಕ್ರಿ.ಶ. ೧೦ನೇ ಶ.)

ವೆಂಗಿಮಂಡಳದ ವೆಂಗಿಪಳುವಿನ ಬ್ರಾಹ್ಮಣ ವಂಶಕ್ಕೆ ಸೇರಿದವನು. 'ಕರ್ಣಾಟಕ ಕಾದಂಬರಿ' ಮತ್ತು 'ಛಂದೋಽಬುಧಿ' ಇವನು ರಚಿಸಿರುವ ಕೃತಿಗಳು. ಇಲ್ಲಿನ ಪದ್ಯಗಳನ್ನು ಕರ್ಣಾಟಕ ಕಾದಂಬರಿಯಿಂದ ಆಯ್ಕೆಮಾಡಲಾಗಿದೆ.

**ದುರ್ಗಸಿಂಹ** (ಸು. ಕ್ರಿ. ಶ. ೧೦ನೇ ಶ. ಕೊನೆ ಹಾಗೂ ೧೧ನೇ ಶ. ಮೊದಲು)

೧೧ನೇ ಶ. ದ ಮೊದಲಲ್ಲಿ ಚಾಲುಕ್ಯರಾಜ ಜಗದೇಕಮಲ್ಲ ಜಯಸಿಂಹನ ಬಳಿ ದಂಡನಾಯಕನಾಗಿದ್ದವನು. ವಸುಭಾಗಭಟ್ಟನ ಪಂಚತಂತ್ರವನ್ನು ಕನ್ನಡದಲ್ಲಿ ರಚಿಸಿದವನು ದುರ್ಗಸಿಂಹ. ರಾಜನೀತಿ ಬೋಧಕವಾದ ಸಂಸ್ಕೃತ ಗ್ರಂಥದ ಸಮರ್ಪಕವಾದ ಕನ್ನಡರೂಪ ಇದು.

**ನಯಸೇನ** (೧೨ನೇ ಶತಮಾನದ ಮೊದಲ ಭಾಗ)
ಜೈನ ಕವಿ. ಸ್ಥಳ ಧಾರವಾಡ ಜಿಲ್ಲೆಯ ಮುಳಗುಂದ. ಧರ್ಮಾಮೃತ ಇವನು ರಚಿಸಿರುವ ಕಾವ್ಯ. ಜನಪದ ಕತೆಗಾರನ ಕಥನ ಕೌಶಲ, ವಿಡಂಬನೆ, ಜನಜೀವನ ಪ್ರಜ್ಞೆ, ಲೋಕವ್ಯವಹಾರ ಜ್ಞಾನ ಇವನ್ನು ಅವನ ಕಥೆಗಳು ಎತ್ತಿ ತೋರಿಸುತ್ತವೆ.

**ಕೊಂಡಗುಳಿ ಕೇಶಿರಾಜ**
ಕೇಶಿರಾಜನ ಊರು ವಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಡೋಣಿ ಕೊಂಡಗುಳಿ. ಇವನು ಶಿವಾನುಭವಿಯೂ ಕವಿಯೂ ಆಗಿದ್ದ. ಕಲ್ಯಾಣದ ಆರನೆಯ ವಿಕ್ರಮಾದಿತ್ಯ ಇವನ ಪಾಂಡಿತ್ಯ, ಶೀಲ ಸೌಜನ್ಯಗಳಿಗೆ ಮೆಚ್ಚಿ ತನ್ನ ಮಂತ್ರಿಯನ್ನಾಗಿ ಮಾಡಿ ಕೊಂಡಿದ್ದ. ಕೆಲಕಾಲದ ಬಳಿಕ ದೊರೆ ಮತ್ತು ಇವನಲ್ಲಿ ವಿರಸ ಹುಟ್ಟಿ ಮಂತ್ರಿ ಪದವಿ ತ್ಯಜಿಸಿದ. ವಚನರೂಪದಲ್ಲಿಲ್ಲದಿದ್ದರೂ ಇವನ ಕಾವ್ಯದಿಂದ ಆಯ್ದ ಭಾಗ ವನ್ನು ವಚನಗಳ ಭಾಗಕ್ಕೆ ಸೇರಿಸಲಾಗಿದೆ.

**ಜೇಡರ ದಾಸಿಮಯ್ಯ**
ಆದ್ಯ ವಚನಕಾರ. ಚಾಲುಕ್ಯ ಜಯಸಿಂಹನ ಕಾಲದಲ್ಲಿದ್ದವನು. ರಾಮನಾಥ ಇವನ ವಚನಗಳ ಅಂಕಿತ. ನೇಕಾರ ವೃತ್ತಿ. ಸ್ಥಳ ಗುಲ್ಬರ್ಗ ಜಿಲ್ಲೆಯ ಮುದನೂರು. ಸಾಧಾರಣವಾಗಿ ಇವನ ವಚನಗಳು ಚಿಕ್ಕಚಿಕ್ಕವು.

**ಮಾದಾರ ಚೆನ್ನಯ್ಯ**
ಕರಿಕಾಲ ಚೋಳನ ಕಾಲದಲ್ಲಿದ್ದವನು. ಇವನು ಕರ್ನಾಟಕವನ್ನು ಬಿಟ್ಟು ಕಾಂಚೀ ಪಟ್ಟಣಕ್ಕೆ ಹೋಗಿ ಅಲ್ಲಿ ನೆಲಸಿದವನು. ಕರಿಕಾಲ ಚೋಳರಾಜನ ಅರಮನೆಯ ಲಾಯದ ಕುದುರೆಗಳಿಗೆ ಹುಲ್ಲು ತರುವ ಕವಾಡಿಗ ಗುಪ್ತ ಭಕ್ತ. ಅವನ ಅರವತ್ತು ವರ್ಷದ ಗುಪ್ತ ಭಕ್ತಿಯನ್ನು ಲೋಕಕ್ಕೆ ತಿಳಿಸಲು ಶಿವ ಮನಸ್ಸು ಮಾಡಿ, ಅವನ ಮನೆಯಲ್ಲಿ ಅಂಬಲಿ ಉಂಡು, ಚನ್ನಯ್ಯನ ಅಂಬಲಿಯ ಸವಿಯನ್ನು ಬಣ್ಣಿಸಿದನೆಂದು ಕತೆ ಇದೆ.

**ಅಲ್ಲಮಪ್ರಭು**
ಬಸವಣ್ಣನವರ ಹಿರಿಯ ಸಮಕಾಲಿಕ. ಪ್ರಮುಖ ವಚನಕಾರ. ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಯವನು. ಅನಿಮಿಷಯ್ಯ ದೀಕ್ಷಾಗುರು. ಗುಹೇಶ್ವರ ಇವನ ವಚನಗಳ ಅಂಕಿತ. ಇವನ ವಚನಗಳಲ್ಲಿ ಸಮಾಜದ ತೀಕ್ಷ್ಣ ವಿಮರ್ಶೆಯನ್ನು ಕಾಣಬಹುದು.

**ಬಸವಣ್ಣ**
ವಚನ ಸಾಹಿತ್ಯ ಕ್ರಾಂತಿಯ ಕೇಂದ್ರ ವ್ಯಕ್ತಿ. ವೀರಶೈವ ಧರ್ಮದ ಪ್ರಮುಖ ಮುಂದಾಳುಗಳಲ್ಲಿ ಒಬ್ಬ. ಮಾದರಸ ಮಾದಲಾಂಬಿಕೆಗೆ ಪುತ್ರನಾಗಿ ಜನಿಸಿದ.

ಕೂಡಲ ಸಂಗಮ ಇವನ ಸ್ಥಳ. ಬಿಜ್ಜಳನ ಆಸ್ಥಾನದಲ್ಲಿ ಕರಣಿಕನಾಗಿದ್ದ 'ಕೂಡಲ ಸಂಗಮದೇವ' ಇವನ ವಚನಗಳ ಅಂಕಿತ. ಇವನ ವಚನಗಳಲ್ಲಿ ಆತ್ಮ ವಿಮರ್ಶೆ ಮತ್ತು ಸಮಾಜ ವಿಮರ್ಶೆಯನ್ನು ಕಾಣಬಹುದು.

**ಚೆನ್ನಬಸವಣ್ಣ**

ಚೆನ್ನಬಸವಣ್ಣ ಬಸವಣ್ಣನ ಸೋದರಳಿಯ. ಸಿದ್ಧಾಂತ ವಿವರಣೆ ಮತ್ತು ಮತ ಪ್ರಸಾರ ದೃಷ್ಟಿಯಿಂದ ಬರೆದಿರುವ ಇವನ ಅನೇಕ ವಚನಗಳು ತುಂಬಾ ದೀರ್ಘ ವಾಗಿವೆ.

**ಸಿದ್ಧರಾಮ**

ಬಸವಣ್ಣ ಅಲ್ಲಮಪ್ರಭುವಿನ ಸಮಕಾಲಿಕ. ಸೊನ್ನಲಿಗೆ ಇವನ ಸ್ಥಳ. ಅಲ್ಲಿ ಅವನು ಕೆರೆಯನ್ನು ದೇವಸ್ಥಾನವನ್ನು ಕಟ್ಟಿದನು. ಕಪಿಲಸಿದ್ಧ ಮಲ್ಲಿನಾಥನೆಂಬುದು ಇವನ ವಚನಗಳ ಅಂಕಿತ. ವೀರಶೈವ ಪರಂಪರೆಯಲ್ಲಿ ಪ್ರಮುಖ ವ್ಯಕ್ತಿ.

**ಅಕ್ಕಮಹಾದೇವಿ**

ಬಸವಣ್ಣನವರ ಸಮಕಾಲೀನಳಾದ ಅಕ್ಕಮಹಾದೇವಿ ಕನ್ನಡದ ಮೊದಲ ಕವಿಯಿತ್ರಿ. ಸಾಂಪ್ರದಾಯಿಕ ವಿವಾಹ ಬಂಧನವನ್ನು ಕಿತ್ತೊಗೆದು ಅಕ್ಕಮಹಾದೇವಿ ಶರಣ ಸತಿ ಲಿಂಗಪತಿ ಭಾವದ ನಿಲುವಿನಲ್ಲಿ ಚೆನ್ನ ಮಲ್ಲಿಕಾರ್ಜುನನನ್ನೇ ಗಂಡನೆಂದು ನಂಬಿ ಕೊಂಡು ಸಾಧನೆಯನ್ನು ಮಾಡಿದಳು. ಉಡುತಡಿ ಇವಳ ಜನ್ಮಸ್ಥಳ. ಚೆನ್ನಮಲ್ಲಿ ಕಾರ್ಜುನ ಎಂಬುದು ಇವಳ ವಚನಗಳ ಅಂಕಿತ. ವಚನಗಳನ್ನಲ್ಲದೆ ೬೭ ತ್ರಿಪದಿ ಗಳಿರುವ ಯೋಗಾಂಗ ತ್ರಿವಿಧಿಯನ್ನು ರಚಿಸಿದ್ದಾಳೆ.

**ಅಂಬಿಗರ ಚೌಡಯ್ಯ**

ಅನುಭವ ಮಂಟಪದ ಪ್ರಮಥರಲ್ಲಿ ಅಂಬಿಗರ ಚೌಡಯ್ಯನು ಮುಖ್ಯನಾದವನು. ನೂರೆಕ್ಕೂ ಹೆಚ್ಚು ವಚನಗಳನ್ನು ರಚಿಸಿದ್ದಾನೆ. ತನ್ನ ಹೆಸರನ್ನೇ ವಚನಗಳಿಗೆ ಅಂಕಿತವನ್ನಾಗಿಟ್ಟುಕೊಂಡಿದ್ದಾನೆ. ಕಂಡದ್ದನ್ನು ಕಂಡ ಹಾಗೆ ಹೇಳುವ ಸ್ವಭಾವ ವನ್ನು ಇವನ ವಚನಗಳಲ್ಲಿ ಗುರುತಿಸಬಹುದು.

**ಮಡಿವಾಳ ಮಾಚಯ್ಯ**

ಮಡಿವಾಳ ಕಾಯಕವನ್ನು ಕೈಗೊಂಡು ಅದರಲ್ಲಿಯೇ ಜೀವನ ಸಾರ್ಥಕತೆಯನ್ನು ಕಂಡುಕೊಂಡ ಮಡಿವಾಳ ಮಾಚಯ್ಯ ಪ್ರಮುಖ ಶಿವಶರಣ. ಬಿಜಾಪುರ ಜಿಲ್ಲೆಯ

ಹಿಪ್ಪರಗಿ ಇವನ ಸ್ಥಳ. ಇವನು ಶಿವಭಕ್ತನಷ್ಟೆ ಅಲ್ಲದೆ ಅಜೇಯ ವೀರನೂ ಆಗಿದ್ದನು.

**ಆಯ್ದಕ್ಕಿ ಮಾರಯ್ಯ**

ರಾಯಚೂರು ಜಿಲ್ಲೆಯ ಅಮರೇಶ್ವರದಲ್ಲಿ ಹುಟ್ಟಿ ಸಪತ್ನೀಕನಾಗಿ ಕಲ್ಯಾಣಕ್ಕೆ ಬಂದು ಶರಣ ಜೀವನ ನಡೆಸಿದನು. ಇವನ ಪತ್ನಿ ಲಕ್ಕವ್ವನೂ ಶಿವಭಕ್ತೆ. ಮಹಾ ಮನೆಯ ಮುಂದೆ ಅಲ್ಲಲ್ಲಿ ಚೆಲ್ಲಿದ ಅಕ್ಕಿಯನ್ನು ಆಯ್ದುತಂದು ಅದರಲ್ಲಿಯೇ ಜಂಗಮ ದಾಸೋಹವನ್ನು ಮಾಡುವ ಕಾಯಕ ಈ ದಂಪತಿಗಳದ್ದು. 'ಅಮರೇಶ್ವರ ಲಿಂಗ' ಎಂಬುದು ಇವನ ವಚನಗಳ ಅಂಕಿತ.

**ಕಾಳವ್ವೆ**

ಉರಿಲಿಂಗಪೆದ್ದಿ ಎಂಬ ವಚನಕಾರನ ಪತ್ನಿ. ಈಕೆ ಸಂಸ್ಕೃತ, ಕನ್ನಡ ಎರಡನ್ನೂ ಬಲ್ಲವಳಾಗಿದ್ದಳು. ಕಾಳವ್ವೆ ಗಂಡನೊಡನೆ ಅನೇಕ ವರ್ಷ ಕಲ್ಯಾಣದಲ್ಲಿ ನೆಲೆಸಿದ್ದಳು.

**ರೇಕಮ್ಮ**

ಕೆಳವರ್ಗದ ವಚನಕಾರ್ತಿ. ಇವಳ ವಚನಗಳು ಹೆಚ್ಚು ಸಿಕ್ಕಿಲ್ಲ.

**ಜನ್ನ** (ಸು. ಕ್ರಿ. ಶ. ೧೨೦೦)

ಸುಮನೋಬಾಣ ಇವನ ತಂದೆ. ಜನ್ನ ಹೊಯ್ಸಳ ವೀರಬಲ್ಲಾಳನಿಂದ "ಕವಿ ಚಕ್ರವರ್ತಿ" ಬಿರುದನ್ನು ಪಡೆದವನು. ಜೈನ ಕವಿ. ರಚಿಸಿರುವ ಎರಡು ಕೃತಿಗಳು 'ಯಶೋಧರ ಚರಿತೆ' ಮತ್ತು 'ಅನಂತಪುರಾಣ' ಅಲ್ಲದೆ ಹಲವಾರು ಶಾಸನಗಳನ್ನೂ ರಚಿಸಿದ್ದಾನೆ. ಜೀವದಯೆಯ ಮಹತ್ವವನ್ನು ಸಾರುವುದು ಯಶೋಧರ ಚರಿತೆಯ ಉದ್ದೇಶ. ಇಲ್ಲಿನ ಪದ್ಯಗಳನ್ನು ಯಶೋಧರ ಚರಿತೆಯಿಂದ ಆಯ್ಕೆ ಮಾಡಲಾಗಿದೆ.

**ಬ್ರಹ್ಮಶಿವ** (ಸು. ಕ್ರಿ. ಶ. ೧೨ನೇ ಶತಮಾನದ ಮಧ್ಯಭಾಗ)

ಮೊದಲು ಶೈವ ಮತಾವಲಂಬಿಯಾಗಿದ್ದು ಅನಂತರ ಜೈನ ಧರ್ಮವನ್ನು ಸ್ವೀಕರಿಸಿದ್ದಾನೆ. ಅನ್ಯಮತ ವಿಡಂಬನೆ ಇವನ ಕಾವ್ಯದಲ್ಲಿ ಪ್ರಮುಖವಾಗಿ ಕಂಡುಬರುತ್ತದೆ. ಇವನು ರಚಿಸಿರುವ ಕೃತಿಗಳೆಂದರೆ "ತ್ರೈಲೋಕ್ಯಚೂಡಾಮಣಿ" ಮತ್ತು "ಸಮಯ ಪರೀಕ್ಷೆ". ಇತರ ಮತ, ಪುರಾಣಗಳಲ್ಲಿ ಹಾಗೂ ಲೋಕಾಚರಣೆಯಲ್ಲಿದ್ದ ದೋಷಗಳನ್ನು ತೋರಿಸಿ, ಜೈನ ಮತವೇ ಸರ್ವ ಶ್ರೇಷ್ಠವೆಂದು ತೋರಲಾಗಿದೆ. ಇಲ್ಲಿ ಜನಸಾಮಾನ್ಯರೇ ಪಾತ್ರಗಳು, ಅಪಹಾಸ್ಯವೇ ಇಲ್ಲಿಯ ಸ್ಥಾಯಿ. ಇಲ್ಲಿನ ಪದ್ಯಗಳನ್ನು 'ಸಮಯ ಪರೀಕ್ಷೆ'ಯಿಂದ ಆಯ್ಕೆ ಮಾಡಲಾಗಿದೆ.

**ಹರಿಹರ**

ಭಕ್ತ ಕವಿ. ಪಂಪಾಕ್ಷೇತ್ರ ಇವನ ಸ್ಥಳ. ವೀರಶೈವ ಕವಿ. ಇವನು ರಚಿಸಿರುವ ಕೃತಿಗಳು ಪಂಪಾಶತಕ, ರಕ್ಷಾಶತಕ, ಮುಡಿಗೆಯ ಅಷ್ಟಕ, ಗಿರಿಜಾಕಲ್ಯಾಣ ಮತ್ತು ಶಿವಶರಣ ರಗಳೆಗಳು. ಭಾಷೆ, ವಸ್ತು, ಛಂದಸ್ಸಿನಲ್ಲಿ ಹೊಸತನ್ನು ಕಂಡುಕೊಂಡ ಕವಿ. ಶತಕಗಳು ಹರಿಹರನ ಆತ್ಮ ಕಥನಗಳಾಗಿವೆ. ಸಂಸಾರಭಾರ, ರಾಜಸೇವೆ, ಇದರಿಂದ ಮುಕ್ತನಾಗಿ ಅವನು ಭಕ್ತಿ ಜೀವನಕ್ಕೆ ತನ್ನನ್ನು ಮೀಸಲು ಮಾಡಿದ್ದರ ಸೂಚನೆ ಶತಕಗಳಲ್ಲಿದೆ.

**ಕೆರೆಯ ಪದ್ಮರಸ**

ರಾಘವಾಂಕ ಹರಿಹರರ ಸಮಕಾಲೀನ. ಬೇಲೂರಲ್ಲಿ ಒಂದು ಕೆರೆಯನ್ನು ಕಟ್ಟಿಸಿದ್ದರಿಂದ ಇವನು ಕೆರೆಯ ಪದ್ಮರಸನಾದ. ಇವನು ಸಕಲೇಶ ಮಾದರಸನ ಮೊಮ್ಮಗ. ಹೊಯ್ಸಳ ನರಸಿಂಹ ಬಲ್ಲಾಳನಲ್ಲಿ ದಂಡೇಶನೂ ಮಂತ್ರಿಯೂ ಆಗಿದ್ದ. ಇವನು ರಚಿಸಿರುವ ಕೃತಿ "ದೀಕ್ಷಾಬೋಧೆ" ಇವರಲ್ಲಿ ವೀರಶೈವ ದೀಕ್ಷೆಯನ್ನು ಕೈಗೊಳ್ಳುವುದಕ್ಕೆ ಬೇಕಾದ ವಿಷಯಗಳು ಗುರು ಶಿಷ್ಯ ಸಂವಾದ ರೂಪದಲ್ಲಿ ವಿವರಿಸಲ್ಪಟ್ಟಿವೆ.

**ರಾಘವಾಂಕ**

ರಾಘವಾಂಕನು ಹೊಯ್ಸಳ ವೀರ ನರಸಿಂಹನು ರಾಜ್ಯವಾಳುತ್ತಿದ್ದಾಗ ದ್ವಾರಸಮುದ್ರಕ್ಕೆ ಹೋಗಿ ಪದ್ಮರಸ ದಂಡನಾಯಕನ ಆಶ್ರಯದಲ್ಲಿ ಕೆಲವು ದಿನ ಇದ್ದು ಹಂಪೆಗೆ ಹಿಂತಿರುಗಿದ. ಮಹದೇವಭಟ್ಟ-ರುದ್ರಾಣಿ ತಂದೆತಾಯಿಗಳು. ಹರಿಹರ ಇವನ ಗುರು. ಇವನ ರಚಿಸಿರುವ ಕೃತಿಗಳು ಹರಿಶ್ಚಂದ್ರ ಕಾವ್ಯ, ಸೋಮನಾಥ ಚರಿತೆ, ವೀರೇಶ ಚರಿತೆ, ಸಿದ್ಧರಾಮ ಚರಿತೆ. ಷಟ್ಪದಿ ಗ್ರಂಥಕಾರರಲ್ಲಿ ಮೊದಲಿಗ. ವೀರಶೈವ ಕವಿ. ಹರಿಶ್ಚಂದ್ರ ಕಾವ್ಯದಿಂದ ಇಲ್ಲಿನ ಪದ್ಯಗಳನ್ನು ಆಯ್ಕೆ ಮಾಡಲಾಗಿದೆ. ಉತ್ತಮ ಸಂಭಾಷಣೆ, ನಾಟಕೀಯತೆ ಹರಿಶ್ಚಂದ್ರ ಕಾವ್ಯದ ಪ್ರಮುಖ ಲಕ್ಷಣ.

**ಕುಮಾರ ವ್ಯಾಸ**

ಕನ್ನಡದ ಶ್ರೇಷ್ಠ ಕವಿಗಳಲ್ಲಿ ಒಬ್ಬ. ಸಮಗ್ರ ಭಾರತವನ್ನು ಪಂಪನ ಅನಂತರ ರಚಿಸಿದ ಕವಿ ಎಂದರೆ ಕುಮಾರವ್ಯಾಸ. ಮಹಾಭಾರತದ ಹದಿನೆಂಟು ಪರ್ವಗಳಲ್ಲಿ ಹತ್ತು ಪರ್ವಗಳನ್ನು ಮಾತ್ರ ರಚಿಸಿದ್ದಾನೆ. ಗದಗು ಪ್ರಾಂತದ ಕೋಳೀವಾಡ ಇವನ ಸ್ಥಳ. ಭಾಗವತ ಸಂಪ್ರದಾಯಕ್ಕೆ ಸೇರಿದವ. ನಾರಣಪ್ಪ ಇವನ ನಿಜ ನಾಮಧೇಯ. "ಗದುಗಿನ ಭಾರತ" ಎನ್ನಿಸಿದ ಕರ್ನಾಟಕ ಭಾರತ ಕಥಾಮಂಜರಿ ಮಹತ್ಕೃತಿಗಳಲ್ಲಿ ಒಂದು.

## ಚಾಮರಸ

ನಾಗಣಾಪುರ ಅಥವಾ ಗದಗು ಇವನ ಊರು. ವೀರಶೈವ ಕವಿ. ರಚಿಸಿರುವ ಕೃತಿ "ಪ್ರಭುಲಿಂಗಲೀಲೆ". ವೀರಶೈವ ಧರ್ಮ ಪ್ರತಿಪಾದಕರಲ್ಲಿ ಅಗ್ರಗಣ್ಯನಾದ ಅಲ್ಲಮಪ್ರಭುವಿನ ಬದುಕು, ಸಾಧನೆಯನ್ನು ಕುರಿತ ಕಥೆ ಪ್ರಭುಲಿಂಗಲೀಲೆ.

## ಪುರಂದರದಾಸ

'ದಾಸಶ್ರೇಷ್ಠ'ನೆಂದು ಹೊಗಳಿಕೊಂಡ ಪುರಂದರದಾಸ ಹಿರಿಯ ಹಾಡುಗಾರ, ಭಕ್ತ. ಮೊದಲು ಸಿರಿವಂತನಾಗಿದ್ದು ಯಾವುದೋ ಒಂದು ಪ್ರಸಂಗದಲ್ಲಿ ಎಲ್ಲವನ್ನು ದಾನ ಮಾಡಿ ವಿರಕ್ತನಾದ. ಅಸಂಖ್ಯಾತ ಕೀರ್ತನೆಗಳನ್ನು ರಚಿಸಿದ. ಕರ್ನಾಟಕ ಸಂಗೀತಕ್ಕೆ ಇವನ ಕೊಡುಗೆ ಅಪಾರವಾದದ್ದು. ಕೃಷ್ಣಲೀಲೆ, ಸಮಾಜ ವಿಮರ್ಶೆ, ನೀತಿ ಬೋಧನೆ ಕೀರ್ತನೆಗಳ ವಸ್ತುವಾಗಿದೆ. 'ಪುರಂದರ ವಿಠಲ' ಇವನ ಕೀರ್ತನೆಗಳ ಅಂಕಿತ.

## ಕನಕದಾಸ

ಪುರಂದರದಾಸನ ಸಮಕಾಲೀನ. ಬಾಡವೆಂಬ ಹಳ್ಳಿಯಲ್ಲಿ ಕುರುಬರ ಕುಲದಲ್ಲಿ ಹುಟ್ಟಿ ಬೆಳೆದು ದಂಡನಾಯಕನಾಗಿದ್ದು, ಯಾವುದೋ ಯುದ್ಧ ಕಾಲದಲ್ಲಿ ಸಂಸಾರದ ಬಗ್ಗೆ ವಿರಕ್ತಿ ಹುಟ್ಟಿ ಭಕ್ತನಾದನೆಂದೂ ಹೇಳುತ್ತಾರೆ. ಕಾಗಿನೆಲೆಯ ಆದಿಕೇಶವ ಇವನ ಆರಾಧ್ಯ ದೈವ. ಇವನ ಕೃತಿಗಳು 'ಹರಿಭಕ್ತಿಸಾರ' 'ರಾಮಧಾನ್ಯ ಚರಿತ್ರೆ', 'ನಳಚರಿತ್ರೆ' 'ಮೋಹನ ತರಂಗಿಣಿ'. ಅನೇಕ ಕಿರ್ತನೆಗಳನ್ನು ರಚಿಸಿದ್ದಾನೆ. 'ರಾಮಧಾನ್ಯಚರಿತ್ರೆ' ಕನ್ನಡದಲ್ಲಿ ಅಪರೂಪವಾದ ಕೃತಿ. ದೇವನು ಬಡವರ ಕೈವಾರಿ, ಭಕ್ತರ ಪಕ್ಷಪಾತಿ ಎಂಬುದನ್ನು ಸೂಚಿಸುವ ರೀತಿಯಲ್ಲಿ ರಾಗಿ ಮತ್ತು ಭತ್ತಗಳ ನಡುವೆ ವಾದ ನಡೆಯಿಸಿ ಅದರಲ್ಲಿ ರಾಗಿ ಗೆದ್ದಿತೆಂದು ಅದಕ್ಕೆ 'ರಾಘವ' ಎಂದು ಹೆಸರಿಟ್ಟುದಾಗಿಯೂ ಕನಕದಾಸ ಹೇಳುತ್ತಾನೆ.

## ವಾದಿರಾಜ

ವ್ಯಾಸರಾಯನ ಸಮಕಾಲೀನನಾಗಿ ಅವನಂತೆ ವ್ಯಾಸಕೂಟ, ದಾಸಕೂಟ ಎರಡ ರಲ್ಲಿಯೂ ಹೆಸರಾದವನು. ಸೋದೆಮಠದ ಸ್ವಾಮಿಯಾದ ವಾದಿರಾಜತೀರ್ಥ ವ್ಯಾಸರಾಯನಂತೆ ನ್ಯಾಯ ವೇದಾಂತಗಳಲ್ಲಿ ಪರಿಣತನಾದ. ಹಲವಾರು ಕೀರ್ತನೆ ಮತ್ತು ಸುಳಾದಿ ಉಗಾಭೋಗಗಳನ್ನು ರಚಿಸಿದ್ದಾನೆ.

## ರತ್ನಾಕರ

೧೬ನೇ ಶ.ದ ಮಧ್ಯಭಾಗದಲ್ಲಿ ವಿಜಯನಗರ ಸಾಮ್ರಾಜ್ಯವು ತನ್ನ ವೈಭವ ಶಿಖರ ವನ್ನು ಮುಟ್ಟಿ ಇಳಿಮುಖಕ್ಕೆ ಹತ್ತಿರ ಬಂದಾಗ ಇವನು ಪಶ್ಚಿಮ ಕರಾವಳಿಯ

ಮೂಡಬಿದಿರೆಯಲ್ಲಿ ಹುಟ್ಟಿ ಬೆಳೆದನು. ಜೈನ ಕವಿ ರತ್ನಾಕರನ ಕೃತಿಗಳೆಂದರೆ 'ತ್ರಿಲೋಕ ಶತಕ' 'ಅಪರಾಜಿತೇಶ್ವರ ಶತಕ' 'ರತ್ನಾಕರಾಧೀಶ್ವರ ಶತಕ' 'ಭರತೇಶ ವೈಭವ' ಮತ್ತು ಹಾಡುಗಳು.

**ಸರ್ವಜ್ಞ**

ಅನುಭವ ಶಾಲಿ, ಸತ್ಯ ಪ್ರೇಮಿ, ಖಂಡಿತವಾದಿ, ವಿಶಾಲ ಮನಸ್ಸಿನ ವಿರಕ್ತ ಮತ್ತು ವಿವೇಕಿ. ಸುಮಾರು ನಾನೂರಕ್ಕೂ ಹೆಚ್ಚು ತ್ರಿಪದಿಗಳನ್ನು ರಚಿಸಿದ್ದಾನೆ.

**ಹೊನ್ನಮ್ಮ**

ಸಿಂಗಿರಾರ್ಯನ ಶಿಷ್ಯೆ. ಅರಸಿಯ ಊಳಿಗದಲ್ಲಿದ್ದು ವಿದ್ಯೆ ಇಲ್ಲದಿದ್ದರೂ, ಬುದ್ಧಿ ಇರುವ ಹೆಂಗಸು. ಚಿಕ್ಕದೇವರಾಯನ ಸಂಚಿಯ ಹೊನ್ನಮ್ಮನಾಗಿ, ರಾಯನ ಪ್ರೇರಣೆ ಯಿಂದ ಸಿಂಗಿರಾರ್ಯನಲ್ಲಿ ವ್ಯಾಸಂಗ ಮಾಡಿ ಹದಿಬದೆಯ ಧರ್ಮವೆಂಬ ನೀತಿ ಕಾವ್ಯ ವನ್ನು ರಚಿಸಿದಳು.

**ಕಡಕೋಳ ಮಡಿವಾಳಪ್ಪ** (೧೭೬೧-೧೮೩೧)

ಶಿಶುನಾಳ ಷರೀಫರಂತೆ ಆಧ್ಯಾತ್ಮ ವ್ಯಕ್ತಿಯಾಗಿದ್ದ ಇವರು ಕಲ್ಬುರ್ಗಿ ಜಿಲ್ಲೆಯವರು. ನೂರಾರು ಅನುಭಾವ ಗೀತೆಗಳನ್ನು ರಚಿಸಿದ್ದಾರೆ. ಕೆಳಜಾತಿಗೆ ಸೇರಿದ ಮಡಿವಾಳಪ್ಪ ನವರನ್ನು ಪೂಜಾರಿಗಳು ಗುಡಿಗೆ ಸೇರಿಸಲಿಲ್ಲವಂತೆ. ಆಗ ಅವರು "ಯಾವುದು ಮಡಿಚಟ್ಟು" ಗೀತೆಯನ್ನು ರಚಿಸಿದರೆಂದು ಹೇಳಲಾಗಿದೆ. ಶಿಶುನಾಳರ ಗೀತೆ ಗಳಂತೆಯೇ ಶರಣ ಮಡಿವಾಳಪ್ಪನವರ ಗೀತೆಗಳೂ ಜನರ ಬಾಯಲ್ಲಿ ಉಳಿದುಕೊಂಡು ಬಂದಿವೆ.

**ಬಾಲಲೀಲಾ ಮಹಂತ ಶಿವಯೋಗಿ** (೧೮೨೩-೧೮೫೮)

ವೀರಶೈವ ಸನ್ಯಾಸಿಯಾಗಿದ್ದ ಇವರು ೧೮೪೩ರಲ್ಲಿ "ಕೈವಲ್ಯ ದರ್ಪಣ" ಎಂಬ ಗ್ರಂಥ ರಚಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರು ಇವರ ಮಠಕ್ಕೆ ನೀಡಿದ ರಾಜ ಸನ್ಮಾನವನ್ನು ನಿರಾಕರಿಸಿ, ಅದನ್ನು ಕುರಿತು ಬರೆದ ಕಾವ್ಯದ ಕೆಲವು ಭಾಗಗಳು ಇಲ್ಲಿವೆ. ಕರ್ನಾಟಕದ ಮಠಗಳ ಇತಿಹಾಸದಲ್ಲಿ ರಾಜಾಶ್ರಯವನ್ನು ತಿರಸ್ಕರಿಸಿದ ಘಟನೆ ತುಂಬ ಅಪರೂಪವಾದುದು.

**ಕಂಬಿ ಬಸವಾರ್ಯ** (೧೮೭೫-೧೯೨೦)

ಕಿತ್ತೂರು, ನೇಗಿನಹಾಳಗಳಲ್ಲಿ ಶಾಲಾಮಾಸ್ತರರಾಗಿದ್ದ ಕಂಬಿ ಬಸವಾರ್ಯರು ತಮ್ಮ ಕೃತಿಗಳಲ್ಲಿ ಪ್ರದರ್ಶಿಸಿರುವ ಸಾಮಾಜಿಕ ಎಚ್ಚರ, ಕನ್ನಡದ ಸಂದರ್ಭದಲ್ಲಿ ಅಪರೂಪ

ವಾದದು. ವ್ಯಾಪಾರಿಯ ಬಗ್ಗೆ, ಆಧುನಿಕ ಜಂಗಮನ ಬಗ್ಗೆ ಇವರು ವಿಡಂಬನಾತ್ಮಕವಾಗಿ ಬರೆದಿರುವ ಪದ್ಯಗಳು ಕನ್ನಡದಲ್ಲೇ ವಿಶಿಷ್ಟವಾದವು. ಮುಪ್ಪಿನ ಮುದುಕನೊಬ್ಬನಿಗೆ ಚಿಕ್ಕ ಹುಡುಗಿಯನ್ನು ಕೊಟ್ಟು ಮದುವೆ ನಿಶ್ಚಯವಾದಾಗ ಅವನ್ನು ವಿರೋಧಿಸಿ ಇವರು ಬರೆದಿರುವ ಕವನವೂ ಈ ಸಂಕಲನದಲ್ಲಿದೆ. ಬಸವಾರ್ಯರ ಕೃತಿಗಳ ಅಧ್ಯಯನ ಸಾಹಿತ್ಯ ವಲಯದಲ್ಲಿ ಅವಶ್ಯಕವಾಗಿ ನಡೆಯಬೇಕಾಗಿದೆ.

**ವೀರಪ್ಪ ವೀರಭದ್ರಪ್ಪ ನಾಗಿಶೆಟ್ಟಿ** (೧೮೭೯–೧೯೫೯)

ಕಂಬಿ ಬಸವಾರ್ಯರ ಶಿಷ್ಯರಾಗಿದ್ದ ಇವರೂ ಶಾಲಾಮಾಸ್ತರರಾಗಿದ್ದರು. ಆದರೆ ಅವರಿಗಿಂತ ಹೆಚ್ಚು ಸಾಂಪ್ರದಾಯಿಕವಾದ ಭಾಷೆಯನ್ನು ಬಳಸಿದ್ದಾರೆ. ಹಣದ ಬಗ್ಗೆ ಮಾಡಿರುವ ಒಂದು ರೀತಿಯ ಹತಾಶ ವಿಡಂಬನೆ ಈ ಕೆಲವು ಪದ್ಯಗಳ ವಸ್ತುವಾಗಿದೆ.

**ದೇವಶಿಖಾಮಣಿ ಅಳಸಿಂಗರಾಚಾರ್ಯ** (೧೮೮೭–೧೯೪೦)

ಅರಮನೆ ಮತ್ತು ಸಂಪ್ರದಾಯಸ್ಥ ಸನ್ನಿವೇಶಗಳಲ್ಲಿ ಬದುಕಿದ ಅಳಸಿಂಗರಾಚಾರ್ಯರ ಕಾವ್ಯ ರಚನೆ ಮಾತ್ರ ಅಚ್ಚರಿಗೊಳಿಸುವಷ್ಟು ಸಾಮಾಜಿಕ ಎಚ್ಚರದಿಂದ ಕೂಡಿದೆ. ಇವರ 'ಶ್ರೀ ಚೆಲ್ವ ನಾರಾಯಣ ಶತಕಮ್' ಗ್ರಂಥ ೧೯೦೧ರಲ್ಲಿ ಮೊದಲಬಾರಿಗೆ ಪ್ರಕಟವಾಯಿತು. ಹಣದ ಮಹಿಮೆಯನ್ನು ತುಂಬ ಹೊಸ ಬಗೆಯಲ್ಲಿ ವರ್ಣಿಸಿರುವ ಪದ್ಯ "ಧನಹೀನಂ ಧೃತಿಹೀನಪ್ಪನದರಿಂದ" ಎಂಬುದು. ರಾಜತ್ವದ ಬಗೆಗೂ ಅವರು ಧಿಕ್ಕಾರದ ನುಡಿಗಳನ್ನು ಆಡಿದ್ದಾರೆ.

**ಪಂಜೆ ಮಂಗೇಶರಾಯ** (೧೮೭೪–೧೯೩೭)

ಹೊಸಗನ್ನಡ ಕಾವ್ಯವನ್ನು ಆರಂಭಿಸಿದ ಕೀರ್ತಿ ನಿಜವಾಗಿ ಪಂಜೆಯವರಿಗೇ ಸಲ್ಲಬೇಕು. ಇವರ ಕಾವ್ಯನಾಮ "ಕವಿಶಿಷ್ಯ". ಪಂಜೆಯವರ "ತೆಂಕಣ ಗಾಳಿಯಾಟ"ಕ್ಕೆ ಸರಿಗಟ್ಟುವ ರಚನೆಗಳು ಕನ್ನಡದಲ್ಲಿ ತೀರ ವಿರಳ. ಹೊಸಗನ್ನಡ ಕಾವ್ಯ, ತನ್ನ ಆರಂಭಕಾಲದಲ್ಲಿ ಇಂಗ್ಲೀಷ್ ಪ್ರಭಾವ ಮತ್ತು ನಿಸರ್ಗದ ನಡುವೆ ಬೆಳೆಯುತ್ತಿದ್ದಾಗ ಪಂಜೆಯವರು ಬರೆದ "ಏನ ಬೇಡಲಿ ನಿನ್ನ" ಮತ್ತು "ಹೊಲೆಯನ ಹಾಡು" ಮುಂತಾದ ಪದ್ಯಗಳು ನಿಜಕ್ಕೂ ಕಾವ್ಯದ ಬಗ್ಗೆ ಅವರಿಗಿದ್ದ ಹೊಸ ದೃಷ್ಟಿಕೋನವನ್ನು ತೋರಿಸುತ್ತವೆ. ಮುಂದೆ, ಕನ್ನಡ ಕಾವ್ಯ ಪಂಜೆಯವರ ದಾರಿಯನ್ನು ಹಿಡಿದಿದ್ದರೆ ಅದರ ದಿಕ್ಕೇ ಬೇರೆಯಾಗಿರುತ್ತಿತ್ತು. ಮೊದಲು ಕನ್ನಡ ಅಧ್ಯಾಪಕರಾಗಿದ್ದು, ನಂತರ ಮಡಿಕೇರಿ ಮುಂತಾದ ಕಡೆಗಳಲ್ಲಿ ಶಾಲಾ ಇನ್ಸ್‌ಪೆಕ್ಟರ್ ಆಗಿದ್ದ ಅವರು ಶಿಶುಸಾಹಿತ್ಯಕ್ಕೆ ನೀಡಿದ ಕಾಣಿಕೆಯೂ ಸಣ್ಣದಲ್ಲ.

**ಮಂಜೇಶ್ವರ ಗೋವಿಂದ ಪೈ** (೧೮೮೩–೧೯೬೩)

ಸಾಹಿತ್ಯ ರಚನೆಯಲ್ಲದೆ ಸಂಶೋಧನೆ ಮತ್ತು ವಿಮರ್ಶೆಯ ಕ್ಷೇತ್ರಗಳಲ್ಲೂ ಗಣನೀಯ ಕಾರ್ಯವನ್ನು ಮಾಡಿರುವ ಗೋವಿಂದ ಪೈಗಳು ಕಾವ್ಯ ರಚನೆಯಲ್ಲಿ ಕೆಲವು ಹೊಸ ಪ್ರಯೋಗಗಳನ್ನು ಮಾಡಿದರು. 'ರಾಷ್ಟ್ರಕವಿ' ಪಟ್ಟವನ್ನೂ ಪಡೆದಿದ್ದಾರೆ.

**ಮಾಸ್ತಿ ವೆಂಕಟೇಶ ಅಯ್ಯಂಗಾರ್** (೧೯೮೧)

ಕನ್ನಡದ ಸಣ್ಣ ಕಥೆಗಳ ಪ್ರವರ್ತಕರೆನಿಸಿರುವ 'ಶ್ರೀನಿವಾಸರು' ಕವಿ, ಕಾದಂಬರಿಕಾರ ಮತ್ತು ನಾಟಕಕಾರರಾಗಿಯೂ ಪ್ರಸಿದ್ಧರು. ಆದರೆ ಅವರ ಕಥೆಗಳು ಮತ್ತು ಕಾದಂಬರಿಗಳಲ್ಲಿ ಕಂಡು ಬರುವ ಕೆಲವು ವೈಶಿಷ್ಟ್ಯಗಳು ಅವರ ಕಾವ್ಯದಲ್ಲಿ ಇಲ್ಲವೆಂದೇ ಹೇಳಬೇಕು. ಒಟ್ಟಾರೆ ಮಾಸ್ತಿಯವರ ಕಾವ್ಯದಲ್ಲಿ ಜೀವನಪರವಾದ ಒಲವು ಕಂಡುಬಂದರೂ, ದೇಶಪ್ರೇಮ, ಸಾಮಾಜಿಕ ಎಚ್ಚರ ಇವುಗಳ ಕೊರತೆಯಿದೆ ಎಂದೇ ಹೇಳಬಹುದು. ಅವರು ಅಲಂಕರಿಸಿದ್ದ ಸರ್ಕಾರಿ ಉನ್ನತಹುದ್ದೆ, ಸ್ವಾತಂತ್ರ್ಯ ಹೋರಾಟದ ಬಗ್ಗೆ ಅವರು ಪರವಾದ ನಿಲುವು ತಳೆಯದಂತೆ ಮಾಡಿರಬಹುದು. 'ಎಂದು ತಿಳಿವುದೋ ಮನುಜಕುಲ' ಅವರ ಪ್ರಸಿದ್ಧ ಪದ್ಯಗಳಲ್ಲೊಂದಾಗಿದೆ

**ವಿ. ಸೀತಾರಾಮಯ್ಯ** (೧೯೮೯)

ಅರ್ಥಶಾಸ್ತ್ರ, ರಾಜ್ಯಶಾಸ್ತ್ರಗಳಲ್ಲಿ ಪ್ರವೀಣರಾದ ಅಪರೂಪದ ಸಾಹಿತಿ. "ಅಭೀಃ" ಕನ್ನಡದ ಒಳ್ಳೆಯ ಕವನಗಳಲ್ಲಿ ಎದ್ದುಕಾಣುವಂತದು. ಅದು ಮತ್ತು ಕ್ರೋಧ ಕೇತನ ಎರಡರಲ್ಲೂ ವಿ. ಸೀ. ಅವರು ಸ್ಪಷ್ಟವಾದ ವರ್ಗಪ್ರಜ್ಞೆಯನ್ನು ತೋರಿದ್ದಾರೆ. ಈ ಎಚ್ಚರ ಆ ಕವನಗಳ ಭಾಷೆಯನ್ನೂ ಉತ್ಸಾಹಲಯದಲ್ಲಿಟ್ಟಿದೆ.

**ಆದ್ಯ ರಂಗಾಚಾರ್ಯ**

ವ್ಯವಸ್ಥೆಯ ಹಲವಾರು ಲೋಪದೋಷಗಳನ್ನು ಸಮರ್ಥವಾಗಿ ನಾಟಕಗಳ ಮೂಲಕ ವಿಡಂಬಿಸಿದ ಶ್ರೀರಂಗರ ವೈಶಿಷ್ಟ್ಯ ಎಂದರೆ, ಅವರು ಸಾಹಿತ್ಯ ರಚನೆಯ ಆರಂಭ ಕಾಲದಲ್ಲಿ ರೂಪಿಸಿಕೊಂಡಿದ್ದ ವೈಚಾರಿಕ ದೃಷ್ಟಿಕೋನವನ್ನೇ ಇಂದಿನವರೆಗೂ ಉಳಿಸಿಕೊಂಡು ಬಂದಿರುವುದು. ಅನೇಕ ಹಿರಿಯ ಕನ್ನಡ ಸಾಹಿತಿಗಳ ವಿಚಾರದಲ್ಲಿ ಈ ಮಾತು ಹೇಳುವಂತಿಲ್ಲ ಎನ್ನುವುದು ಗಮನಾರ್ಹ. ಅವರ ಸಾಹಿತ್ಯ ಕೃಷಿಯ ಆರಂಭಕಾಲದ ಎರಡು ಕವನಗಳು ಇಲ್ಲಿವೆ.

**ದತ್ತಾತ್ರೇಯ ರಾಮಚಂದ್ರ ಬೇಂದ್ರೆ** (೧೮೯೬–೧೯೮೧)

ಬದುಕಿನ ಎಲ್ಲ ಅನುಭವಸ್ತರಗಳಿಗೂ ತನ್ನನ್ನು ತೆರೆದುಕೊಂಡ ಈ ಕವಿ, ಸಮಾಜದೊಳಗಿರುವ ಓರೆಕೋರೆಗಳ ಬಗ್ಗೆ ಕಣ್ಣುಮುಚ್ಚಿಕೊಳ್ಳಲಿಲ್ಲ ಎಂಬುದಕ್ಕೆ ಸಾಕ್ಷಿಯಾಗಿ

ರುವ ಕೆಲವು ಕವನಗಳು ಇಲ್ಲಿವೆ. "ಭೂಮಿತಾಯಿಯ ಚೊಚ್ಚಿಲ ಮಗ" ರೈತನ ಅವಸ್ಥೆ ಅಂದಿಗೂ ಇಂದಿಗೂ ಒಂದೇ ಎಂಬುದನ್ನು ತಿಳಿಸುತ್ತದೆ. ಬೇಂದ್ರೆಯವರ "ಕುರುಡು ಕಾಂಚಾಣ" ಕನ್ನಡದ ಶ್ರೇಷ್ಠ ಕವನಗಳಲ್ಲಿ ಒಂದು.

**ಬೆಟಗೇರಿ ಕೃಷ್ಣಶರ್ಮ** (೧೯೦೦)

ಪತ್ರಕರ್ತ, ಸಾಹಿತಿ ಬೆಟಗೇರಿ ಕೃಷ್ಣಶರ್ಮರ ಕಾವ್ಯನಾಮ "ಆನಂದಕಂದ". ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಮತ್ತು ಅದು ಬಂದ ನಂತರ ಹೊಸಯುಗದ ಉದಯದ ಕನಸು ಕಂಡ ಆನಂದಕಂದರು ಬರೆದ ಎರಡು ಕವನಗಳು ಈ ಸಂಕಲನ ದಲ್ಲಿವೆ.

**ಕೆ. ವಿ. ಪುಟ್ಟಪ್ಪ** (೧೯೦೪)

ಕನ್ನಡದ ಎತ್ತರವನ್ನು ಏರಿಸಿದ ಸಾಹಿತಿಗಳಲ್ಲಿ ಒಬ್ಬರಾಗಿರುವ 'ಕುವೆಂಪು' ಅವರು ಜೀವ ನದುದ್ದಕ್ಕೂ ವೈಚಾರಿಕತೆ ಮತ್ತು ಧಾರ್ಮಿಕತೆಗಳೆರಡನ್ನೂ ಜೊತೆಯಾಗಿ ಉಳಿಸಿ ಕೊಂಡು ಬಂದವರು. ಸೋವಿಯತ್ ಕ್ರಾಂತಿಯ ಯಶಸ್ಸು ಕುವೆಂಪು ಅವರ ಅನೇಕ ಕವನಗಳಿಗೆ ಸ್ಫೂರ್ತಿ ನೀಡಿತು. "ತರುಣರಿರ ಎದ್ದೇಳಿ" ಎಂದು ಕೆಲವು ಬಿಸಿನೆತ್ತರಿನ ಕವನಗಳನ್ನು ಸಾಹಿತ್ಯಕ್ಕೆ ಕೊಟ್ಟ ಕುವೆಂಪು ಅವರ ಶೋಷಿತ ಪಕ್ಷಪಾತ ದೃಷ್ಟಿ, ಅವರ ಕೆಲವು ಕಥೆಗಳು ಮತ್ತು ಕಾದಂಬರಿಯಲ್ಲೂ ಎದ್ದು ಕಾಣುತ್ತದೆ. ಇಷ್ಟಾ ದರೂ ಕುವೆಂಪು ಅವರ ವೈಚಾರಿಕತೆ, ವೈಯಕ್ತಿಕ ನೆಲೆಯಲ್ಲಿ ವಿಹರಿಸುತ್ತದೆಯೇ ವಿನಹ ಸಂಘಟಿತ ಪ್ರಯತ್ನವನ್ನು ಒತ್ತಿಹೇಳುವುದಿಲ್ಲ.

**ರಂ. ಶ್ರೀ. ಮುಗಳಿ** (೧೯೦೬)

'ರಸಿಕರಂಗ' ಎಂಬ ಹೆಸರಿನಲ್ಲಿ ಕವನಗಳನ್ನು ರಚಿಸಿರುವ ರಂಗನಾಥ ಶ್ರೀನಿವಾಸ ಮುಗಳಿಯವರು ಸಾಹಿತ್ಯ ಚರಿತ್ರಕಾರರಾಗಿಯೂ ಪ್ರಸಿದ್ಧರು. ಅವರು 'ಅನ್ನ' ಕಾದಂಬರಿಯೊಳಗಿನ ಕವನವನ್ನು ಈ ಸಂಕಲನದಲ್ಲಿ ಸೇರಿಸಲಾಗಿದೆ.

**ವಿ. ಕೃ. ಗೋಕಾಕ್** (೧೯೦೯)

ಕನ್ನಡ ಕಾವ್ಯದಲ್ಲಿ ಹೊಸ ಪ್ರಯೋಗಗಳನ್ನು ಆರಂಭಿಸಿದ 'ವಿನಾಯಕರು' ಕಾವ್ಯದ ಧೋರಣೆಗಳು ಶುದ್ಧ ಸಾಹಿತ್ಯಕವಾಗಿರಬೇಕೆಂದು ಬಯಸುವವರು. 'ಬೆಡಗಿ' ಮತ್ತು 'ಕಲೋಪಾಸಕನಾದ ಸುಧಾರಕ' ಇದಕ್ಕೆ ಭಿನ್ನವಾದ ದೃಷ್ಟಿಯನ್ನು ಪ್ರತಿ ಪಾದಿಸುವ ಕವನಗಳು. ಗೋಕಾಕರು ಕಾದಂಬರಿಗಳು ಮತ್ತು ಪ್ರವಾಸಕಥನ ಗಳಿಂದಲೂ ಪ್ರಸಿದ್ಧರಾಗಿದ್ದಾರೆ.

**ದಿನಕರ ದೇಸಾಯಿ** (೧೯೦೯)
ದಿನಕರ ದೇಸಾಯಿಯವರು ಅವರ ಸಮಕಾಲೀನ ಕವಿಗಳಲ್ಲೆಲ್ಲ ಅತಿ ಹೆಚ್ಚು ನಿಖರವಾದ ಸಾಮಾಜಿಕ ದೃಷ್ಟಿಕೋನವನ್ನು ಪಡೆದವರು ಎಂಬುದನ್ನು ನಮ್ಮ ವಿಮರ್ಶಕರು ಅಷ್ಟಾಗಿ ಗುರುತಿಸಲಿಲ್ಲ. ಈಗ 'ಚುಟುಕಗಳ ಕವಿ' ಎಂದು ಪ್ರಸಿದ್ಧರಾಗಿದ್ದಾರೆ. ಸಮಕಾಲೀನ ರಾಜಕೀಯ ಮತ್ತು ಸಮಾಜದ ದೋಷಗಳು ಅವರ ಚುಟುಕಗಳಲ್ಲಿ ಹರಿತ ವಿಡಂಬನೆಗೆ ಗುರಿಯಾಗುತ್ತವೆ.

**ಜಿ. ಪಿ. ರಾಜರತ್ನಂ** (೧೯೦೯–೧೯೭೯)
ಭಾಷೆಯ ಬಳಕೆಯ ಮೂಲಕ ಕನ್ನಡ ಕಾವ್ಯದಲ್ಲಿ ವೈಶಿಷ್ಟ್ಯಪೂರ್ಣವಾದ ಸ್ಥಾನವನ್ನು ಗೆದ್ದುಕೊಂಡ ರಾಜರತ್ನಂ ಅವರು ಕನ್ನಡ ಕಾವ್ಯದಲ್ಲಿ ಮೊದಲಬಾರಿಗೆ ಕೆಳವರ್ಗದ ನಾಯಕನನ್ನು ಪರಿಚಯಿಸಿದರು. ಅವರ ರತ್ನ ಮತ್ತು ನಾಗ, ನಮ್ಮ ಸಮಾಜದ ಕೆಳವರ್ಗದವರ ಎಲ್ಲ ಆಶೋತ್ತರಗಳು ಮತ್ತು ದೌರ್ಬಲ್ಯಗಳ ಪ್ರತಿನಿಧಿಗಳು. ಈ ಸಂಕಲನದಲ್ಲಿರುವ ಪದ್ಯಗಳು, ರಾಜರತ್ನಂ ಅವರು ವರ್ಗಸಮಾಜದ ರೀತಿ ನೀತಿಗಳನ್ನು ಸ್ಪಷ್ಟವಾಗಿ ಅರ್ಥೈಸಿಕೊಂಡಿದ್ದರು ಎಂಬುದನ್ನು ತೋರಿಸುತ್ತವೆ. ಅವರ 'ನಾಡಿನ ಬಡವ ಸರ್ಕಸ್ ಸಿಮ್ಮ' ಕನ್ನಡದಲ್ಲಿ ಅನನ್ಯವಾದ ಪದ್ಯ ಎನ್ನಬಹುದು.

**ಪೇಜಾವರ ಸದಾಶಿವರಾಯ** (೧೯೧೩–೧೯೩೯)
ಇಂಜಿನಿಯರಿಂಗ್‌ನಲ್ಲಿ ಶಿಕ್ಷಣ ಪಡೆದಿದ್ದ ಸದಾಶಿವರಾಯರು ಉನ್ನತ ವ್ಯಾಸಂಗಕ್ಕಾಗಿ ವಿದೇಶಕ್ಕೆ ತೆರಳಿದ ಕೆಲಸಮಯದಲ್ಲೇ ಮೃತರಾದರು. 'ಕಮ್ಮಾರ' ಕವನ, ವೃತ್ತಿಜೀವಿಯೊಬ್ಬನ ದೃಷ್ಟಿಕೋನದಲ್ಲಿ ಆದ ಬದಲಾವಣೆಯನ್ನು ಸೊಗಸಾಗಿ ನಿರೂಪಿಸುತ್ತದೆ.

**ಅಮ್ಮೆಂಬಳ ಶಂಕರನಾರಾಯಣ ನಾವಡ**
ಹಲವಾರು ಕವನಗಳು ಮತ್ತು ಲೇಖನಗಳನ್ನು ಬರೆದಿರುವ ಶಂಕರನಾರಾಯಣ ನಾವಡರು ಇತಿಹಾಸ ಪ್ರಸಿದ್ಧವಾಗಿರುವ ಕೋಮುಗಲಭೆಯ ಸಂದರ್ಭದಲ್ಲಿ ಬರೆದ ಕವನ ಈ ಸಂಕಲನದಲ್ಲಿದೆ. ಅವರ 'ರೈತರ ಹಾಡು'ವಿನ ರೈತನ ಸ್ಥಿತಿಗತಿ ಈಗಲೂ ಬೇರೆಯಾಗಿಲ್ಲ.

**ಕಯ್ಯಾರ ಕಿಞ್ಞಣ್ಣ ರೈ** (೧೯೧೫)
ಕನ್ನಡದ ಗಡಿಪ್ರದೇಶದಲ್ಲಿ ಅಧ್ಯಾಪಕರಾಗಿದ್ದ ಕಯ್ಯಾರ ಕಿಞ್ಞಣ್ಣರೈ ಅವರ ಅನೇಕ ಕೃತಿಗಳು ಪ್ರಕಟವಾಗಿವೆ. ಈ ಸಂಕಲನದಲ್ಲಿರುವ 'ಉಪವಾಸ' ಬರಗಾಲದ ಸಮಯದಲ್ಲಿ ಬರೆದದ್ದು.

**ಬಿ. ಹೆಚ್. ಶ್ರೀಧರ** (೧೯೧೧)

ಸಂಸ್ಕೃತ ಪ್ರಾಧ್ಯಾಪಕರಾಗಿದ್ದ ಬಿ. ಹೆಚ್. ಶ್ರೀಧರ ಅವರು ಕನ್ನಡ ಕಾವ್ಯ ರಚನೆಯನ್ನು ಹವ್ಯಾಸವನ್ನಾಗಿ ಇರಿಸಿಕೊಂಡವರು. ಈ ಸಂಕಲನದಲ್ಲಿರುವ 'ಉಪವಾಸ' ಕವನ ಬಂಗಾಲದ ಬರಗಾಲದ ಸಮಯದಲ್ಲಿ ಬರೆದದ್ದು.

**ಎಂ. ವಿ. ಸೀತಾರಾಮಯ್ಯ**

'ರಾಘವ' ಎಂಬ ಹೆಸರಿನಲ್ಲಿ ಸಾಹಿತ್ಯ ರಚಿಸಿರುವ ಎಂ. ವಿ. ಸೀ. ಅವರು ಸಂಶೋಧನೆಯ ಕ್ಷೇತ್ರದಲ್ಲೂ ಕೆಲಸ ಮಾಡಿದ್ದಾರೆ. ಈಗಲೂ ಕನ್ನಡದ ಕೆಲಸಕ್ಕಾಗಿ ದುಡಿಯುತ್ತಿದ್ದಾರೆ. ಈ ಸಂಕಲನದಲ್ಲಿರುವ ಕವನಗಳು ಬಡವರ ಪರವಾದ. ಸಹಾನುಭೂತಿ ಮಿಶ್ರಿತವಾದ ರಚನೆಗಳು. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಯು.ಜಿ.ಸಿ. ಪ್ರಾಧ್ಯಾಪರಾಗಿದ್ದ ಅವರು ಈಗ ವಿಶ್ರಾಂತರಾಗಿದ್ದಾರೆ.

**ಜಿ. ವರದರಾಜರಾವ್** (೧೯೧೮)

ಮೈಸೂರು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದ ವರದರಾಜರಾಯರು ತಮ್ಮ ಸಾಹಿತ್ಯ ರಚನೆಯ ಆರಂಭಕಾಲದಲ್ಲಿ ಬರೆದ ಎರಡು ಕವನಗಳು ಇಲ್ಲಿವೆ. 'ಜ್ವಾಲಾಮುಖಿ' ಕವನ ಎಚ್ಚರಿಕೆ ನೀಡುವ ಧೋರಣೆಯಲ್ಲಿದ್ದರೆ, 'ಕ್ರಾಂತಿಪಲ್ಲವಿ' ಹೆಚ್ಚು ಭಾವನಾತ್ಮಕವಾಗಿದೆ.

**ಸಿದ್ಧಯ್ಯ ಪುರಾಣಿಕ** (೧೯೧೮)

ಉನ್ನತ ಸರ್ಕಾರಿ ಹುದ್ದೆಯಿಂದ ನಿವೃತ್ತರಾಗಿರುವ ಸಿದ್ಧಯ್ಯ ಪುರಾಣಿಕರು ಬಹು ಹಿಂದೆ ಬರೆದ ಪದ್ಯ ಇದು. ಶ್ರೀಮಂತ–ಬಡವ ಭೇದವನ್ನು ಸೈರಿಸದೆ ಬಡವರ ಯುಗ ಬರಲಿದೆ ಎಂದು ಎಚ್ಚರಿಸಿ ಆದನ್ನು ಆಶಿಸುವ ಈ ಪದ್ಯದಲ್ಲಿ "ಹೆಚ್ಚಿನ ಧನ ಹೆಚ್ಚಿನ ಹಣ ರಾಷ್ಟ್ರದ ಆಸ್ತಿ" ಎಂಬ ಸಮತಾವಾದಿ ಧೋರಣೆಯೂ ಕಂಡುಬಂದಿದೆ.

**ಕೆ. ಎಸ್. ನರಸಿಂಹಸ್ವಾಮಿ** (೧೯೧೫)

ಕನ್ನಡದ ಹೆಸರಾಂತ ಕವಿಗಳಲ್ಲಿ ಒಬ್ಬರಾದ ಕೆ. ಎಸ್. ನ. ಅವರು ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳಲ್ಲೂ ಯಶಸ್ಸು ಪಡೆದವರು. 'ಕೇಳುವರಿಲ್ಲದ ಮಗು' ಕವನದಲ್ಲಿ ಕೆ. ಎಸ್. ನ. ಅವರ ಲಾಲಿತ್ಯಪೂರ್ಣವಾದ ಭಾಷೆಯೇ ದುರಂತವನ್ನು ತೆರೆದಿಡುತ್ತದೆ. 'ಬಿರಿಗೊಡಗಳಿಗೆ ಸಮಾಧಾನ' ಕನ್ನಡದ ಪ್ರಸಿದ್ಧ ಪದ್ಯಗಳಲ್ಲಿ ಒಂದು.

**ಹೆಚ್. ಬಿ. ಕುಲಕರ್ಣಿ** (೧೯೧೬)

ಹೇಮಂತ ಎಂಬ ಹೆಸರಿನಲ್ಲಿ ಕಾವ್ಯ ರಚಿಸಿರುವ ಹನುಮಂತ ಬಲವಂತರಾವ್ ಕುಲಕರ್ಣಿಯವರು ಈಗ ಅಮೇರಿಕೆಯಲ್ಲಿ ನೆಲೆಸಿದ್ದಾರೆ.

**ಎಂ. ಗೋಪಾಲಕೃಷ್ಣ ಅಡಿಗ** (೧೯೧೮)

ಕಟ್ಟುವೆವು ನಾವು ಹೊಸನಾಡೊಂದನು ಎಂಬ ಕನಸುಗಳ ಕಾಲದಲ್ಲಿ ಅಡಿಗರು ರಚಿಸಿದ್ದ, ಎಲ್ಲ ದೃಷ್ಟಿಗಳಿಂದಲೂ ಅನನ್ಯವಾದ ಕೆಲವು ಕವನಗಳು ಈ ಸಂಕಲನದಲ್ಲಿವೆ. ಅವರ ಇತ್ತೀಚಿನ 'ನಿನ್ನ ಗದ್ದೆಗೆ ನೀರು' ಕೂಡ ಗಮನಾರ್ಹವಾದ ಕವನ.

ನವ್ಯಕಾವ್ಯದ ಪ್ರವರ್ತಕರೆನಿಸಿರುವ ಗೋಪಾಲಕೃಷ್ಣ ಅಡಿಗರ ಆರಂಭದ ರಚನೆಗಳ ವೈಚಾರಿಕ ಧೋರಣೆಗೂ ಅವರ ಹೊಸಪಂಥದ ರಚನೆಗಳ ಧೋರಣೆಗೂ ವ್ಯತ್ಯಾಸವಿದೆ. ಅನೇಕ ವೈಚಾರಿಕ ಲೇಖನಗಳೂ ಅಡಿಗರ ಲೇಖನಿಯಿಂದ ಹೊರಬಿದ್ದಿವೆ.

**ರಾಮಚಂದ್ರ ಕೊಟ್ಟಲಗಿ** (೧೯೧೮–೧೯೭೫)

ಬಿಜಾಪುರ ಜಿಲ್ಲೆಯ ಈ ಕವಿ ಪ್ರಗತಿಶೀಲ ಧೋರಣೆಯ ಪ್ರಭಾವದಿಂದ ರಚಿಸಿದ ಕವನಗಳು ಈ ಸಂಕಲನದಲ್ಲಿವೆ. 'ರಾಜಪಿಂಡಕ್ಕಿನ್ನು ಕ್ಷೇಮವಿಲ್ಲ' ಅತ್ಯಂತ ಉತ್ಸಾಹದಿಂದ ಕೂಡಿದ ಕವನ. 'ಪುತ್ರೋಽಹಂ ಪೃಥಿವ್ಯಾಃ' ರೈತನ ಬಗ್ಗೆ ಭಾವೋದ್ವೇಗದಿಂದ ಸಹಾನುಭೂತಿ ಸೂಚಿಸುತ್ತದೆ–ನಂತರ ಅವರು ಎಚ್ಚರಗೊಳ್ಳುವುದನ್ನು ಹೇಳುತ್ತದೆ.

**ವಿ. ಜಿ. ಭಟ್ಟ** (೧೯೨೩)

ವಿಷ್ಣು ಗೋವಿಂದಭಟ್ಟರ ಕವನಗಳ ಮುಖ್ಯ ನೆಲೆ ವಿಡಂಬನೆ ಮತ್ತು ವೈಚಾರಿಕತೆ. 'ಆತ್ಮಶೋಧನೆ' ಕವನವಂತೂ ತುಂಬ ವಿಶಿಷ್ಟವಾದದು. ಭಟ್ಟರ ಚುಟುಕರೂಪದ ಕವನಗಳು ತುಂಬ ಜನಪ್ರಿಯವಾಗಿವೆ. ಈಗ ಅವರು ಮುಂಬಯಿಯಲ್ಲಿ ನೆಲೆಸಿದ್ದಾರೆ.

**ಜೋಗಳೇಕರ ಪಾಂಡುರಂಗರಾಯ**

ಪ್ರಗತಿಶೀಲ ಧೋರಣೆಗಳಿಂದ ಪ್ರಭಾವಿತರಾಗಿದ್ದ ಜೋಗಳೇಕರ ಪಾಂಡುರಂಗರಾಯರು ಸಾಮಾಜಿಕ ಎಚ್ಚರವುಳ್ಳ ಕೆಲವು ವಚನಗಳನ್ನು ಬರೆದಿದ್ದಾರೆ. ವಚನಗಳ ಅಂಕಿತ 'ಮರ್ಮಜ್ಞ'.

**ಕೋ. ಚೆನ್ನಬಸಪ್ಪ** (೧೯೨೨)

ಚೆನ್ನಬಸಪ್ಪನವರು ತಾರುಣ್ಯದಲ್ಲಿ ಪ್ರಗತಿಶೀಲ ಚಳುವಳಿಯಿಂದ ಪ್ರಭಾವಿತರಾಗಿ ಬರೆದಿದ್ದ ಕವನಗಳಲ್ಲಿ ಎರಡು ಈ ಸಂಕಲನದಲ್ಲಿವೆ. ಅವರ ನಂತರದ ಬರವಣಿಗೆ

ಬೇರೆ ದಾರಿ ಹಿಡಿಯಿತು. ಈಗ ಆಧ್ಯಾತ್ಮಪರವಾದ ಬರಹಗಳನ್ನೂ ಅವರು ಬರೆದಿದ್ದಾರೆ. ಅವರು ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಈಗ ನಿವೃತ್ತರಾಗಿದ್ದಾರೆ.

**ಗಂಗಾಧರ ಚಿತ್ತಾಲ** (೧೯೨೩)

ಮುಂಬಯಿಯಲ್ಲಿ ಉನ್ನತ ಅಧಿಕಾರಿಯಾಗಿರುವ ಗಂಗಾಧರ ಚಿತ್ತಾಲರು ಹಳ್ಳಿಯಲ್ಲಿ ಹುಟ್ಟಿ ಬೆಳೆದವರಾದರೂ ಮುಖ್ಯವಾಗಿ ಪಟ್ಟಣ ಪ್ರಜ್ಞೆಯುಳ್ಳ ಕವಿ. ಅವರ ಎರಡು ಹಳೆಯ ಕವನಗಳು ಈ ಸಂಕಲನದಲ್ಲಿ ಸೇರಿವೆ.

**ಎಲ್. ಆರ್. ಹೆಗಡೆ** (೧೯೨೩)

ಜನಪದ ಸಾಹಿತ್ಯದಲ್ಲಿ ತುಂಬ ಆಸಕ್ತರಾಗಿರುವ ಎಲ್. ಆರ್. ಹೆಗಡೆಯವರ 'ರಂಪಣಿ ದೋಣಿ' ಮೀನುಗಾರರ ಹಾಡಿನ ಧಾಟಿಯಲ್ಲಿದೆ ; ಅವರ ಕಷ್ಟಗಳನ್ನು ತುಂಬ ಚುರುಕು ಮಾತುಗಳಲ್ಲಿ ಬಣ್ಣಿಸುತ್ತದೆ.

**ಸು. ರಂ. ಎಕ್ಕುಂಡಿ** (೧೯೨೩)

ಸುಬ್ಬಣ್ಣ ರಂಗನಾಥ ಎಕ್ಕುಂಡಿಯವರು ಹೊಸಕಾವ್ಯದ ಗಮನಾರ್ಹ ಕವಿಗಳಲ್ಲಿ ಒಬ್ಬರಾಗಿದ್ದಾರೆ.

**ಎಂ. ಅಕಬರ ಅಲಿ** (೧೯೨೫)

ಮೈಸೂರು ವಿಶ್ವವಿದ್ಯಾಲಯದ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ಅಧ್ಯಾಪಕ ರಾಗಿರುವ ಅಕಬರ ಅಲಿಯವರು ಚುಟುಕಗಳಲ್ಲೂ ಪ್ರಸಿದ್ಧರು. 'ದುಡಿಮೆಗಾರರು' ಕವನ, ಕವಿಯ ಧೋರಣೆಯನ್ನು ಚಿತ್ರಿಸುತ್ತದೆ.

**ವೈ. ಎಸ್. ಲೂಯಿಸ್** (೧೯೨೧)

ವಿಜ್ಞಾನಿ ಲೂಯಿಸರ ಕಾವ್ಯ ರಚನೆಯನ್ನು ಕನ್ನಡಿಗರು ಅಷ್ಟಾಗಿ ಗಮನಿಸಿದಂತಿಲ್ಲ. ಅವರ 'ನಾಡಯುವಕನಿಗೆ' ಕವನ ತರುಣರಿಗೆ ಎಚ್ಚರತಾಳುವ ಕರೆ ನೀಡುತ್ತದೆ. ಈಗ ಅವರು ಕೇಂದ್ರ ಆಹಾರ ಸಂಶೋಧನಾಲಯದಲ್ಲಿ ಕೆಲಸ ಮಾಡುತ್ತಿದ್ದಾರೆ.

**ಬಿ. ಸಿ. ರಾಮಚಂದ್ರಶರ್ಮ** (೧೯೨೫)

ವಿದೇಶದಲ್ಲಿ ಶಿಕ್ಷಣತಜ್ಞರಾಗಿ ಕೆಲಸ ಮಾಡುತ್ತಿರುವ ರಾಮಚಂದ್ರಶರ್ಮರು ನವ್ಯ ಕಾವ್ಯದ ಪ್ರಸಿದ್ಧ ಕವಿಗಳು. 'ಎಂದಿಗೆ' ಕವನ ಕನ್ನಡದ ಒಳ್ಳೆಯ ಪದ್ಯಗಳಲ್ಲಿ ಒಂದು.

**ಕೆ. ವೆಂ. ರಾಜಗೋಪಾಲ** (೧೯೨೪)

ರಾಜಗೋಪಾಲರು ಬರೆದ ಇತ್ತೀಚಿನ ಒಂದು ಕವನ ಈ ಸಂಕಲನದಲ್ಲಿದೆ. ಕಥೆ, ವಿಮರ್ಶೆಗಳಲ್ಲೂ ರಾಜಗೋಪಾಲರು ಪ್ರಸಿದ್ಧರು. ಈಗ ಬೆಂಗಳೂರು ವಿಶ್ವ ವಿದ್ಯಾಲಯದ ಲಲಿತಕಲಾ ವಿಭಾಗದ ಮುಖ್ಯಸ್ಥರು.

**ಜಿ. ಎಸ್. ಶಿವರುದ್ರಪ್ಪ** (೧೯೨೬)

ನವೋದಯ–ನವ್ಯ ಎರಡು ಮಾರ್ಗಗಳಲ್ಲೂ ಖ್ಯಾತಿ ಪಡೆದ ಕವಿ. ಈಗ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದಾರೆ. ವಿಮರ್ಶೆ ಮತ್ತು ಕಾವ್ಯಮೀಮಾಂಸೆಗಳ ಮೇಲೆ ಕೃತಿಗಳನ್ನು ಪ್ರಕಟಿಸಿದ್ದಾರೆ. 'ಭೀಮಾಲಾಪ' ವಿಶಿಷ್ಟವಾದ ಕವನ. ಶಿವರುದ್ರಪ್ಪನವರ ಒಟ್ಟು ಕಾವ್ಯಕ್ಕೆ ನಿರ್ದಿಷ್ಟ ತಾತ್ವಿಕ ನೆಲೆ ಇಲ್ಲದಿದ್ದರೂ ಹಲವಾರು ಕವನಗಳು ಸಾಮಾಜಿಕ ಎಚ್ಚರ ದಿಂದ ಕೂಡಿವೆ.

**ಸುಬ್ರಾಯ ಚೊಕ್ಕಾಡಿ**

ಚೊಕ್ಕಾಡಿಯವರ "ಭಾರತಿಗೆ ಸುಪ್ರಭಾತ" ತುರ್ತುಪರಿಸ್ಥಿತಿ ಕಾಲದಲ್ಲಿ ಬರೆದ ಕವನ. ನವ್ಯಕಾವ್ಯ ಮಾರ್ಗದಲ್ಲಿ ಅವರು ಗಮನಾರ್ಹ ಕವಿಯಾಗಿದ್ದಾರೆ.

**ಚೆನ್ನವೀರ ಕಣವಿ** (೧೯೨೮)

ಕಾವ್ಯಮಾರ್ಗದಂತೆ ಕಾವ್ಯಧೋರಣೆಯನ್ನೂ ಕಣವಿಯವರು ಬದಲಾಯಿಸಿಕೊಳ್ಳುತ್ತ ನಡೆದವರು. ಒಟ್ಟಾರೆ ಲಿಬರಲ್ ಮನೋಧರ್ಮದ ಕವಿ. ಈಗ ಕರ್ನಾಟಕ ವಿಶ್ವ ವಿದ್ಯಾನಿಲಯದ ಪ್ರಸಾರಾಂಗದ ನಿರ್ದೇಶಕರು.

**ಜಿ. ಎಸ್. ಸಿದ್ಧಲಿಂಗಯ್ಯ** (೧೯೩೧)

ಬೆಂಗಳೂರಿನ ಮಹಾರಾಣಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾರೆ. "ಪಾಚಿಗಟ್ಟಿದ ತೀರ್ಥ" ಮತ್ತು "ಭಾರತೀಯನಿಗೆ" ಎರಡೂ ಕವನಗಳಲ್ಲಿ, ಕೊಳಕನ್ನು ತೆಗೆದು ಹೊಸದನ್ನು ಕಾಣುವ ಬಯಕೆಯಿದೆ.

**ಪಿ. ಲಂಕೇಶ್** (೧೯೩೫)

ಕನ್ನಡ ಭಾಷೆ ಕಂಡ ಅತ್ಯಂತ ಪ್ರತಿಭಾನ್ವಿತ ಸಾಹಿತಿಗಳಲ್ಲಿ ಒಬ್ಬರು. ನಾಟಕ, ಕತೆ, ಕಾದಂಬರಿ, ಕಾವ್ಯ ಈಗ ಪತ್ರಿಕೋದ್ಯಮ ಎಲ್ಲದರಲ್ಲೂ ಯಶಸ್ಸು ಇವರದು. ಲಂಕೇಶರ "ಅವ್ವ" ಕನ್ನಡದ ಒಳ್ಳೆಯ ಪದ್ಯಗಳಲ್ಲಿ ಒಂದು.

**ಕೆ. ಎಸ್. ನಿಸಾರ್ ಅಹಮದ್** (೧೯೩೬)
ವಿಜ್ಞಾನದ ಅಧ್ಯಾಪಕರಾಗಿರುವ ನಿಸಾರ್ ಅಹಮದ್ ನವ್ಯಕವಿಗಳಲ್ಲಿ ಪ್ರಮುಖರು. "ಕುರಿಗಳು, ಸಾರ್ ಕುರಿಗಳು" ತುಂಬ ಪ್ರಸಿದ್ಧವಾಗಿರುವ ಪದ್ಯ.

**ಅರವಿಂದ ನಾಡಕರ್ಣಿ** (೧೯೩೧)

ನವ್ಯ ಕಾವ್ಯ ಮಾರ್ಗದಲ್ಲಿ ಹೆಸರು ಪಡೆದ ಕವಿ. ತೆರಿಗೆತಜ್ಞರಾಗಿ ಕೆಲಸ ಮಾಡುತ್ತಿದ್ದಾರೆ. "ಬೀದಿ ಸಂಸಾರಿಗಳು' ದೈನ್ಯವನ್ನು ಬಿಟ್ಟು ಎತ್ತರದ ದನಿಯಲ್ಲಿ ಬಡವರ ಪಾಡನ್ನು ಕುರಿತು ಹೇಳುತ್ತದೆ.

**ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ** (೧೯೩೬)
ಪ್ರಸಿದ್ಧ ನವ್ಯ ಕವಿ ಮತ್ತು ವಿಮರ್ಶಕ. ಈಗ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ರೀಡರ್ ಆಗಿದ್ದಾರೆ. ಭಟ್ಟರ ಒಟ್ಟಾರೆ ಕಾವ್ಯ ಧೋರಣೆಗಿಂತ ಭಿನ್ನವಾಗಿರುವ ಎರಡು ಒಳ್ಳೆಯ ಕವನಗಳು ಈ ಸಂಕಲನದಲ್ಲಿವೆ.

**ವೇಣುಗೋಪಾಲ ಸೊರಬ** (೧೯೩೭)

ವೇಣುಗೋಪಾಲ ಸೊರಬರು ನವ್ಯ ಮಾರ್ಗದ ಕವಿಗಳು. ಈಗ ಕನಕಪುರದಲ್ಲಿ ಅಧ್ಯಾಪಕರಾಗಿದ್ದಾರೆ.

**ಚಂದ್ರಶೇಖರ ಕಂಬಾರ** (೧೯೩೮)

ಚಂದ್ರಶೇಖರ ಕಂಬಾರರು ಕಾವ್ಯ ರಚನೆಯ ಆರಂಭದಲ್ಲಿ ಬರೆದ ಮೂರು ಪದ್ಯಗಳು ಈ ಸಂಕಲನದಲ್ಲಿವೆ. "ಯಾರು ತಿಳಿಸ್ತೀರಿ ?" ಇತ್ತೀಚೆಗೆ ಬರೆದದ್ದು, ಅವರ ಕಾವ್ಯ ಧೋರಣೆ ಈಗ ಸ್ಪಷ್ಟವಾಗಿ ಬದಲಾಗಿದೆ. ಕಂಬಾರರು ನಾಟಕಕಾರರು, ನಿರ್ದೇಶಕರಾಗಿಯೂ ಪ್ರಸಿದ್ಧರು.

**ಎಚ್. ಜಿ. ಸಣ್ಣಗುಡ್ಡಯ್ಯ** (೧೯೩೫)
ನಿರ್ದಿಷ್ಟವಾದ, ಜನಪರವಾದ ಕಾವ್ಯಧೋರಣೆ ಮತ್ತು ಸಾಮಾಜಿಕ ದೃಷ್ಟಿಕೋನವನ್ನು ಉಳ್ಳ ಕವಿ. ಸಣ್ಣಗುಡ್ಡಯ್ಯನವರು ಒಳ್ಳೆಯ ವಿಮರ್ಶಕರೂ ಹೌದು. ಈಗ ತುಮಕೂರಿನ ಸರ್ಕಾರಿ ಕಲಾ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದಾರೆ.

**ಬುದ್ದಣ್ಣ ಹಿಂಗಮಿರೆ**
ಬುದ್ದಣ್ಣ ಹಿಂಗಮಿರೆ ಎಡಪಂಥೀಯ ವಿಚಾರಧಾರೆಯುಳ್ಳ ಕವಿ. "ಶಬ್ದ, ರಕ್ತ ಮತ್ತು ಮಾಂಸ" ಶೋಷಿತರ ನಿರ್ಧಾರವನ್ನು ಸುಂದರವಾಗಿ ನಿರೂಪಿಸುತ್ತದೆ. "ಕೆಂಪು ದೀವಟಿಗಿ ಉರಿದಾವೊ" ಜನಪದ ಮಟ್ಟನಲ್ಲಿದೆ.

**ಭುಜೇಂದ್ರ ಮಹೀಶವಾಡಿ**

ಸಂಜಯಗಾಂಧಿ ನಿಧನದ ನಂತರದ ರಾಜಕೀಯ ಸನ್ನಿವೇಶದಲ್ಲಿ ಮಹೀಶವಾಡಿಯವರು ಬರೆದ "ರಕ್ತ ಸರೋವರದ ಕೆಂದಾವರೆ" ಈ ಸಂಕಲನದಲ್ಲಿ ಸೇರಿದೆ. ಈಗ ಅವರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಜೈನವಿಭಾಗದಲ್ಲಿ ರೀಡರ್ ಆಗಿದ್ದಾರೆ.

**ವೀ. ಚಿಕ್ಕವೀರಯ್ಯ** (೧೯೩೦)

ಎಡಪಂಥೀಯ ಸಾಮಾಜಿಕ ಮತ್ತು ರಾಜಕೀಯ ಧೋರಣೆಯನ್ನುಳ್ಳ ಕವಿ. ಸತ್ವದಲ್ಲೂ ಒಳ್ಳೆಯ ಕವನಗಳನ್ನು ನೀಡಿರುವ ಚಿಕ್ಕವೀರಯ್ಯನವರು ಅಷ್ಟಾಗಿ ವಿಮರ್ಶಕರ ಕಣ್ಣಿಗೆ ಬಿದ್ದಿಲ್ಲ. ಅವರು ತುಮಕೂರಿನ ರಾಜಕೀಯ ಕ್ಷೇತ್ರದಲ್ಲಿ ಪರಿಚಿತರು, ಹಿಂದೆ ಅದರ ಪುರಸಭಾಧ್ಯಕ್ಷರಾಗಿದ್ದರು. 'ವೀಚಿ' ಅವರ ಕಾವ್ಯನಾಮ.

**ಬಿ. ಆರ್. ಲಕ್ಷ್ಮಣರಾವ್** (೧೯೪೬)

ನವ್ಯಕಾವ್ಯದ ಏರುದಿನಗಳಲ್ಲಿ ಬಿ. ಆರ್. ಲಕ್ಷ್ಮಣರಾವ್ ಪ್ರಸಿದ್ಧಿಗೆ ಬಂದರು. "ನುಣ್ಣುಹುಳ" ಪುಟ್ಟ ಒಳ್ಳೆಯ ಕವನ.

**ದೊಡ್ಡರಂಗೇಗೌಡ**

ದೊಡ್ಡರಂಗೇಗೌಡರು ಕವನ ಮತ್ತು ಹಾಡುಗಳೆರಡರಲ್ಲೂ ಪ್ರಸಿದ್ಧರು. ಚಲನಚಿತ್ರ ಸಾಹಿತಿಯೂ ಹೌದು. ಈಗ ಬೆಂಗಳೂರಿನ ಎಸ್. ಎಲ್. ಎನ್. ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಎಚ್. ಎಸ್. ವೆಂಕಟೇಶಮೂರ್ತಿ** (೧೯೪೪)

ವೆಂಕಟೇಶಮೂರ್ತಿಯವರು ಐದು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ನವ್ಯಮಾರ್ಗದ ಗಮನಾರ್ಹ ಕವಿಗಳಲ್ಲಿ ಒಬ್ಬರು. ಈಗ ಬೆಂಗಳೂರಿನ ಸೈಂಟ್ ಜೋಸೆಫ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಎಂ. ಎನ್. ಜೈಪ್ರಕಾಶ್** (೧೯೫೨)

ನವ್ಯ ಮಾರ್ಗದ ಕವಿ ಮತ್ತು ಕಥೆಗಾರ. ಈಗ ದ. ಕ. ಜಿಲ್ಲೆಯ ಶಿರ್ವದ ಸುಂದರ ರಾಮಶೆಟ್ಟಿ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾರೆ. "ಅರಣ್ಯಗೀತೆ" ತುಂಬ ಅರ್ಥವಂತಿಕೆಯಿಂದ ಕೂಡಿದ ಕವನ.

**ಸಿ. ವೀರಣ್ಣ** (೧೯೪೩)

ಈ ಸಂಕಲನದ ಸಂಪಾದಕರು. ತುರ್ತುಪರಿಸ್ಥಿತಿ ಕಾಲದಲ್ಲಿ ವೀರಣ್ಣ ಅವರ ಮೊದಲ ಕವನ ಸಂಕಲನ "ಮೂಡಲ ದನಿ" ಪ್ರಕಟವಾಯಿತು. ಅದು ಆ ಅವಧಿಯಲ್ಲಿ ಪ್ರಕಟವಾದ ಕನ್ನಡದ ಮೊದಲ ಬಂಡಾಯಪರ ಸಂಕಲನವೂ ಹೌದು. "ನರಗುಂದ ಬಂಧುಗಳು" ಇತ್ತೀಚಿನ ರೈತ ಚಳವಳಿ ಸಮಯದಲ್ಲಿ ಬರೆದದ್ದು. ಈಗ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಅಧ್ಯಾಪಕರು.

**ರಮಜಾನ ದರ್ಗಾ** (೧೯೬೧)

ಶೋಷಿತರ ಪರವಾದ ನಿಲುವಿನಿಂದ ಕಾವ್ಯ ರಚಿಸುತ್ತಿರುವ ಗಮನಾರ್ಹ ಕವಿ. ಒಳ್ಳೆಯ ಚಿಂತಕರು. "ಪ್ರಣಾಳಿಕೆ" ಸುಂದರವಾದ ಅರ್ಥವತ್ತಾದ ಪುಟ್ಟ ಕವನ. "ಮೇಡಂ ನೀವೇ ಹೇಳಿ" ಕಾವ್ಯದ ಧೋರಣೆ ಏನಿರಬೇಕು ಎಂಬುದನ್ನು ಸ್ಪಷ್ಟಪಡಿಸುತ್ತದೆ.

**ಎಸ್. ಎಸ್. ಹಿರೇಮಠ**

ಕಾವ್ಯ, ಸಮಾಜ, ಬದುಕು ಇವುಗಳ ಬಗ್ಗೆ ನಿರ್ದಿಷ್ಟವಾದ ವೈಚಾರಿಕ ನಿಲುವುಳ್ಳ ಕವಿ. ಬಂಡಾಯ ಸಾಹಿತ್ಯ ಚಳವಳಿಯಲ್ಲಿ ಆಸಕ್ತರು. ವೃತ್ತಿಯಲ್ಲಿ ಹಿರೇಮಠ ಅಧ್ಯಾಪಕರು.

**ಕುಂ. ವೀರಭದ್ರಪ್ಪ**

ಪ್ರಸಿದ್ಧ ಕತೆಗಾರ, ಕಾದಂಬರಿಕಾರ ಮತ್ತು ಕವಿ. ಈಗ ಆಂಧ್ರಪ್ರದೇಶದ ಕರ್ನೂಲಿನ ಮಂದವಾಗಿಲಿನಲ್ಲಿ ಶಾಲಾ ಮುಖ್ಯೋಪಾಧ್ಯಾಯರು. ಇವರ ಸಾಹಿತ್ಯಕ ಧೋರಣೆ ಬಂಡಾಯಪರವಾದದ್ದು. ದಿವಿಸೀಮೆ ಪ್ರಚಂಡ ಮಾರುತಕ್ಕೊಳಗಾದಾಗ ಬರೆದ ಪದ್ಯ "ದಿವಿಸೀಮೆಯ ಹಾಡು."

**ಚಿ. ಶ್ರೀನಿವಾಸರಾಜು** (೧೯೪೩)

ಛಸನಾಲ ಗಣಿ ದುರಂತವನ್ನು ಕುರಿತು ಇವರು ಬರೆದ ಪದ್ಯ ಈ ಸಂಕಲನದಲ್ಲಿದೆ. "ಐದು ಮೂಕನಾಟಕಗಳು" ಪ್ರಕಟವಾಗಿದೆ. ವಿದೇಶಿ ಕತೆಗಳನ್ನು ಅನುವಾದಿಸಿದ್ದಾರೆ. ಶ್ರೀನಿವಾಸರಾಜು ಈಗ ಬೆಂಗಳೂರಿನ ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಜಗದೀಶ ಮಂಗಳೂರಮಠ** (೧೯೪೮)

ಕಾವ್ಯ ಜೀವಪರವಾಗಿರಬೇಕು ಎಂಬ ಧೋರಣೆಯುಳ್ಳ ಕವಿ. "ಸ್ವಗತ" ಇದನ್ನು

ಸ್ಪಷ್ಟಪಡಿಸುತ್ತದೆ. ಧಾರವಾಡದ ಪ್ರಗತಿಪರ ಸಾಹಿತ್ಯಕ, ಸಾಮಾಜಿಕ ಚಳವಳಿಗಳಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಈಗ ಹಿರೇಕೆರೂರಿನಲ್ಲಿ ಉದ್ಯೋಗ ಮಾಡುತ್ತಿದ್ದಾರೆ.

**ವಿಜಯಶ್ರೀ ಸಬರದ** (೧೯೫೭)

ಹೊಸ ಧೋರಣೆಯ ಕವಯಿತ್ರಿಯರಲ್ಲಿ ಒಬ್ಬರು, ಕವನಸಂಕಲನ ಮತ್ತು ಇತರ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಬೀದರ್‌ನ ಅಕ್ಕಮಹಾದೇವಿ ಮಹಿಳಾ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ. "ಜ್ವಲಂತ" ಶೋಷಿತ ವರ್ಗಗಳಲ್ಲಿ ಒಂದಾದ ಮಹಿಳಾ ಸಮೂಹದ ಎಚ್ಚರಗೊಳ್ಳುವ ನಿರ್ಧಾರವನ್ನು ಹೇಳುತ್ತದೆ.

**ಹೊ. ಮ. ಪಂಡಿತಾರಾಧ್ಯ**

ಸಾಮಾಜಿಕ ಕಾಳಜಿಯನ್ನು ಕಾವ್ಯದಲ್ಲೂ ಮೂಡಿಸುವ ಗಮನಾರ್ಹ ಕವಿ, ವೃತ್ತಿಯಲ್ಲಿ ವಕೀಲರಾಗಿದ್ದಾರೆ. "ಉರಿಯುತ್ತಿರುವ ಜನ ನಾವು" ಶೋಷಿತರ ನಿರ್ಧಾರವನ್ನು ಚಿತ್ರಿಸುತ್ತದೆ.

**ಬಿ. ರಾಜಣ್ಣ** (೧೯೪೭)

ಜನಪರವಾದ ಸಾಹಿತ್ಯ ಮತ್ತು ಎಡಪಂಥೀಯ ವಿಚಾರಧಾರೆಯಲ್ಲಿ ಆಸಕ್ತರಾಗಿರುವ ಬಿ. ರಾಜಣ್ಣ ಅವರು ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯಲ್ಲಿ ಫೋರ್‌ಮನ್ ಆಗಿದ್ದಾರೆ. ಗ್ರಾಮೀಣ ಶೋಷಣೆಯ ಒಂದು ಮುಖವನ್ನು "ಕೃಷ್ಣಪುರಾಣ" ಚುರುಕಾದ ಭಾಷೆಯಲ್ಲಿ ವಿಶದಪಡಿಸುತ್ತದೆ.

**ಜಿ. ಎಸ್. ಉಬರಡ್ಕ** (೧೯೪೪)

ಸಾಮಾಜಿಕ ಅನ್ಯಾಯಗಳ ವಿರುದ್ಧ ಸಿಡಿದೇಳುವ ಪ್ರವೃತ್ತಿ ಗಣಪತಿ ಸುಬ್ರಹ್ಮಣ್ಯ ಉಬರಡ್ಕ ಅವರದು. ದ. ಕ. ಜಿಲ್ಲೆಯ ಸುಳ್ಯತಾಲ್ಲೂಕಿನ ನೆಲ್ಲೂರು ಕೆಮ್ರಾಜೆ ಗ್ರಾಮಪಂಚಾಯ್ತಿಗೆ ಈಗ ಅವರು ಅಧ್ಯಕ್ಷರಾಗಿದ್ದಾರೆ.

**ಚಂದ್ರಶೇಖರ ತಾಳ್ಯ** (೧೯೪೯)

ತತ್ವಶಾಸ್ತ್ರದ ಅಧ್ಯಾಪಕರಾಗಿರುವ ಚಂದ್ರಶೇಖರ ತಾಳ್ಯರ ವೈಚಾರಿಕ ಧೋರಣೆ ಮಾನವ ಧರ್ಮದಲ್ಲಿ ನಂಬಿಕೆ ಇಟ್ಟದ್ದು. ಅವರ ಕತೆ, ಲೇಖನಗಳು ಹಲವುಕಡೆ ಪ್ರಕಟವಾಗಿವೆ.

**ಹೊರೆಯಾಲ ದೊರೆಸ್ವಾಮಿ**

ಪ್ರಗತಿಪರ ಮನೋಭಾವದ ಕತೆಗಾರ ಮತ್ತು ಕವಿ. 'ಕೊಳೆ' ಎಂಬ ಅತ್ಯಂತ ಶಕ್ತಿಯುತವಾದ ಕಾದಂಬರಿ ಪ್ರಕಟಿಸಿದ್ದಾರೆ. "ಈ ಚರಿತ್ರೆ ನಮ್ಮದಲ್ಲ" ನಮ್ಮ ಇದುವರೆಗಿನ ಇತಿಹಾಸ ಬರವಣಿಗೆಯನ್ನು ನಿರಾಕರಿಸುತ್ತದೆ.

**ಸರಜೂ ಕಾಟಕರ** (೧೯೫೩)

ಕಾವ್ಯರಚನೆ ಮತ್ತು ಪತ್ರಿಕಾ ಬರವಣಿಗೆ ಎರಡರಲ್ಲೂ ಜನಪರವಾದ ನಿಲುವನ್ನು ಸರಜೂ ಕಾಟಕರ ತಳೆದಿದ್ದಾರೆ. ಈಗ 'ಕನ್ನಡಪ್ರಭ' ದೈನಿಕದ ವರದಿಗಾರರಾಗಿದ್ದಾರೆ.

**ಶೂದ್ರ ಶ್ರೀನಿವಾಸ್**

'ಶೂದ್ರ' ಮಾಸಪತ್ರಿಕೆಯ ಸಂಪಾದಕರು. ಕತೆ, ಲೇಖನಗಳನ್ನೂ ಬರೆದಿದ್ದಾರೆ. ಈಗ ಬೆಂಗಳೂರಿನ ರಾಷ್ಟ್ರೀಯ ವಿದ್ಯಾಲಯ ಬಾಲಕರ ಪ್ರೌಢಶಾಲೆಯಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

**ಸುಂದರ ನಾಡಕರ್ಣಿ** (೧೯೪೦)

ಸುಂದರ ವಿಠ್ಠಲ ನಾಡಕರ್ಣಿಯವರು ಈಗ ಗುಜರಾತಿನ ಆಣಂದದ ಕಲಾ ಕಾಲೇಜಿನಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದಾರೆ. ಅವರು ಉತ್ತಮ ಕಾದಂಬರಿಕಾರರೂ ಹೌದು. "ಆಳು" ಅವನ ಇಡೀ ಜೀತದಾಳು ಸಮೂಹದ ಸ್ಥಿತಿಯನ್ನು ಧ್ವನಿಸುತ್ತದೆ.

**ಯು. ಬಿ. ಫಕೀರಗೌಡ**

ಹೊಸ ಧೋರಣೆಯ ಕವಿ. "ಜೀತ-ಗೀತ" ಹೊಸ ಬದುಕಿನ ಆಶಯವನ್ನು ಸೂಚಿಸುವ ಕವನ.

**ಮಹಾಂತೇಶ** (೧೯೫೯)

ಸಾಮಾಜಿಕ ಕಾಳಜಿಯು ಸಾಹಿತ್ಯದಲ್ಲೂ ಧ್ವನಿತವಾಗಬೇಕು ಎನ್ನುವ ನಿಲುವಿನ ಕವಿ "ನನ್ನವರು" ಶೋಷಿತರ ಪರಿಸ್ಥಿತಿಯನ್ನು ವರ್ಣಿಸುತ್ತದೆ. ಇವರ ನಿಜ ಹೆಸರು ವಿಶ್ವನಾಥ ವಂಶಾಕೃತ ಮಠ.

**ಬಾಬಾಜಾನ್ ಅತ್ತಾರ**

ಹುಬ್ಬಳ್ಳಿಯ ಕಾರ್ಮಿಕ ನಾಯಕ, ಎಡಪಂಥೀಯ ಧೋರಣೆಯುಳ್ಳ ಕವಿ.

"ಭುಂಗಾ" ಕಾರ್ಮಿಕರು ಸಾಗಬೇಕಾದ ದಿಕ್ಕನ್ನು ಸೂಚಿಸುತ್ತಲೇ, "ದುಡಿಯುವವರದ ಒಂದ ಜಾತಿ" ಆಗಬೇಕಾದರೆ ಅಗತ್ಯವಾದ ಹಿನ್ನೆಲೆಯನ್ನೂ ಕುರಿತು ಹೇಳುತ್ತದೆ.

### ಶೈಲ ಜಗದೀಶ್‌ಕೊಪ್ಪ

ಸಾಮಾಜಿಕ ಎಚ್ಚರವನ್ನುಳ್ಳ ಕವಯಿತ್ರಿ. "ನಾವು ಬರೆಯುತ್ತೇವೆ" ದಬ್ಬಾಳಿಕೆಗೊಳಗಾದ ಮಹಿಳೆಯರು ದನಿ ಎತ್ತುವ ನಿರ್ಧಾರ ಕೈಗೊಳ್ಳುವುದನ್ನು ಚೆನ್ನಾಗಿ ರೂಪಿಸುತ್ತದೆ.

### ಕೆ. ಕೇಶವಶರ್ಮ

ಕೇಶವಶರ್ಮರ "ಕೋಲಾಗಬೇಕು" ಹೊಸ ಮಟ್ಟಿನ ಪದ್ಯ. ಶೋಷಿತರು ಎಚ್ಚರಗೊಳ್ಳುವ ಕ್ರಿಯೆಯ ಬಗ್ಗೆ ಕೇಶವಶರ್ಮರಿಗೆ ಸ್ಪಷ್ಟವಾದ ಕಲ್ಪನೆಯಿದೆ.

### ಹಣಮಂತ ತೆಗ್ಗಳ್ಳಿ

ಹಣಮಂತ ತೆಗ್ಗಳ್ಳಿ ಅವರು ಸಕ್ಕರೆಕಾರ್ಖಾನೆ ಕಾರ್ಮಿಕ ಮತ್ತು ಕಾರ್ಮಿಕ ನಾಯಕ. ಸಂಘದ ಪ್ರಧಾನ ಕಾರ್ಯದರ್ಶಿಯಾಗಿ ಮತ್ತು ಸಕ್ಕರೆ ಕಾರ್ಖಾನೆಗಳ ಕಾರ್ಮಿಕರ ಫೆಡರೇಷನ್ನಿನ ಉಪಾಧ್ಯಕ್ಷರಾಗಿ ದುಡಿದ ಅವರಿಗೆ ಕಾರ್ಮಿಕರ ಸಮಸ್ಯೆಗಳ ಸ್ಪಷ್ಟ ಅರಿವು ಇದೆ. ಜಮಖಂಡಿಯಲ್ಲಿ ಪತ್ರಿಕೆಯೊಂದನ್ನು ಅವರು ಸಂಪಾದಿಸುತ್ತಿದ್ದಾರೆ.

### ಶಿವಪ್ರಕಾಶ್

ಎಚ್. ಎಸ್. ಶಿವಪ್ರಕಾಶರು, ಸಾಹಿತ್ಯ ಮತ್ತು ಬದುಕಿನ ಬಗ್ಗೆ ವೈಚಾರಿಕ ನಿಲುವನ್ನು ತಳೆದವರು. ಈಗ ಅಧ್ಯಾಪಕ ವೃತ್ತಿಯಲ್ಲಿದ್ದಾರೆ.

### ಎಂ. ಮುಕುಂದ

ಸಾಮಾಜಿಕ ಬದಲಾವಣೆಯಲ್ಲಿ ಆಸಕ್ತರಾಗಿರುವ ಎಂ. ಮುಕುಂದ ಅವರು ಲೋಹಿಯಾ ವಿಚಾರಧಾರೆಯಿಂದ ಆಕರ್ಷಿತರಾಗಿದ್ದಾರೆ. ರಾಜ್ಯಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ಅವರು ಈಗ ಚಿತ್ರದುರ್ಗದಲ್ಲಿ ಸರ್ಕಾರದ ಕೃಷಿ ಇಲಾಖೆ ಕೆಲಸ ಮಾಡುತ್ತಿದ್ದಾರೆ.

### ಡಿ. ಎಸ್. ನಾಗಭೂಷಣ

ಡಿ. ಎಸ್. ನಾಗಭೂಷಣ ಅವರು ಈಗ ಭದ್ರಾವತಿ ಆಕಾಶವಾಣಿ ಕೇಂದ್ರದಲ್ಲಿ ಕಾರ್ಯಕ್ರಮ ನಿರ್ವಹಣಾಧಿಕಾರಿಯಾಗಿ ಕೆಲಸ ಮಾಡುತ್ತಿದ್ದಾರೆ. ಲೋಹಿಯಾ ವಿಚಾರಗಳು ಅವರ ಮೇಲೆ ಪ್ರಭಾವ ಬೀರಿವೆ. ಕತೆಗಳು ಹಾಗೂ ಲೇಖನಗಳನ್ನೂ ಬರೆದಿದ್ದಾರೆ. ಮೊರಾದಾಬಾದ್‌ನ ಕೋಮುಗಲಭೆ ನಂತರ ಬರೆದ ಪದ್ಯ ಈ ಸಂಕಲನದಲ್ಲಿದೆ.

### ಬಿ. ಆರ್. ಪಾಂಡುರಂಗ ರೆಡ್ಡಿ

ಬೆಂಗಳೂರಿನ ಸರ್ಕಾರಿ ಉದ್ಯಮ ಕಾರ್ಖಾನೆಯಲ್ಲಿ ಕಾರ್ಮಿಕರಾಗಿರುವ ಪಾಂಡುರಂಗ ರೆಡ್ಡಿ ಸಾಹಿತ್ಯದಲ್ಲೂ ಆಸ್ತಕರು, "ದುಡಿಯುವ ಹೆಣ್ಣೆಂಬ" ಕನ್ನಡ ಕಾವ್ಯಕ್ಕೆ ವಿನೂತನವಾದ ವಸ್ತುವನ್ನು ಕುರಿತ ಪದ್ಯ. ಪಾಂಡುರಂಗ ರೆಡ್ಡಿ ನಮ್ಮ ವಿಮರ್ಶಕರ ಕಣ್ಣಿಗೆ ಇನ್ನೂ ಬೀಳಬೇಕಾಗಿರುವ ಸತ್ವಶಾಲಿ ಕವಿ.

### ಮಹೇಂದ್ರ ಪ್ರಸಾದ್

ಸಾಮಾಜಿಕ ಬದ್ಧತೆಯಲ್ಲಿ ನಂಬಿಕೆ ಇಟ್ಟಿರುವ ಕವಿ. "ದಣಿಗೀತೆ" ಮತ್ತು "ಕ್ರಾಂತಿ ಮಾತು" ಪದ್ಯಗಳು ಹೊಸಧೋರಣೆಯ ಕವಿಗಳ ಪೈಕಿ ಭಾಷೆಯನ್ನು ಶಕ್ತಿಶಾಲಿಯಾಗಿ ಬಳಸಬಲ್ಲವರಲ್ಲಿ ಇವರೊಬ್ಬರು ಎಂಬದನ್ನು ಸ್ಪಷ್ಟಪಡಿಸುತ್ತದೆ.

### ಗಂಗಾಧರ ಮೂರ್ತಿ

ಪ್ರಗತಿಪರ ವೈಚಾರಿಕ ಧೋರಣೆಯುಳ್ಳ ಗಂಗಾಧರಮೂರ್ತಿ ಅವುಗಳನ್ನು ಆಧರಿಸುವ ಹೋರಾಟಗಳನ್ನು ಬೆಂಬಲಿಸುತ್ತಾರೆ. ಈಗ ಅವರು ಗೌರಿಬಿದನೂರಿನ ಕಾಲೇಜಿನಲ್ಲಿ ನ್ಯಾಷನಲ್ ಇಂಗ್ಲೀಷ್ ಅಧ್ಯಾಪಕರಾಗಿದ್ದಾರೆ.

### ರಂಗಾರೆಡ್ಡಿ ಕೋಡಿರಾಂಪುರ (೧೯೫೩)

ಬದುಕು, ಸಾಹಿತ್ಯಗಳ ಬಗ್ಗೆ ವೈಚಾರಿಕ ನಿಲುವನ್ನು ರಂಗಾರೆಡ್ಡಿ ತಳೆದಿದ್ದಾರೆ. ಜನಪದದ ಬಗ್ಗೆ ಚಿಂತನೆಯಲ್ಲೂ ಹೊಸಮಾರ್ಗ ಇವರದು. ಈಗ ಗೌರಿಬಿದನೂರಿನ ನ್ಯಾಷನಲ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

### ಸು. ರುದ್ರಮೂರ್ತಿ ಶಾಸ್ತ್ರಿ

ಸು. ರುದ್ರಮೂರ್ತಿ ಶಾಸ್ತ್ರಿ ಅವರು ಕಾದಂಬರಿಕಾರರು ಮತ್ತು ಕವಿಗಳು. ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ಅವರು ವೃತ್ತಿಯಲ್ಲಿ ಅಧ್ಯಾಪಕರು

**ವಿ. ಎಸ್. ಕಾಶೆಟ್ಟಿ**

ಹಾವೇರಿಯ ಎಸ್. ಎಂ. ಎಸ್. ಗರ್ಲ್ಸ್ ಹೈಸ್ಕೂಲಿನಲ್ಲಿ ಗುಮಾಸ್ತರಾಗಿರುವ ವಿ.ಎಸ್. ಕಾಶೆಟ್ಟಿ ಅವರು ಹಲವಾರು ಕಾದಂಬರಿಗಳು ಮತ್ತು ಕಥಾ ಸಂಕಲನವನ್ನು ಪ್ರಕಟಿಸಿದ್ದಾರೆ. ಜನ ಬದುಕಬೇಕು ಎಂಬ ಮಾನವೀಯ ಕಳಕಳಿ ಇವರದು.

**ಅಶೋಕ ಶೆಟ್ಟರ**

ಜನಪರವಾದ ಧೋರಣೆಯುಳ್ಳ ಗಮನಾರ್ಹ ಕವಿ. ಹುಬ್ಬಳ್ಳಿಯ ಕಾಡಸಿದ್ಧೇಶ್ವರ ಕಾಲೇಜಿನಲ್ಲಿ ಚರಿತ್ರೆ ಅಧ್ಯಾಪಕರಾಗಿದ್ದಾರೆ, ಭಾರತದಲ್ಲಿ ಸಂಭವಿಸುವ ಮೌನ ಸಾವುಗಳ ಚಿತ್ರಣವನ್ನು "ನನ್ನ ನೆಲದ ಸಾವುಗಳು" ನೀಡುತ್ತದೆ.

**ಜಯಪ್ರಕಾಶ ಮಾವಿನಕುಳಿ**

ಜಯಪ್ರಕಾಶ ಮಾವಿನಕುಳಿ ಒಂದು ಕವನ ಸಂಕಲನವನ್ನಲ್ಲದೆ ಒಂದು ಕಾದಂಬರಿಯನ್ನೂ ಪ್ರಕಟಿಸಿದ್ದಾರೆ. ಈಗ ಕುಂದಾಪುರದ ಭಂಡಾರ್‌ಕಾರ್ ಕಾಲೇಜಿನಲ್ಲಿ ಅಧ್ಯಾಪಕರು.

**ಸಿದ್ದಲಿಂಗ ದೇಸಾಯಿ**

ಸಾಮಾಜಿಕ ಎಚ್ಚರವುಳ್ಳ ಕವಿ. ಈಗ ಕರ್ನಾಟಕ ವಿಶ್ವವಿದ್ಯಾಲಯ ಪಠ್ಯಪುಸ್ತಕ ವಿಭಾಗದಲ್ಲಿ ಕೆಲಸಮಾಡುತ್ತಿದ್ದಾರೆ. ನಾಗರಿಕ ಹಕ್ಕುಗಳ ದಮನ ವಿರೋಧಿಸಿ ತುರ್ತು ಪರಿಸ್ಥಿತಿಯಲ್ಲಿ ಬರೆದ ಕವನ ಈ ಸಂಕಲನದಲ್ಲಿದೆ.

**ಬಸವರಾಜ ಸಬರದ** (೧೯೫೩)

ಪ್ರಗತಿಪರ ಸಾಹಿತ್ಯಕ ಧೋರಣೆ ಹೊಂದಿರುವ ಬಸವರಾಜ ಸಬರದ ಅವರು ನಾಟಕ, ವಿಮರ್ಶೆಗಳನ್ನೂ ಬರೆದಿದ್ದಾರೆ. ಈಗ ಬೀದರ್‌ನ ಕರ್ನಾಟಕ ಕಲೆ ವಾಣಿಜ್ಯ ಮತ್ತು ವಿಜ್ಞಾನ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

**ಪ್ರಹ್ಲಾದ ಎಸ್. ಎಲ್.** (೧೯೫೬)

ಪ್ರಗತಿಪರ ವಿಚಾರ, ಸಂಘಟನೆಗಳಲ್ಲಿ ಆಸಕ್ತರಾಗಿರುವ ಪ್ರಹ್ಲಾದ ಅಗಸನಕಟ್ಟೆ ಅವರ ವೈಚಾರಿಕ ಲೇಖನ ಮತ್ತು ಕವಿತೆಗಳು ಅಚ್ಚಾಗಿವೆ. ಈಗ ಕನ್ನಡ ಸ್ನಾತಕೋತ್ತರ ಪದವಿ ಪಡೆದು ಕೆಲಸ ಹುಡುಕುತ್ತಿದ್ದಾರೆ.

**ರುದ್ರಪ್ಪಕಾಯಿ** (೧೯೫೫)

ಎಡಪಂಥೀಯ ಚಿಂತನೆಯುಳ್ಳ ರುದ್ರಪ್ಪಕಾಯಿಯವರ ಕವನಗಳು, ಲೇಖನಗಳು ಅಲ್ಲಲ್ಲಿ ಪ್ರಕಟವಾಗಿವೆ. ಹಲವಾರು ವರ್ಷಗಳಿಂದ ವಿದ್ಯಾರ್ಥಿ ಚಳುವಳಿಯಲ್ಲಿ ಸಕ್ರಿಯ ಪಾತ್ರವಹಿಸಿದ್ದಾರೆ. ಈಗ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ತತ್ವಶಾಸ್ತ್ರದಲ್ಲಿ ಸಂಶೋಧನೆ ಮಾಡುತ್ತಿದ್ದಾರೆ.

**ಬಿದರಹಳ್ಳಿ ನರಸಿಂಹಮೂರ್ತಿ** (೧೯೫೦)

ಆದಿಮಾನವನಿಗಿದ್ದ ನಿಸರ್ಗದತ್ತ ಸುಖಕ್ಕೆ ಸಮೀಪವಾಗಿ ಬದುಕನ್ನು ಬದಲಿಸಲು ಹೆಣಗುವ ಆಶಯ ಬಿದರಹಳ್ಳಿ ನರಸಿಂಹಮೂರ್ತಿ ಅವರದು. ಈಗ ಶಿವಮೊಗ್ಗದಲ್ಲಿ ಕಾಲೇಜು ಅಧ್ಯಾಪಕರಾಗಿದ್ದಾರೆ. "ಕಣ್ಣಾರೆ ಕಂಡು ಧನ್ಯನಾದೆ" ಪ್ರಸಿದ್ಧ ಉಡುಪಿಯ ಮಠದ ವಿರೋಧಾಭಾಸಗಳನ್ನು ಕುರಿತದ್ದು.

**ನಿರ್ಮಲ. ಎಸ್. ರೆಡ್ಡಿ**

ಮಹಿಳಾ ವಿಮೋಚನೆ ಚಳುವಳಿಯಲ್ಲಿ ಸಕ್ರಿಯವಾಗಿ ಪಾತ್ರ ವಹಿಸುತ್ತಿರುವ ನಿರ್ಮಲ ಪ್ರಗತಿಪರ ಆಲೋಚನೆಗಳನ್ನು ಹೊಂದಿದ್ದಾರೆ. ಈಗ ವಿಜಯ ಬ್ಯಾಂಕ್‌ನಲ್ಲಿ ಉದ್ಯೋಗ ಮಾಡುತ್ತಿದ್ದಾರೆ.

**ಎಂ. ವೆಂಕಟಸ್ವಾಮಿ**

ಪ್ರಗತಿಪರ ದಲಿತ ಕವಿ. ಬೆಂಗಳೂರಿನಲ್ಲಿ ಭೂಗರ್ಭಶಾಸ್ತ್ರದ ಸ್ನಾತಕೋತ್ತರ ಪದವಿ ಕಲಿಯುತ್ತಿದ್ದಾರೆ. "ಶತವರ್ಷಗಳ ಗತವೈಭವ" ಕೋಲಾರ ಚಿನ್ನದ ಗಣಿಯ ಶತಮಾನೋತ್ಸವ ಸಂದರ್ಭದಲ್ಲಿ ಬರೆದ, ಶೋಷಿತ ಕಾರ್ಮಿಕರ ಪರವಾದ ಪದ್ಯ.

**ಶ್ಯಾಮಸುಂದರ ಬಿದರಕುಂದಿ**

ಉದಯೋನ್ಮುಖ ಕವಿಯಾಗಿರುವ ಶ್ಯಾಮಸುಂದರ ಬಿದರಕುಂದಿಯವರ ಕಾವ್ಯ ಧೋರಣೆ ಜನಪರವಾದದ್ದು. "ದುಡಿಮೆಯವರು" ಜನಪದ ಮಟ್ಟಿನಲ್ಲಿ ಬರೆದ ಹಾಡು. ಈಗ ಇವರು ಗದಗ್ ಕಾಮರ್ಸ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

## ಪಿ. ವಿ. ಅಜಿತಾ

'ಸಾಧನೆ' ಪತ್ರಿಕೆಯಲ್ಲಿ ಅಜಿತಾ ಅವರ 'ಗಣಿ' ಪ್ರಕಟವಾಗಿದೆ. ಶತಮಾನಗಳಿಂದ ಹಲವಾರು ಮುಖಗಳಲ್ಲಿ ನಡೆದ ಹೆಣ್ಣಿನ ಶೋಷಣೆಯನ್ನು ಚಿತ್ರಿಸುತ್ತದೆ. ಹೆಣ್ಣಿನ ಶೋಷಣೆ ಕುರಿತಂತೆ, ಬಹುಶಃ ಇದು ಇತ್ತೀಚಿನ ವರ್ಷಗಳಲ್ಲಿ ಬಂದ ಮೊದಲ ಪದ್ಯ.

## ಚೊಕ್ಕಮೂರ್ತಿ ಪಾಟೀಲ

ಸಾಮಾಜಿಕ ಬದಲಾವಣೆಯ ಪರವಾದ ನಿಲುವನ್ನು ತಳೆದಿರುವ ಚೊಕ್ಕಮೂರ್ತಿ ಪಾಟೀಲ ಈಗ ಧಾರವಾಡದಲ್ಲಿದ್ದಾರೆ.

## ಚಾರುಕೀರ್ತಿ

"ನುಗ್ಗಿ ಮುಂದೆ" ಕವನ ಐಕ್ಯರಂಗದಲ್ಲಿ ಮೊದಲ ಬಾರಿಗೆ ಪ್ರಕಟವಾಯಿತು. ಶೋಷಿತರೆಲ್ಲ ಒಂದಾಗಿ ನಡೆಯಬೇಕೆಂದು ಕರೆನೀಡುವ "ಮಾರ್ಚ್‌ಸಾಂಗ್" ಇದು.

ಪ್ರತಿಭಟನೆ ಕಾವ್ಯ ಎಂದರೆ ಕೇವಲ ಧಿಕ್ಕಾರ ಹಾಕುವ ಪದ್ಯಗಳು ಮಾತ್ರ ಅಲ್ಲ. ನೊಂದವರ, ಶೋಷಿತರ ಬದುಕಿನ ಬಗ್ಗೆ ಕಣ್ಣುಹಾಯಿಸುವುದು ಕೂಡ ವ್ಯವಸ್ಥೆಯ ಬಗ್ಗೆ ಪ್ರತಿಭಟನೆ ತೋರಿಸುವುದಕ್ಕೆ ಪ್ರೇರಣೆ ನೀಡಬಹುದು. ಆದ್ದರಿಂದ ಒಟ್ಟಾರೆ ವ್ಯವಸ್ಥೆಯ ದೋಷಗಳಿಗೆ ಕನ್ನಡಿ ಹಿಡಿಯುವ, ಜೀವಪರವಾದ ಕವನಗಳೂ ಇಲ್ಲಿ ಹೆಚ್ಚು ಭಾಗವನ್ನು ಪಡೆದಿದೆ. ಭಾರತೀಯ ಭಾಷೆಗಳ ಅಷ್ಟೇಕೆ ವಿಶ್ವದ ಎಲ್ಲ ಭಾಷೆಗಳ ಸಾಹಿತ್ಯಗಳಲ್ಲೂ ಪ್ರತಿಭಟನೆಯ ಅಂಶ ಇದ್ದೇ ಇರುತ್ತದೆಯಾದರೂ ಅದನ್ನೇ ಸೂತ್ರವಾಗಿಟ್ಟುಕೊಂಡ ಸಮಗ್ರ ಸಂಕಲನ, ನನಗೆ ತಿಳಿದಮಟ್ಟಿಗೆ ಭಾರತೀಯ ಭಾಷೆಗಳಲ್ಲಿ ಇದೇ ಮೊದಲು. ಬೇರೆ ಭಾರತೀಯ ಭಾಷೆಗಳಲ್ಲೂ ಇಂಥದೊಂದು ಸಂಕಲನ ಇರುವುದಾದರೆ ಅಥವಾ ಬರುವುದಾದರೆ ತುಂಬ ಸ್ವಾಗತಾರ್ಹ. ಕನ್ನಡದಲ್ಲಿ ಬಂಡಾಯ, ದಲಿತ ಸಾಹಿತ್ಯ ಚಳುವಳಿಗಳು ಬೆಳೆಯುತ್ತಿರುವ ಈ ಸಂದರ್ಭದಲ್ಲಿ ಇಂಥದೊಂದು ಸಂಕಲನ ಎಷ್ಟು ಔಚಿತ್ಯಪೂರ್ಣ ಮತ್ತು ಅರ್ಥಪೂರ್ಣವಾದದ್ದು ಎನ್ನುವುದು ಎಲ್ಲರಿಗೂ ವೇದ್ಯ.

**ಹಂಪ. ನಾಗರಾಜಯ್ಯ**